# ಮನೋನಂದನ

ಮನೋದೈಹಿಕ ಬೇನೆಗಳನ್ನು ಕುರಿತು
ರೋಗಿಗಳಿಂದ ಕಲಿತ ಪಾಠಗಳು

ಎಂ. ಶಿವರಾಂ, ಬಿ.ಎ.,ಎಂ.ಬಿ.ಬಿ.ಎಸ್.

ಅವರಿಂದ

ಶ್ರೀ 'ರಾ.ಶಿ.' ಅವರ ಮುನ್ನುಡಿಯೊಡನೆ



ರಾಜಲಕ್ಷ್ಮೀ ಪ್ರಕಾಶನ
ಬಳೇಪೇಟೆ ಚೌಕ ಬೆಂಗಳೂರು-560053

ಮೊದಲನೆಯ ಮುದ್ರಣ : ನವರಾತ್ರಿ, ೧೯೬೫
ಎರಡನೆಯ ಮುದ್ರಣ : ೧೯೭೬





ಅಧಿಕೃತ ಮಾರಾಟಗಾರರು :
ಗೀತಾ ಏಜನ್ಸೀಸ್
ಸಗಟು ಪುಸ್ತಕ ವ್ಯಾಪಾರಿಗಳು
ಬಳೇಪೇಟೆ ಚೌಕ, ಬೆಂಗಳೂರು-೫೬೦೦೫೩
ದೂರವಾಣಿ : 24226





ಹನ್ನೆರಡು ರೂಪಾಯಿ

ಮುದ್ರಕರು :
ಶೇಷನಾರಾಯಣ
ವಿಕಾಸ ಮುದ್ರಣ, ಸೌತ್ ಎಂಡ್ ರಸ್ತೆ
ಬೆಂಗಳೂರು 560004

# ಮುನ್ನುಡಿ

ಹಿಂದೊಮ್ಮೆ ನಾನು ಕೆಣಕಾಡಿದಾಗ ಮಾನ್ಯ ಮಿತ್ರ ಡಾಕ್ಟರ್ ಎಂ. ಶಿವರಾಂ ಅವರು ನನ್ನ ಪುಸ್ತಕಕ್ಕೆ ಮುನ್ನುಡಿಯೊಂದನ್ನು ಬರೆದುಕೊಟ್ಟರು. ಅದೇ ಗೋಳು ತಿಪ್ಪರಲಾಗ ಹಾಕಿಕೊಂಡು ಹಿಂತಿರುಗಿ ಬಂದು ನನ್ನನ್ನು ಬಡಿಯುತ್ತೆ ಎಂದು ಕನಸಿನಲ್ಲೂ ಅಂದುಕೊಂಡಿರಲಿಲ್ಲ. ಡಾಕ್ಟರಿಗೆ ತಮ್ಮ ಕೆಲಸದ ಮೇಲೆ ಅಮಿತ ಪ್ರೇಮ. ಆರಾಮವಾಗಿ ಕೂತಲ್ಲಿಂದಲೇ ಕೆಲಸ ಮಾಡುವವರನ್ನು ಎಷ್ಟು ಕಾಲ ಅಂದರೆ ಅಷ್ಟು ಕಾಲ ಉತ್ಸಾಹದಿಂದ ನೋಡುತ್ತಾರೆ. ಅಂತಹವರು ಬೆನ್ನು ಬಗ್ಗಿಸಿ ಕೂತು, ಯೋಚಿಸಿ ಪುಸ್ತಕ ಬರೆದು, 'ಮುನ್ನುಡಿ ಬರೆದುಕೊಡು' ಎಂದು ಕೇಳುವ ಸಾಧ್ಯತೆಯೇ ಇಲ್ಲ ಎಂದುಕೊಂಡಿದ್ದೆ. ಏನಾಯ್ತೋ ಪಾಪ, ಅವರಿಗೆ! ಪುಸ್ತಕವನ್ನು ಬರೆದು ತಂದೇಬಿಟ್ಟರು. " ಎಲ್ಲಿ! ಋಣ ತೀರಿಸು! ಮುನ್ನುಡಿ ಲಾವ್!" ಎಂದರು.

ಪುಸ್ತಕವನ್ನು ಓದಿದೆ. ನನ್ನ ಹಲವಾರು ಮಾತುಗಳನ್ನು ಅವರು ತಮ್ಮ ರೋಗಿಗಳ ಕತೆಗೆ ಬಳಸಿಕೊಂಡಿದ್ದಾರೆ, ಎನ್ನಿಸಿತು. "ಆದರೂ ಅದೇ ಮಾತುಗಳಿಗೆ ಬೇರೆ ಅರ್ಥ ಬರುವಂತೆ ಉಪಯೋಗಿಸಿಕೊಂಡಿದ್ದಾರೆ! ಪರವಾ ಇಲ್ಲ, ನಮ್ಮ ಡಾಕ್ಟರು. ಪ್ರಿಸ್ಕ್ರಿಪ್ಷನ್ನುಗಳನ್ನು ಬರೆದಂತೆಯೇ ಈ ಕತೆಗಳನ್ನೂ ಬರೆದಿದ್ದಾರೆ" ಎಂದುಕೊಂಡೆ. "ರೋಗಿಯು ತನ್ನ ಬೇನೆಯ ವಿವರಗಳನ್ನು ಹೇಳುತ್ತಿರುವಾಗಲೇ ಅವನ ಮುಖವನ್ನು ನೋಡಿಯೇ ಮದ್ದಿನ ಚೀಟಿಯನ್ನು ಬರೆಯಲು ಶುರುಮಾಡುತ್ತಾರಲ್ಲ! ಇದು ನ್ಯಾಯವೇ?" ಎಂದು ಆಗಾಗ್ಗ ಶಂಕಿಸಿದ್ದೆ. ಆಮೇಲಾಮೇಲೆ ದವಾಖಾನೆಯಲ್ಲಿ ಕಂಡ ಮುಖಗಳೇ ತಿರುತಿರುಗಿ ಕಾಣಹತ್ತಿದಾಗ "ಈ ರೋಗಿಗಳ ಮರ್ಮಗಳೆಲ್ಲಾ ಡಾಕ್ಟರಿಗೆ ತಿಳಿದಿರಬೇಕು. ಅದಕ್ಕೇ ಹಾಗೆ ರೋಗಿ ವಿವರಣೆಯನ್ನು ಹೇಳುತ್ತಿರುವಾಗಲೇ ಇವರು ಮದ್ದಿನ ಚೀಟಿಯನ್ನು ಬರೆದು ಮುಗಿಸುತ್ತಾರೆ!" ಎನ್ನಿಸಿತು.

"ಈ ಕತೆಗಳಲ್ಲಿದ್ದಂತೆಯೇ, ಮೂರು ಸತ್ಯಾಂಶಗಳ ಜೊತೆಗೆ ಮೂರು ಮಿಥ್ಯಾಂಶಗಳನ್ನು ಜೋಡಿಸಿ, ಪ್ರಿಸ್ಕ್ರಿಪ್ಷನ್ನುಗಳನ್ನೂ ಬರೆಯುತ್ತಾರೆ. ಹಾಗೆ

ಬರೆದನಂತರ, ಅಧಿಕಾರಮುದ್ರೆಯ ತರಹ ಅಸ್ಪಷ್ಟವಾಗಿ ಸಹಿ ಹಾಕುತ್ತಾರೆ !? ಎಂದು ತೋರಿತು. ಅವರು ಬರೆದ ಪ್ರಿಸ್ಕ್ರಿಪ್ಷನ್ನುಗಳಲ್ಲಿನ ಸತ್ಯಾಂಶಗಳಿಂದ ರೋಗ ನಿವಾರಣೆಯಾಯಿತೋ ಅಥವಾ ಮಿಥ್ಯಾಂಶಗಳಿಂದಲೇ ಗುಣ ವಾಯಿತೋ ಅದನ್ನು ನಿರ್ಣಯಿಸುವುದು ಬಹಳ ಕಷ್ಟ. ಆದರೂ ಅವರು ಪ್ರಿಸ್ಕ್ರಿಪ್ಷನ್ನುಗಳಲ್ಲಿ ಬರೆದ ಔಷಧಿಗಳಷ್ಟರಿಂದಲೇ ರೋಗಿಗಳಿಗೆ ಗುಣವಾಯಿತು ಎಂದು ನಾನು ನಂಬುವುದಿಲ್ಲ. ಅವರು ಶ್ರದ್ಧೆಯಿಂದ ಬರೆದುಕೊಟ್ಟರಲ್ಲಾ ಅಂತ ಅನುಕಂಪ ಹೂಡಿದ ಯಾವುದೋ ಕಾಣದ ಶಕ್ತಿ ನೆರವಾಗಿ ರೋಗಿ ಗಳನ್ನು ಗುಣಪಡಿಸುತ್ತದೆ ಎಂದೇ ನನ್ನ ಖಚಿತವಾದ ಅಭಿಪ್ರಾಯ.

ಡಾಕ್ಟರ್ ಶಿವರಾಂ ಅವರ ಈ ಪುಸ್ತಕದ ಎರಡೂ ಭಾಗಗಳನ್ನು ಓದಿದ ವರು ಅದೇ ರೀತಿಯ ಪ್ರಯೋಜನವನ್ನು ಪಡೆಯಲಿ ಎಂದು ಆ ಕಾಣದ ಶಕ್ತಿಯನ್ನು ದೈನ್ಯದಿಂದ ಪ್ರಾರ್ಥಿಸಿ, ಋಣಮುಕ್ತನಾಗುತ್ತೇನೆ.

ರಾ. ಶಿ.

# ಪೀಠಿಕೆ

ಮನೋದೈಹಿಕ ಬೇನೆಗಳು ವಿಚಿತ್ರರೂಪಗಳನ್ನು ಪ್ರದರ್ಶಿಸುತ್ತವೆ. ಸರಿಯಾಗಿ ಅರ್ಥಮಾಡಿಕೊಳ್ಳಲು ಸುಮಾರು ತ್ರಾಸು ಆಗುತ್ತದೆ. "ಇಂತಿಂತಹ ರೋಗಿ ಈ ತೆರನಾಗಿ ತನ್ನ ಕಷ್ಟ ಹೇಳಿಕೊಂಡ. ಹೀಗಿರಬಹುದು ಎಂದು ನಾನು ತರ್ಕಮಾಡಿ, ನಿರ್ಣಯಿಸಿ ಚಿಕಿತ್ಸೆ ನಡಸಿದೆ. ಏನೂ ಪ್ರಯೋಜನವಾಗಲಿಲ್ಲ. ಕಡೆಗೆ, ಅನಿರೀಕ್ಷಿತವಾಗಿ ತಿಳಿದುಬಂದ ಸಂಗತಿಯಿಂದ ಗುಣವಾಯಿತು. "ಮದ್ದು ಕೊಡುವುದಕ್ಕೆ ಮಾತ್ರ ವೈದ್ಯ ; ಚಿಕಿತ್ಸೆಮಾಡುವವನು ಭಗವಂತ !" ಎಂದು ಚಿ. ಸೌ. ಕಮಲಳಿಗೆ ಆಗಿಂದಾಗ್ಗೆ ಹೇಳುತ್ತಿದ್ದೆ. 'ಈ ಕತೆಗಳನ್ನು ಬರೀರಿ, ಅಪ್ಪ' ಎಂದು ಆಕೆ ಉತ್ಸಾಹ ನೀಡುತ್ತಿದ್ದಳು.

ಹಾಗೂ ಚಿ|| ಜಿ. ಪಿ. ರಾಜರತ್ನಂ ಅವರಿಗೆ ಇಂಥದೊಂದು ಪುಸ್ತಕವನ್ನು ಬರೆದುಕೊಡುತ್ತೇನೆ ಎಂದು ಯಾವುದೋ ಹುಮ್ಮಸ್ಸಿನಲ್ಲಿ ಮಾತುಕೊಟ್ಟಿದ್ದೆ.

ಎರಡೂ ಕಾರಣಗಳಿಂದಾಗಿ ಕತೆಗಳನ್ನು ಬರೆದು ಮುಗಿಸಿದೆ. ಮುಗಿಸಿದ ಮೇಲೆ, "ಮನಸ್ಸಿನ ವಿಷಯವನ್ನೂ ಬರೆದರೆ, ಮಾನಸಿಕ ತೊಂದರೆಗಳು ಹೇಗೆ ದೇಹದ ಮೇಲೆ ಪರಿಣಾಮಮಾಡಬಹುದು ಎನ್ನುವುದನ್ನು ತಿಳಿಯಲು ಸುಲಭ. ಮನಸ್ಸಿನ ದೃಢತೆಯನ್ನೂ ಸಮಾಧಾನವನ್ನೂ ಸಾಧಿಸಲು ಇರುವ ಎಲ್ಲ ಮಾರ್ಗಗಳನ್ನೂ ಅಲ್ಪಸ್ವಲ್ಪವಾದರೂ ಸರಳವಾಗಿ ತಿಳಿಸೋಣ" ಎನ್ನಿಸಿತು. ಅದನ್ನು ಬರೆಯಹೋದಾಗ, 'ಹುಡುಗೀಗಿಂತ ಹೆರಳೇ ಭಾರ' ಎಂದ ಹಾಗೆ, ಈ ಭಾಗವೇ ಕತೆಗಳ ಭಾಗಕ್ಕಿಂತ ಭಾರವಾಯಿತು. ಆದಕಾರಣ ಅದನ್ನೇ ೨ನೆಯ ಭಾಗ ಎಂದು ವಿಂಗಡಿಸಿದೆ. ಎರಡು ಭಾಗಗಳೂ ಒಟ್ಟಿಗೆ ಇದ್ದರೆ, ತಿಳಿದುಕೊಳ್ಳಬೇಕು ಎಂದು ಆಸೆ ಇರುವವರಿಗೆ ಸಹಾಯವಾಗಬಹುದು ಎಂದೆಣಿಸಿ ಅದೇ ರೀತಿ ಮಾಡಿದ್ದೇನೆ.

* * *

ಈ ಪುಸ್ತಕವನ್ನು ಬರೆಯಲು ಯತ್ನಿಸಿದಾಗ ಒಂದು ವಿಚಿತ್ರ ಅನುಭವವಾಯಿತು. 'ಈ ವಿಷಯ ಹೀಗೆ' ಎಂದು ನನ್ನ ಮನಸ್ಸಿನಲ್ಲಿ ದೃಢವಾಗಿ

ಊರಿದ್ದ ಸಂಗತಿಗಳನ್ನು ಬರೆಯಹೋದಾಗ ಅನೇಕ ಸಂದೇಹಗಳು ತೋರಿದುವು. ಆ ಸಂದೇಹಗಳನ್ನು ಪರಿಹರಿಸಿಕೊಳ್ಳಲು ತಿರುಗಿ ತಿರುಗಿ ಹಲವಾರ ಪುಸ್ತಕಗಳನ್ನು ಓದಬೇಕಾಯಿತು. 'ಕಲಿಯಬೇಕಾದರೆ ಇನ್ನೊಬ್ಬರಿಗೆ ಕಲಿಸಬೇಕು' ಎಂಬ ಹಿರಿಯರ ನುಡಿಯ ಸತ್ಯವು ಮನದಟ್ಟಾಯಿತು. ನನಗಾದಂತೆಯೇ ಓದುಗರಾರಿಗಾದರೂ ಸಂದೇಹ ಬಂದರೆ, ಅವರೂ ನಾನು ಓದಿದ ಆಧಾರಗ್ರಂಥಗಳನ್ನು ಓದಿ ತಿಳಿದುಕೊಳ್ಳಲಿ, ಎನ್ನಿಸಿತು. ಆದ್ದರಿಂದ ನನಗೆ ನೆರವಾದ ಪುಸ್ತಕಗಳ ಪಟ್ಟಿಯನ್ನು ಕೊಡೋಣ ಎಂದುಕೊಂಡೆ. ಪಟ್ಟಿ ಮಾಡಲು ಹೊರಟೆ. ಕುಂಟಿದೆ. ಕೆಲವು ಪುಸ್ತಕಗಳು ನನ್ನ ಹತ್ತಿರ ಇವೆ ; ಇನ್ನು ಕೆಲವು ಪುಸ್ತಕಗಳನ್ನು ಅವುಗಳ ಮಾಲಿಕರು ಹಿಂತೆಗೆದುಕೊಂಡು ಹೋಗಿದ್ದಾರೆ ; ಮತ್ತೆ ಕೆಲವು ನನ್ನ ಸ್ವಂತ ಪುಸ್ತಕಗಳು—ಸುಭಾಷಿತದ ವನಿತಾವಿತ್ತಗಳಂತೆ—ಕೊಂಡುಹೋದವರ ಜತೆಯಲ್ಲೆ ಹೇಳದೆ ಕೇಳದೆ ನಿಂತು ಬಿಟ್ಟಿವೆ. ಹೀಗಾಗಿ ಎಲ್ಲ ಪುಸ್ತಕಗಳ ಪಟ್ಟಿ ಕೊಡಲು ಅಸಮರ್ಥನಾಗಿದ್ದೇನೆ.

ಓದುಗರೊಬ್ಬಿಬ್ಬರಿಗೆ, ಇಂತಿಂತಹ ಪುಸ್ತಕಗಳಿಂದ ಈ ವಿಷಯವನ್ನು ಈತ ಸಂಗ್ರಹಿಸಿರಬೇಕು, ಎನ್ನಿಸಬಹುದು. ಆ ಪುಸ್ತಕಗಳ ನೆರವನ್ನು ಈತ ನೆನಸಿಕೊಂಡು, ನಾಗರಿಕರಂತೆ ಕೃತಜ್ಞತೆಯನ್ನು ಅರ್ಪಿಸಿಲ್ಲ, ಎಂದು ತುಸು ಬೇಸರವೂ ಬರಬಹುದು. ಅವರಲ್ಲಿ ನನ್ನ ಬಿನ್ನಹ ಇಷ್ಟೇ ; ಈ ಪುಸ್ತಕದಲ್ಲಿನ ಯಾವುದೊಂದು ಸಣ್ಣ ವಿಷಯ ಕೂಡ 'ನನ್ನದು' ಎನ್ನಬರುವುದಿಲ್ಲ. ಎಲ್ಲ ವಿಷಯಗಳೂ ಯಾವನಾದರೂ ಒಬ್ಬ ಹಿರಿಯಾತ್ಮನ ಪುಸ್ತಕದಲ್ಲಿ ಎಂದಾದರೂ ನಾನು ಓದಿದವುಗಳೇ !

* * *

ರೋಗಿಗಳ ಹೆಸರುಗಳು, ಅವರ ವರ್ಣನೆ, ಮತ್ತಿತರ ವಿವರಗಳೆಲ್ಲವೂ ಪೂರ್ಣವಾಗಿ ಕಾಲ್ಪನಿಕ. ಆಸಕ್ತಿಯಿಂದ ಓದಲು ಅನುಕೂಲವಾಗುವಂತೆ ಕತೆಗಳ ರೀತಿಯಲ್ಲಿ ರಚಿಸಲಾಗಿದೆ. ರೋಗಗಳು ಮತ್ತು ಅದರ ವಿವರಣೆಗಳು ಮಾತ್ರ ನೂರಕ್ಕೆ ನೂರು ಸತ್ಯ. 'ನನ್ನನ್ನೇ ಕುರಿತು ಈ ಕತೆಯನ್ನು ಬರೆದಿರಬಹುದು' ಎಂದು ಸುಮಾರು ಜನರು ಅಂದುಕೊಳ್ಳಬಹುದು. 'ಪರಿಚಯವೇ

ಇಲ್ಲದಿರಬಹುದಾದ ಅವರನ್ನು ಕುರಿತು ಬರೆದಿಲ್ಲ; ಅವರಿಗೆ ಇರಬಹುದಾದ ರೋಗವನ್ನು ಕುರಿತು' ಎಂದು ಸ್ಪಷ್ಟವಾಡಬಯಸುತ್ತೇನೆ.

* * *

ಸಹೃದಯರಾದ ಓದುಗರು ಕೊಡಬಹುದಾದ ಸೂಚನೆ ಸಲಹೆಗಳನ್ನು (ಮುಂದಿನ ಮುದ್ರಣವಾದರೆ ಅದರಲ್ಲಿ) ಉಪಯೋಗಿಸಿಕೊಳ್ಳುತ್ತೇನೆ ಎಂದು ಧೈರ್ಯವಾಗಿ ಹೇಳುತ್ತೇನೆ. ಏಕೆಂದರೆ, ಕನ್ನಡದಲ್ಲಿ ಇಂತಹ ಪುಸ್ತಕಗಳಿಗೆ ಎರಡನೆಯ ಮುದ್ರಣದ ಆವಕಾಶವೇ ಇರುವುದಿಲ್ಲ ಅಲ್ಲವೆ! ಕನ್ನಡಿಗರೆಲ್ಲ ಓದುವುದು ಇಂಗ್ಲಿಷನ್ನೇ ಅಲ್ಲವೆ, ನನ್ನಂತೆ!

* * *

ಈ ಪುಸ್ತಕದ ಹಸ್ತಪ್ರತಿಯನ್ನು ಆಮೂಲಾಗ್ರವಾಗಿ ಓದಿ, ಸೂಕ್ತ ಸಲಹೆಗಳನ್ನು ಕೊಟ್ಟರು, ಶ್ರೀ ಬಿ. ಪುಟ್ಟಸ್ವಾಮಯ್ಯನವರು.

ಇಸ್ಲಾಂ ಮತದ ವಿಷಯದಲ್ಲಿ ಬರೆದಿರುವ ಭಾಗವನ್ನು ಓದಿ, ನನ್ನೊಡನೆ ಚರ್ಚಿಸಿ, ಹೊಸ ಹೊಸ ವಿಷಯಗಳನ್ನು ತಿಳಿಸಿದರು ವಿಶ್ರಾಂತ ಜಡ್ಜರು, ಹಾಜಿ ಮೀರ್ ಇಕ್ಬಾಲ್ ಹುಸೇನ್ ಅವರು.

ಮೂರು ದಶಕಗಳ ಕೆಳೆತನವಿದ್ದ ಕೀರ್ತಿಶೇಷ ಡಾ॥ ಎಂ. ವಿ. ಗೋವಿಂದ ಸ್ವಾಮಿಯವರೊಡನೆ ಸರಸ ಸಂಭಾಷಣೆ ಮಾಡುತ್ತಿರುವಾಗಲೂ, ಮನೋದೈಹಿಕ ಬೇನೆಗಳ ವಿಷಯವು ತಲೆಯೆತ್ತುತ್ತಿತ್ತು. ಹಾಗಾಗಿ ಈ ವಿಷಯದ ಅಭ್ಯಾಸಕ್ಕೆ ವಿಶೇಷ ಸಹಾಯ ಮಾಡಿದರು, ಕೀರ್ತಿಶೇಷ ಡಾಕ್ಟರು.

ಈ ಪುಸ್ತಕದ ಅಚ್ಚಿನ ಅಣೆಯನ್ನೂ ಪ್ರಕಾಶನದ ಹೊಣೆಯನ್ನೂ ಒಲವಿನಿಂದ ನಗುನಗುತ ಹೊತ್ತರು ಚಿ॥ ಜಿ. ಪಿ. ರಾಜರತ್ನಂ ಅವರು.

ಕರ್ತವ್ಯನಿಷ್ಠೆಯಿಂದ, ಣ್ಣಲ್ಲಿ ಕಣ್ಣಿಟ್ಟುಕೊಂಡು ಅಚ್ಚುಮಾಡಿದರು, ಚಿ। ಯು. ಮಾಧವ ಮಲ ವರು.

ಈ ಮಹನೀಯ ಲ್ಲರ ಉಪಕಾರವನ್ನು ಮಮತೆಯಿಂದ ಸ್ಮರಿಸುತ್ತೇನೆ.

ಎಂ. ಶಿವರಾಂ

# ಎರಡನೆಯ ಮುದ್ರಣದ ಮುನ್ನುಡಿ

ನನ್ನ ಮಾತು ಸುಳ್ಳಾಯಿತು. ಹನ್ನೊಂದು ವರ್ಷಗಳ ಹಿಂದೆ ಈ ಕೃತಿ ಮೊದಲನೆಯ ಮುದ್ರಣವಾಗಿ ಹೊರ ಬಂದಾಗ ಎರಡನೆಯ ಮುದ್ರಣ ಆಗುವುದೆ ಇಲ್ಲವೇನೋ ಎಂದು ಶಂಕೆ ವ್ಯಕ್ತಪಡಿಸಿದ್ದೆ. ಈಗ ಶ್ರೀ ರಾಮಚಂದ್ರಯ್ಯನವರ ನೆರವಿನಿಂದ ರಾಜಲಕ್ಷ್ಮೀ ಪ್ರಕಾಶನದ ಎರಡನೆಯ ಮುದ್ರಣವಾಗಿ ಹೊರಬರುತ್ತಿದೆ.

ಈ ಕೃತಿಯ ಮೊದಲನೆಯ ಮುದ್ರಣದಲ್ಲಿದ್ದ 'ಕುಂಡಲಿನೀಯೋಗ' ಅವಶ್ಯಕವಿಲ್ಲವೆಂದು ತೆಗೆದು ಹಾಕಿದ್ದೇನೆ. ಮತ್ತೆ ಯಾವ ಬದಲಾವಣೆಯೂ ಆಗಿಲ್ಲ.

ಈಗ ಈ ಪುಸ್ತಕದ ಮುದ್ರಣ ಮುಗಿಸಿರುವ ವಿಕಾಸ ಮುದ್ರಣದ ಶ್ರೀ ಶೇಷನಾರಾಯಣರಿಗೆ ನನ್ನ ನೆನಕೆಗಳನ್ನು ಸಲ್ಲಿಸುತ್ತೇನೆ.

ಎಂ. ಶಿವರಾಂ

# ಮುಂದಿನ ಓದಿಗೆ

(ಮನೋದೈಹಿಕ ವಿಷಯಗಳನ್ನು ಇನ್ನೂ ಚೆನ್ನಾಗಿ, ವಿವರವಾಗಿ ತಿಳಿದುಕೊಳ್ಳಲು ಉತ್ಸುಕರಾದವರು ಕೆಳಗಿನ ಪುಸ್ತಕಗಳನ್ನು ಓದಬಹುದು. ಇವು ವೈದ್ಯರಲ್ಲದ ಸಾಮಾನ್ಯರಿಗಾಗಿಯೇ ಬರೆಯಲಾದುವು)


1 Man The Unknown—Alexis Carrel.
Pelican Books, A 131.

2 The Mind in the Making—James Harvey Robinson.
The Thinker's Library, No. 46.

3 Man's Presumptuous Brain—A.W.T. Simeons, M. D.
Orient Longmans (Pvt.) Ltd., Madras.

4 Drugs and The Mind—Robert S. de Ropp.
The Scientific Book Club, 121, Charing Cross Road, London, W. C. 2.

5 Man's Emerging Mind—N. J. Berrill.
A Premier Book, Fawcett Publications, Inc.

6 Your Body and Your Mind—Frank G. Slaughter, M.D.
A Signet Key Book. The New American Library.

7 Alfred Adler—Lewis Way.
A Pelican Book, A 366.

8 Beyond The Pleasure Principle—Sigmund Freud.
A Bantam Classic, Fc. 49.

9 An Introduction to Jung's Psychology.
A Pelican Book, A 273.

10 The Unconscious Mind—Kenneth Walker.
A Grey Arrow publication.

11 Modern Science —

William S. Bec .

A Pelican Book, A 473.

12 The Doors of Perception—Alduous Huxley.
Chatto & Windus, London.

13 How the Great Religions Began—Joseph Gaer.
A Signet Key Book, K D 359.

14 Meaning of the Glorious Koran—Mohammed
Marmaduke Pickthall.
Mentor Religious Classic.

15 The Serpent Power—Arthur Avlon.
Ganesh & Co. (Pvt.) Ltd., Madras.

16 ತೈತ್ತಿರೀಯೋಪನಿಷತ್ (ಆನಂದವಲ್ಲೀ)—ಸ್ವಾಮಿ ಆದಿದೇವಾನಂದ,
ಶ್ರೀ ರಾಮಕೃಷ್ಣಾಶ್ರಮ, ಮೈಸೂರು.

17 Control of the Mind, Parts I & II—Edited by Seymour M. Farber & Roger H. L. Wilson Mcgraw Hill Paper-backs.

(ಈ ಪುಸ್ತಕಗಳ ಕೆಲವು ಭಾಗಗಳು ವೈದ್ಯರಿಗೂ ಕಠಿಣ)

# ವಿಷಯ ಸೂಚಿಕೆ

## ಭಾಗ ೧

### ಪಾಠ ಕಲಿಸಿದ ರೋಗಿಗಳ ಕತೆಗಳು


| | | | | |
|---|---|---|---|---|
| ೧ | ಮೊಣಕಾಲು ಹಿಡಿದುಕೊಂಡಿತು | ... | ... | 1 |
| ೨ | ಅಪಸ್ಮಾರ ಬಡಿಯಿತು | ... | ... | 19 |
| ೩ | 'ತಲೆ ತಿರುಗಿದ ಹಾಗಾಗುತ್ತೆ' | ... | ... | 39 |
| ೪ | ಹುಳುಳುಳುಳಾಯಿ | ... | ... | 58 |
| ೫ | 'ಸಿಡಿರ್ಶೋಮು ತಲೆಯನ್ನು ಬಿಗಿದಿದೆ' | ... | ... | 86 |
| ೬ | ಹೊಟ್ಟೆ ಉರಿದುಹೋಗುತ್ತೆ | ... | ... | 106 |
| ೭ | ಮೆಡಶಿರದ ನೋವು | ... | ... | 123 |
| ೮ | "ಕಾಟಾರಮ್ಮ" | ... | ... | 137 |


## ಭಾಗ ೨

### ರೋಗಿಗಳಿಂದ ಕಲಿತ ದೊಡ್ಡ ಪಾಠ


| | | | |
|---|---|---|---|
| ಅಧ್ಯಾಯ ಒಂದು : ಮನೋದೈಹಿಕ ಬೇನೆಗಳು | ... | ... | 153 |
| ನಿದರ್ಶನಗಳು | ... | ... | 153 |
| ಜೀವದ ಪ್ರಗತಿ | ... | ... | 159 |
| ಮೆದುಳು | ... | ... | 164 |
| ಅ) ಮೆದುಳಿನ ಬುಡ | ... | ... | 168 |
| ಆ) ಸೆರಿಬೆಲ್ಲಂ | ... | ... | 169 |
| ಇ) ಸೆರಿಬ್ರಂ | ... | ... | 170 |
| ಜಾಣತನ | ... | ... | 172 |
| ಭಾಷೆ | ... | ... | 173 |
| ಮಾನವ ಮಧ್ಯಮ | ... | ... | 176 |

ಅಧ್ಯಾಯ ಎರಡು : ಮನಸ್ಸು ... ... 178

ಮನಸ್ಸು ಎಂದರೆ ಏನು ? ... ... 178
ಮನಸ್ಸು ಎಲ್ಲಿದೆ ? ... ... 181
ಮನಸ್ಸಿನ ಸ್ವಭಾವ ಎಂತಹದು ? ... ... 185
ಅ) ... ... 185
ಆ) ... ... 186
ಇ) ... ... 187
ಈ) ... ... 188
ಎ) ... ... 190

ಮನಸ್ಸಿನ ಚಟುವಟಿಕೆಗಳು ... ... 193
೧) ಹಗಲುಗನಸು ಕಾಣುವುದು ... ... 193
೨) ನಿರ್ಣಯಿಸುವುದು ... ... 196
೩) ತರ್ಕಬದ್ಧವಾಗಿ ಯೋಚನೆ ಮಾಡುವುದು ... ... 197
೪) ಪ್ರಜ್ಞಾಪ್ರೇರಿತ ಚಟುವಟಿಕೆ ... ... 200

ಮನಸ್ಸಿನ ಚಟುವಟಿಕೆಗಳ ಮೇಲೆ ದೈಹಿಕಸ್ಥಿತಿಯ ಪರಿಣಾಮ ... 204
ಅ) ಆಹಾರ ... ... 204
ಆ) ಪಾನೀಯಗಳು ... ... 205
ಇ) ದೇಹದ ನೋವುಗಳು ... ... 206
ಈ) ದೇಹದ ಇತರ ಕಾಯಿಲೆಗಳು ... ... 207
ಎ) ಮಾನಸಿಕ ಅವಲಂಬನ ... ... 208
ಏ) ಮಾನಸಿಕ—ದೈಹಿಕ ಚಿಕಿತ್ಸೆ ... ... 208

ಮನಸ್ಸಿನ ಬೆಳವಣಿಗೆ ... ... 209
ಅ) ಶೈಶವಾವಸ್ಥೆ ... ... 210
ಆ) ಬಾಲ್ಯಾವಸ್ಥೆ ... ... 214
ಇ) ಯೌವನಾವಸ್ಥೆ (ಬ್ರಹ್ಮಚರ್ಯಾಶ್ರಮ–ಗೃಹಸ್ಥಾಶ್ರಮ) .... 218
ಈ) ಯೌವನಾವಸ್ಥೆಯಲ್ಲಿ ಗೃಹಸ್ಥಾಶ್ರಮ–೨ನೇ ಹಂತ .... 226
ಉ) ವಾರ್ಧಿಕ್ಯಾವಸ್ಥೆಯ ಗೃಹಸ್ಥಾಶ್ರಮದಲ್ಲಿ ... ... 228
ಊ) ವಾರ್ಧಿಕ್ಯಾವಸ್ಥೆಯಲ್ಲಿ ವಾನಪ್ರಸ್ಥಾಶ್ರಮ ... ... 235
ಎ) ವಾರ್ಧಿಕ್ಯಾವಸ್ಥೆ–ಸಂನ್ಯಾಸಾಶ್ರಮ ... ... 241

ಆರೋಗ್ಯದೃಷ್ಟಿಯಲ್ಲಿ ಮಾನವನು ಈ ತನಕ ಮನಸ್ಸಿನಿಂದ ಸಾಧಿಸಿರುವುದೇನು ? ... 242

(೧) ಮುಪ್ಪು ... ... 242
(೨) ಮನೋದೈಹಿಕ ಬೇನೆಗಳು ... ... 245

ಸಾರಾಂಶ ... ... 247

ಅಧ್ಯಾಯ ಮೂರು : ಆನಂದಾನ್ವೇಷಣೆ ... ... 250

ಅಧ್ಯಾಯ ನಾಲ್ಕು : ಸೌಂದರ್ಯಾನ್ವೇಷಣೆ ... ... 259

ಅಧ್ಯಾಯ ಐದು : ಸತ್ಯಾನ್ವೇಷಣೆ ... ... 269

ಬಾಳಿಗೊಂದು ನಂಬಿಕೆ ... ... 269
ಬೌದ್ಧಮತ ... ... 273
ಚೀಣೀಯರ ಮತಗಳು ... ... 275
ಸರತುಷ್ಟ್ರ ಮತ ... ... 277
ಕ್ರೈಸ್ತಮತ ... ... 279
ಇಸ್ಲಾಂ ಮತ ... ... 282
ಹಿಂದೂಮತ ... ... 285
ಮತಸ್ಥಾಪನಾಚಾರ್ಯರು–ಅವರ ಬಾಳು ... ... 288

ಅಧ್ಯಾಯ ಆರು : ಶಾಂತಿಕಾರಕ ಔಷಧಿಗಳು ... ... 291

ಪಿಯೋಟಲ್–ಮೆಸ್ಕಲಿನ್ ... ... 291
ಮರಿಯುವನ, ಚರಸ್, ಭಂಗ್, ಗಾಂಜಾ ... ... 293
ಸರ್ಪಗಂಧಿ ... ... 294
ಲೈಸರ್ಜಿಕ್ ಆ್ಯಸಿಡ್ 25 ... ... 294

ಅಧ್ಯಾಯ ಏಳು : ಸ್ಕಿನ್ನರ್ ಬಾಕ್ಸ್ ಪ್ರಯೋಗ ... ... 298

ಅಧ್ಯಾಯ ಎಂಟು : ಸಾರಾಂಶ ... ... 303

ಆನಂದವಲ್ಲೀ ... ... 309

ಅಧ್ಯಾಯ ಒಂಭತ್ತು : **ಮನೋದೈಹಿಕ ಬೇನೆಗಳ ಚಿಕಿತ್ಸೆ** ... ... 312

ರೂಢಿಯಲ್ಲಿದ್ದ ಹಿಂದಿನ ಕ್ರಮಗಳು ... ... 312
ವೈಜ್ಞಾನಿಕ ಚಿಕಿತ್ಸೆ ... ... 314
ಮನೋದೈಹಿಕ ಬೇನೆಗಳ ಕಾರಣ ... ... 316
ಮನೋದೈಹಿಕ ರೋಗಿಗಳ ಕರ್ತವ್ಯ ... ... 317
ವೈದ್ಯರ ಕರ್ತವ್ಯ ... ... 318
ಉಪಸಂಹಾರ ... ... 320

ಭಾಗ ೧

# ಪಾಠ ಕಲಿಸಿದ ರೋಗಿಗಳ ಕತೆಗಳು

"ರಾಜನ ಕತೇನೂ ಬೇಡ, ಕಳ್ಳನ ಕತೇನೂ ಬೇಡಪ್ಪಾ !
ನಿಮ್ಮ ಹತ್ತಿರ ಬಂದ ರೋಗಿಗಳ ಕತೆ ಹೇಳಿ"

ಎಂದು ಪೀಡಿಸಿ

ಬಾಲ್ಯದ ಉತ್ಸಾಹದಿಂದ ಕೇಳಿದ

ಚಿ॥ ಸೌ॥ ಕಮಲಾ-ಗೆ

ಹರಕೆಯ ಬಳುವಳಿ



# ೧. ಮೊಣಕಾಲು ಹಿಡಿದುಕೊಂಡಿತು

ಅಂತರಂಗದ ಹುಣ್ಣಿಗೆ
ಕನ್ನಡಿ ಹಿಡಿಯಲೇಬೇಕು

೧

ರಾಮೇಶ್ವರದಿಂದ ಕಾಗದ ಬಂದಿತ್ತು. ಏನಿಲ್ಲ ಅಂದರೂ ೬–೭ ಸಲ ನಾನು ಅದನ್ನು ಓದಿರಬೇಕು. ಒಂದೊಂದು ಸಲ ಓದಿದಾಗಲೂ ಮನಸ್ಸಿಗೆ ಹಿತವಾಗುತ್ತಿತ್ತು. ಕಂಡೂ ಕಾಣದ ಹಾಗೆ ನಾಜೂಕಾಗಿ ನನ್ನನ್ನು ಅವರು ಹೊಗಳಿದ್ದರು. ಬಾಲ್ಯದಲ್ಲಿ ಅವರು ನಮ್ಮೂರಿನಲ್ಲಿದ್ದರೆಂದೂ, ಆಗೊಮ್ಮೆ ನನ್ನ ಬಳಿಗೆ ಚಿಕಿತ್ಸೆಗೆ ಬಂದಿದ್ದರೆಂದೂ, ನನ್ನ ನಯ, ವಿನಯ, ಆದರದ ಮಾತುಗಳು, ವಿಚಕ್ಷಣ ಚಿಕಿತ್ಸೆ ಇವೆಲ್ಲವೂ ಅವರ ಮೇಲೆ ಮರೆಯಲಾಗದ ಪರಿಣಾಮವನ್ನುಂಟುಮಾಡಿತ್ತೆಂದೂ ಬರೆದಿದ್ದರು. ಕಾರಣಾಂತರದಿಂದ ರಾಮೇಶ್ವರಕ್ಕೆ ಹೋಗಿರುವುದಾಗಿಯೂ, ಹಿಂತಿರುಗಿ ಊರಿಗೆ ಬಂದು ಆಯುರ್ವೇದ ಚಿಕಿತ್ಸೆಯನ್ನು ಪುನಃ ಕೈಕೊಳ್ಳಲು ಎರಡು ಮೂರು ತಿಂಗಳಾಗ ಬಹುದೆಂದೂ, ತಮ್ಮ ಒಬ್ಬಳೇ ತಂಗಿಗೆ ಮೊಣಕಾಲು ವಾತ ಬಂದಿದೆಯೆಂದೂ, ನನ್ನಲ್ಲಿಗೆ ಚಿಕಿತ್ಸೆಗೆ ಹೋಗಬೇಕೆಂದು ಆಕೆಗೆ ಬರೆದಿರುವುದಾಗಿಯೂ, ದಯ ಮಾಡಿ ಆಕೆಯನ್ನು ಗುಣಪಡಿಸಬೇಕೆಂದೂ ಬರೆದಿದ್ದರು. ಕಾಗದದ ಜತೆಯಲ್ಲಿ ೨೦೦ ರೂಪಾಯಿನ ಚೆಕ್ಕನ್ನಿಟ್ಟಿದ್ದರು.

ಅವರ ಮನಸ್ಸಿಗೆ ಹಿತವಾಗುವ ಹಾಗೆ ನಾನೂ ಜವಾಬು ಬರೆಯಬೇಕು ಎಂದು ಮನಸ್ಸುಮಾಡಿದೆ. ನಾಳೆ ಬರೆಯೋಣ, ನಾಡಿದ್ದು ನಿಧಾನವಾಗಿ

ಕೂತು ಬರೆದರಾಯ್ತು, ಹೀಗೆಲ್ಲಾ ಮುಂದುವರಿಸಿ ಒಂದು ವಾರವನ್ನು ಕಳೆದೆ. ಕಡೆಗೆ 'ಆಕೆ ಬರಲಿ, ಬಂದಮೇಲೆ ಪರೀಕ್ಷೆಮಾಡಿ, ಚಿಕಿತ್ಸೆ ನಡಸಿ, ಸುದೀರ್ಘ ಪತ್ರವನ್ನು ಬರೆದರಾಯಿತು. ತಂಗಿಗೆ ಗುಣವಾಗಿದೆ ಎಂದು ತಿಳಿದರೆ ಸಂತೋಷಪಟ್ಟುಕೊಂಡಾರು' ಎಂದು ತೀರ್ಮಾನಿಸಿದೆ.

ಬಂದ ಹೊಗಳುಕಾಗದವನ್ನು ಮರಳಿ ಮರಳಿ ಓದುವಾಗ ಇರುವ ಆಸಕ್ತಿ ಜವಾಬು ಕೊಡಬೇಕಾದಾಗ ಎಲ್ಲೋ ಮಾಯವಾಗಿಬಿಡುತ್ತೆ. ಇದು ಕೆಲವರ ಸ್ವಭಾವ. ಪೈತ್ಯಪ್ರಕೃತಿ ಎಂದು ಎರಡೂ ಅರ್ಥದಲ್ಲಿ ಹೇಳಬಹುದು.

## ೨

ಗೌರಮ್ಮನಿಗೆ ೨೬ರ ಪ್ರಾಯ. ಎರಡು ಮಕ್ಕಳಿದ್ದುವು. ಗಂಡನಿಗೆ ಇನ್ನೂರು ರೂಪಾಯಿ ಪಗಾರ ದೊರಕುತ್ತಿತ್ತು. ಸ್ವಂತ ಮನೆ. ಅತ್ತಿಗೆ, ನಾದಿನಿ, ಭಾವ, ಮೈದುನ, ಯಾರೂ ಆಕೆಗಿತ್ತಿಲ್ಲ. ಮಧ್ಯಮ ತರಗತಿಯ ಸಾಮಾನ್ಯ ಸಂಸಾರ. "ಹುಡುಗಿಯಾಗಿದ್ದಾಗ ಆಗಾಗ್ಗೆ ಮೊಣಕಾಲು ಹಿಡಿದು ಕೊಳ್ಳುತ್ತಿತ್ತು, ಒಂದೆರಡು ದಿನಗಳಲ್ಲಿ ಕಡಿಮೆಯಾಗುತ್ತಿತ್ತು. ನಡೆಯುವುದಕ್ಕೆ, ಕೂತು ಏಳುವುದಕ್ಕೆ ಎಂದೂ ತೊಂದರೆಯನ್ನುಂಟುಮಾಡಿದ್ದಿಲ್ಲ. ಮದುವೆ ಯಾದಮೇಲೆ ಮೊದಲ ಹೆರಿಗೆಯಲ್ಲಿ ಕೂಡ ಏನೂ ತೊಂದರೆ ಆಗಿದ್ದಿಲ್ಲ. ಎರಡನೆಯ ಬಸುರಿನ ನಾಲ್ಕನೇ ತಿಂಗಳಲ್ಲಿ ಎಂಟು ಹತ್ತು ದಿವಸ ಮಂಡಿ ಬಿಗಿ ದಿತ್ತು. ಅಂದರೆ ಹಾಸಿಗೆ ಹಿಡಿದು ಮಲಗುವಷ್ಟಲ್ಲ. ಆದರೆ ಈಗೀಗ ೩-೪ ತಿಂಗಳಿಂದ ಎದ್ದು ಕೂರುವುದಕ್ಕೂ ಆಗುವುದಿಲ್ಲ. ನಿಂತುಕೊಳ್ಳಬೇಕಾದರೆ ಶತಪ್ರಯತ್ನ, ಕಣ್ಣೀರು ಮಿಡಿಯಂದೇ ಎರಡು ಹೆಜ್ಜೆ ಇಡುವುದಕ್ಕೆ ಸಾಧ್ಯವಿಲ್ಲ. ಮನೆ ಔಷಧಿ, ಉಳುಕಿನ ಮಂತ್ರ, ಹಸಿರು ಪಥ್ಯ ಎಲ್ಲವೂ ಆಯಿತು. ದಿನ ದಿನಕ್ಕೆ ಉಲ್ಬಣಿಸಿದೆ. ಈಗ ೨೪ ಗಂಟೆಗಳೂ ಮೊಣಕಾಲು ಮಿಡಿಯುತ್ತಲೇ ಇವೆ. ಹೀಗೇ ಇದ್ದರೆ ಕೆರೇನೋ ಭಾವೀನೋ ಹುಡುಕಬೇಕಾಗುತ್ತೆ." ಎಂದು ಚಿಕಿತ್ಸೆಗೆ ಬಂದಾಗ ಗೌರಮ್ಮ ಹೇಳಿದಳು. "ನಮ್ಮಣ್ಣ ಕಾಗದ ಬರೆದಿದ್ದರು, ನಿಮಗೂ ಬರೆದಿದ್ದೇನೆ ಎಂದು ಬರೆದಿದ್ದರು" ಎಂದಳು.

ಸುಪುಷ್ಟವಾಗಿ ಬೆಳೆದಿದ್ದಳು. ವಾರಣವಾಗಿ ಎಳ್ಳಂಬಳಸೆ ಇಲ್ಲದೆ ಮಾತನಾಡಿದ್ದಳು. ಎಂತಹ ಮಧುರ ಕಂಠ! ಹೇಳಿದ್ದನ್ನೇ ಹೇಳುವ ರೋಗಿಗಳಂತೆ ಸತಾಯಿಸಿರಲಿಲ್ಲ. ಹೆಚ್ಚು ಸಂಕೋಚವನ್ನಾಗಲಿ ಸಲಿಗೆಯನ್ನಾಗಲಿ ತೋರ್ಪಡಿಸಲಿಲ್ಲ. ಜಡೆಯ ಹೆರಳನ್ನು ಕಟ್ಟಿದ ರೀತಿ, ತಿಳಿ ಅರಿಸಿನದ ಸೋಂಕಿದ್ದ ಹಾಲುಗಲ್ಲ, ದುಂಡು ಕುಂಕುಮ, ಕತ್ತಿನಲ್ಲಿ ಹವಳ ಕರಿಮಣಿಯ ತಾಳಿ, ಡಾಬು, ಕಾಲುಂಗುರ, ಎಲ್ಲವೂ ಸಂಪ್ರದಾಯಬದ್ಧವಾದ ಮನೆಯ ವಾತಾವರಣವನ್ನು ಸೂಚಿಸಿದುವು.

ಮೊಣಕಾಲುಗಳನ್ನು ನಾನು ಪರೀಕ್ಷೆಮಾಡಿದೆ. ಬಲಮಂಡಿಯೇ ಆಕೆಗೆ ತೊಂದರೆ ಕೊಡುತ್ತಿದ್ದ ಕೀಲು. ಅದರ ಮೇಲೆ ಚರ್ಮವು ನೆರಿನೆರಿಗಟ್ಟಿತ್ತು. ಊದಿಕೊಂಡಿತ್ತಿಲ್ಲ. ಎಡಮಂಡಿಯಷ್ಟೇ ಗಾತ್ರವಿತ್ತು. ಮಂಡಿಯ ಮೇಲೆ ಪರೀಕ್ಷಿಸುವ ಅಂಗೈಯನ್ನಿಟ್ಟು ಕಾಲನ್ನು ಮಡಚಿದರೆ, ನೆಟ್ಟಿಗೆ ಮುರಿದ ಶಬ್ದವು ಅಂಗೈಗೆ ತಿಳಿಯುತ್ತದೆ. ಹಾಗಾದಾಗ, ಮೊಣಕಾಲುಕೀಲಿನಲ್ಲಿ ಸ್ವಾಭಾವಿಕವಾಗಿ ಇರಬೇಕಾದ ಕೀಲುದ್ರವವು ಕಡಿಮೆಯಾಗಿದೆ, ಎಂದಂದುಕೊಳ್ಳಬಹುದು. 'ಸ್ವಲ್ಪ ಕಾಲು ಮಡಿಸಮ್ಮಾ' ಎಂದು ಹೇಳಿ, ಕೀಲಿನ ಮೇಲೆ ಅಂಗೈಯಿಟ್ಟು ಅವಳ ಮುಖವನ್ನೇ ನೋಡುತ್ತಿದ್ದೆ. ಮಡಿಚಿದಾಗ ನೋವಾದರೆ, ಎಷ್ಟು ನೋವಿರಬಹುದು ಎಂದು ಮುಖವನ್ನು ನೋಡಿ ಅಂದಾಜುಮಾಡಬಹುದು.

ಆಕೆಯ ಮುಖವು ಕೆಂಪೇರಿತು. ಕಿರುಬೆವರು ಹಣೆಯ ಮೇಲೆ ಹನಿಗಟ್ಟಿತು. ಅತಿಯಾಗಿ ನೋವನ್ನು ಅನುಭವಿಸುತ್ತಿದ್ದಾಳೆ ಎಂದು ದೃಢವಾಯಿತು. ಮೊಣಕಾಲಿನಲ್ಲಿ ಕಟಕಟವೇನೂ ಕೇಳಿಸಲಿಲ್ಲ. ಆದರೆ ಕೀಲಿನ ಸುತ್ತಲೂ ಇದ್ದ ಮಾಂಸಖಂಡಗಳು ಬಿಗಿದುಕೊಂಡಿದ್ದುವು.

'ಯಾವಾಗಲಾದರೂ ಊದಿಕೊಂಡಿತ್ತೇನಮ್ಮಾ?' ಎಂದು ಕೇಳಿದೆ. 'ಒಂದು ಸಾರಿ ಹುಲಿಕೊಬ್ಬನ್ನು ಸವರಿ ಬಿಗಿಯಾಗಿ ಒಂದು ವಾರ ಕಟ್ಟಿದ್ದರು. ಕಟ್ಟು ಬಿಚ್ಚಿದ ಮೇಲೆ ತುಂಬಾ ಊದಿಕೊಂಡಿತ್ತು. ಸೋಪುನೀರಿನಲ್ಲಿ ಬಟ್ಟೆ ಅದ್ದಿ ಕಟ್ಟಿದರೆ ಊತ ಕಡಿಮೆಯಾಗುತ್ತೆ ಅಂದರು. ಹಾಗೆ ಮಾಡಿದೆ. ಒಂದು ವಾರದಲ್ಲಿ ಊತ ಇಳಿಯಿತು. ನಿನ್ನೆ ಕೂಡ ಸೋಪುನೀರಿನ ಬಟ್ಟೆಯನ್ನೇ ಕಟ್ಟಿದ್ದೆ. ಹಿತವಾಗಿರುತ್ತೆ' ಎಂದಳು.

ಚರ್ಮವು ಸರಿಸರಿಯಾಗಿದ್ದುದರ ಕಾರಣ ಈಗ ತಿಳಿದಹಾಗಾಯ್ತು.

೩

ಕೀಲುನೋವು ಕಾಣಿಸಿಕೊಂಡರೆ, ಪೆಟ್ಟು ಏನಾದರೂ ತಗುಲಿದೆಯೋ ಎಂದು ವಿಚಾರಿಸುತ್ತೇವೆ. ಏಕೆಂದರೆ ತಿಳಿದಹಾಗೆ ಏಟು ಬೀಳದೆ ಇರಬಹುದು. ಕಾಲೇಜಿನಿಂದ ಹುಡುಗರು ಬಂದು ಬಾಗಿಲು ತಟ್ಟಿದರೇನೋ ಎಂದು ಅವಸರದಲ್ಲಿ ಅಡಿಗೆಮನೆಯಿಂದ, ತಿಂಡಿಮಾಡುವುದನ್ನು ಅರ್ಧದಲ್ಲೇ ನಿಲ್ಲಿಸಿ, ಓಡಿಬಂದು ಬಾಗಿಲು ತೆಗೆದು, ತಿರುಗಿ ಅಡಿಗೆಮನೆಗೆ ಓಡುವಾಗ, ಕುರ್ಚಿಯ ಕಾಲಿಗೊ, ಬಾಗಿಲವಾಡಕ್ಕೋ ಮಂಡಿ ತಾಕಿರಬಹುದು. ಅದರ ನೆನಪೂ ಇರುವುದಿಲ್ಲ ಅಥವಾ ನಿದ್ರೆಮಾಡುವಾಗ ಹೊರಳಿ ಗೋಡೆಗೆ ಮಂಡಿ ತಾಕಿ ಪೆಟ್ಟಾಗಿರಬಹುದು. ಒಂದೆರಡು ದಿನಗಳ ಮೇಲೆ ನೋವು ಕಾಣಿಸಬಹುದು. ಕೆಲವು ವೇಳೆ ಜಾರಿಬಿದ್ದಾಗ, ಕೈಗೊ ಹಣೆಗೊ ಗಾಯವಾಗಿ ರಕ್ತ ಸುರಿದಾಗ, ಆ ಗಾಯಗಳ ಮೇಲೇ ಮನಸ್ಸಿರುತ್ತಾಗಿ ಮಂಡಿಗೆ ಆಗಿರಬಹುದಾದ ಪೆಟ್ಟು ತಿಳಿಯದೇ ಇರಬಹುದು.

ಪೆಟ್ಟೇನೂ ಬಿದ್ದಿರಲಾರದು ಎಂದು ದೃಢಪಡಿಸಿಕೊಂಡೆ. ಸಾಮಾನ್ಯವಾಗಿ ಮೂರು ನಾಲ್ಕು ತಿಂಗಳುಗಟ್ಟಲೆ ಅಂತಹ ನೋವು ಇರುವುದಿಲ್ಲ. ಆದರೆ ಎಡವಿದ ಕಾಲೇ ಎಡವುತ್ತಾದ್ದರಿಂದ ಅದನ್ನು ದೃಢಪಡಿಸಿಕೊಂಡೆ.

ಬಾಲ್ಯದಲ್ಲಿ Rheumatic Fever (ರ್ಹ್ಯೂಮೆಟಿಕ್ ಜ್ವರ) ಬಂದಿದ್ದರೆ ಆಗಿಂದಾಗ್ಗೆ ಅದು ಕೆಲವಾರು ವರ್ಷಗಳು ಮರುಕಳಿಸಬಹುದು. ಬಾಲ್ಯದಲ್ಲಿ ಗಂಟಲುನೋವು, ಜ್ವರ, ಕೀಲುಗಳು ಇಲ್ಲೊಂದು ದಿನ ಊದಿಕೊಂಡು, ನೋವಾಗಿ, ಎರಡು ದಿನಗಳಲ್ಲೇ ವಾಸಿಯಾಗಿ, ಮತ್ತೆಲ್ಲೋ ಇನ್ನೊಂದು ದಿನ ಊದಿ ನೋವಾಗುವುದು, ಈ ಲಕ್ಷಣಗಳಿಂದ ಕೂಡಿರುತ್ತೆ.

ಈಕೆಗೆ ಬಾಲ್ಯದಲ್ಲಿ ಜ್ವರ ಬಂದಿತ್ತು, ಕೀಲುನೋವು ಬಂದಿತ್ತು, ಎಂದು ಹೇಳಿದ್ದಳು. ಆದುದರಿಂದ ಗಂಟಲನ್ನು ಪರೀಕ್ಷೆಮಾಡಿದೆ. ಶೀತದ ಗೆಡ್ಡೆಗಳೇನೂ ಇರಲಿಲ್ಲ. ದವಡೆಯ ಕೀಲಿನ ಬಳಿ ಕತ್ತಿನಲ್ಲಿ ಗೆಡ್ಡೆಗಳೂ ಇರಲಿಲ್ಲ.

ಹೃದಯಪರೀಕ್ಷೆಮಾಡಿದೆ. ಹಳೆಯ ರ್ಹ್ಯೂಮೆಟಿಕ್ ಜ್ವರದ ಯಾವುದೊಂದು ಸ್ಮಾರಕ ಚಿಹ್ನೆಗಳೂ ಇದ್ದಿರಲಿಲ್ಲ. ಹೃದಯವು ಆರೋಗ್ಯವಾಗಿತ್ತು.

ದೇಹದಲ್ಲಿ ಎಲ್ಲಾದರೂ ಕೀವುಗಟ್ಟಿಕೊಂಡಿದ್ದರೆ, ಆ ಕೀವಿನ ವಿಷವು ರಕ್ತಗತವಾಗಿ ಕೀಲುಗಳಲ್ಲಿ ನೋವನ್ನೂ ಬೇನೆಯನ್ನೂ ಉಂಟುಮಾಡಬಹುದು. ಸಾಮಾನ್ಯವಾಗಿ ಹಲ್ಲುಗಳ ಬೇರುಗಳಲ್ಲಿ, ಕೆನ್ನೆಯ ಎಲುಬುಗಳಲ್ಲಿ, ಪಿತ್ತ ಕೋಶದ ಸಂಚಿಕೆಯಲ್ಲಿ (Gall Bladder) ಅಪೆಂಡಿಕ್ಸಿನಲ್ಲಿ ಹೀಗಾಗಿರಬಹುದು.

ಹಲ್ಲುಗಳನ್ನೆಲ್ಲಾ ಪರೀಕ್ಷಿಸಿದೆ. ಎಲ್ಲವೂ ಚೆನ್ನಾಗಿದ್ದುವು.

ಮೂಗನ್ನು ಪರೀಕ್ಷೆಮಾಡಿದೆ. ಕೆನ್ನೆಯೆಲುಬಿನ ಸೈನಸ್ಸುಗಳು ಶುಭ್ರ ವಾಗಿ ಕಂಡುವು.

ಪಿತ್ತದ ಸಂಚಿಯು ರೋಗದ ಚಿಹ್ನೆಗಳನ್ನು ತೋರಿಸಲಿಲ್ಲ.

ಅಪೆಂಡಿಕ್ಸ್ ಕೂಡ ಆರೋಗ್ಯವಾಗಿದೆ ಎಂದು ದೃಢಮಾಡಿಕೊಂಡೆ.

ಅಂದಮೇಲೆ ಈಕೆಯ ಮಂಡಿನೋವಿಗೆ ತಿಳಿದ ಕಾರಣಗಳಾವುವೂ ದೊರಕಲಿಲ್ಲ. ಸಾಮಾನ್ಯವಾಗಿ ನೂರು ಕೀಲುನೋವಿನವರಲ್ಲಿ ಹತ್ತೋ ಹದಿನೈದೋ ಜನರಲ್ಲಿ ಕಾರಣಗಳು ಸಿಗುತ್ತವೆ. ಮಿಕ್ಕವುಗಳನ್ನು ಅಸ್ಪಷ್ಟ ರ್ಹ್ಯೂಮೆಟಿಸಂ (Cryptogenic) ಎಂದು ನಾಮಕರಣಮಾಡಿ ಅಜ್ಞಾನವನ್ನು ಮುಚ್ಚಿಕೊಳ್ಳುತ್ತೇವೆ. ಈಕೆಗೂ ಕ್ರಿಪ್ಟೋಜನಿಕ್ ರ್ಹ್ಯೂಮೆಟಿಸಂ ಎಂದು ಸಿದ್ಧಾಂತಮಾಡಿದೆ.

ಕಾರಣಗಳು ಸರಿಯಾಗಿ ತಿಳಿಯದೆ ಇದ್ದರೆ, ಚಿಕಿತ್ಸೆಯೂ ಎಡ್ಡಾದಿಡ್ಡಿ. ಕೆಲವು ಔಷಧಿಗಳ ಪ್ರಯೋಗದಿಂದ ನೋವು ಕಡಿಮೆಯಾಗುವುದನ್ನು ಬಲ್ಲೆವು. ಆಸ್ಪಿರಿನ್ ಗೋತ್ರದ ಮದ್ದುಗಳನ್ನು ಉಪಯೋಗಿಸುತ್ತೇವೆ. ಅದರಲ್ಲಿ ಗುಣ ಕಂಡರೆ, ರೋಗಿಯ ಮತ್ತು ಡಾಕ್ಟರ ಪುಣ್ಯ.

ಅವು ನಿರರ್ಥಕವಾದರೆ ಸಿಂಕೊಫೆನ್ ಎಂಬ ಔಷಧಿಗಳನ್ನು ಕೊಟ್ಟು ನೋಡುತ್ತೇವೆ. ಈಚೀಚೆಗೆ ಬ್ಯೂಟೊ ಜಾಲ್ಡಿನ್, ಕಾರ್ಟಿಸೋನ್ ಜಾತಿಯ ಔಷಧಿಗಳನ್ನು ಪ್ರಯೋಗಿಸುತ್ತೇವೆ.

ಸುಮಾರು ರೋಗಿಗಳಿಗೆ ಇವುಗಳಲ್ಲಿ ಯಾವುದರಿಂದಲಾದರೂ ಗುಣವು ಸಾಕಷ್ಟು ಕಾಣಬರುತ್ತದೆ.

ಇವುಗಳ ಜತೆಗೆ ಮಂಡಿಗೆ ಶಾಖ ಕೊಡುವುದು. ಡಯಾಥರ್ಮಿ ಎಂದರೆ ವಿದ್ಯುತ್ ಅಲೆಗಳನ್ನು ಕೀಲಿನ ಒಳಕ್ಕೆ ಹರಿಸುವುದು, ತೈಲಗಳನ್ನು ಹಚ್ಚಿ ಶಾಖ ಕೊಡುವುದು, ಹೀಗೆಲ್ಲಾ ಉಪಚಾರವನ್ನೂ ಮಾಡುತ್ತೇವೆ. ಹಿತವಾಗಿ ಬೇಕಾದವರು ಶಾಖ ಕೊಟ್ಟರೆ ನೋವು ಕಡಿಮೆಯಾದಂತೇ ಕಾಣಿಸುತ್ತೆ.

ಅಲ್ಲದೆ ಆಹಾರದ ವ್ಯತ್ಯಾಸದಿಂದ ಹೀಗಾಗಿರಬಹುದು. ಆದುದರಿಂದ 'ಆಲೂಗೆಡ್ಡೆ ಗೆಣಸು ಇತ್ಯಾದಿ ನೆಲದ ಒಳಗೆ ಬೆಳೆಯುವ ಗೆಡ್ಡೆ ಗೆಣಸುಗಳನ್ನು ವರ್ಜಿಸಿ; ಕಾಲಪ್ರವೃತ್ತಿ ಸರಿಯಾಗಿ ಆಗುವಂತೆ ಸೊಪ್ಪಿನ ತರಕಾರಿ, ಸಾಕಷ್ಟು ನೀರು ಕುಡಿಯುವುದು. ಇವೆಲ್ಲವನ್ನೂ ಮಾಡಿ' ಎಂದು ಸಲಹೆ ಕೊಡುತ್ತೇವೆ.

'ವ್ಯಾಯಾಮವನ್ನು ಮಿತವಾಗಿ ಮಾಡಿ. ಆಗ ಕೀಲಿನ ಮಾಂಸಗಳಿಗೆ ಬಿಗಿತ ಬರುವುದಿಲ್ಲ' ಎಂದು ಹೇಳಿ ಉಚಿತ ವ್ಯಾಯಾಮಗಳನ್ನು ಮಾಡಿಸುತ್ತೇವೆ.

ಈಕೆಯನ್ನು ಪರೀಕ್ಷೆಮಾಡಿ, ಮೂತ್ರವು ಶುದ್ಧವಾಗಿದೆ, ರಕ್ತವು ಪುಷ್ಟಿಯಿಂದಿದೆ ಎಂದು ಖಚಿತಪಡಿಸಿಕೊಂಡಮೇಲೆ. ಮೇಲೆ ಹೇಳಿದ ರೀತಿಯಲ್ಲಿ ಒಂದೊಂದು ಪ್ರಯೋಗವನ್ನು ಒಂದೊಂದು ವಾರ ಹತ್ತು ದಿನಗಳು ನಡಸಿದೆ. ಎರಡು ತಿಂಗಳಾಯಿತು. ನೋವು ಇದ್ದಂತೆಯೇ ಇತ್ತು. ಮುತ್ತೈದೆ, ಪಾಪ! ಬಲು ಬೇನೆಪಡುತ್ತಿದ್ದಳು.

೪

ಎರಡು ತಿಂಗಳಾಗಿರಬಹುದು. ಭಾನುವಾರ ಮಧ್ಯಾಹ್ನ ಬಿಡುವಾಗಿತ್ತು. ಹಳೆಯ ಕಾಗದಗಳ ವಿಲೇವಾರಿ ಮಾಡಿಬಿಡೋಣ ಎಂದು ಕುಳಿತೆ. ಹತ್ತಾರು ಲಗ್ನಪತ್ರಿಕೆಗಳು ಸಿಕ್ಕಿದುವು. ಶುಭಾಶಯಗಳನ್ನು ಕೋರಿ ಆತ್ಮೀಯವಾದ ಕಾಗದ ಬರೆಯೋಣ ಎಂದು ಅಲಾಯಿದಾ ತೆಗೆದಿಟ್ಟಿದ್ದೆ. ಈ ವೇಳೆಗೆ ಮದುವೆಯಾಗಿ ಆ ದಂಪತಿಗಳು ಊರೂರಿಗೆ ಹೊರಟುಹೋಗಿರಬೇಕು. ಅಯ್ಯೋ! ಇನ್ನು ಮುಂದೆಯಾದರೂ ಲಗ್ನಪತ್ರಿಕೆಗಳು ಬಂದ ದಿವಸವೇ ಕಾಗದ ಬರೆಯಬೇಕು, ಎಂದು ನಿರ್ಧರಿಸಿದೆ. ಎಷ್ಟೋ ಸಂದರ್ಭಗಳಲ್ಲಿ ಗಂಡು, ಅಥವಾ ಹೆಣ್ಣು, ಅಥವಾ ಇಬ್ಬರೂ ಬಾಲ್ಯದಿಂದ ನನಗೆ ಪರಿಚಿತರಾಗಿದ್ದವರು, ಬಲು ಸದರದಿಂದ ಮಾತನಾಡುತ್ತಿದ್ದವರು. ಇಂತಹವರ ಮದುವೆಯಾದಾಗ

ಸುಮ್ಮನೆ ಇದ್ದದ್ದು ವ್ಯಾಕುಲವನ್ನುಂಟುಮಾಡಿತು. ಮೊದಲು ಹಲವಾರು ಬಾರಿ ಈ ರೀತಿಯ ನಿರ್ಧಾರವನ್ನು ಮಾಡಿದ್ದೆ, ಅದನ್ನು ಮುರಿದಿದ್ದೆ. ಆದರೂ ನಿರ್ಧಾರವನ್ನು ತಿರುಗಿಮಾಡಬಹುದಲ್ಲ! ಎಂದಾದರೂ ಒಮ್ಮೆ ಸುಧಾರಿಸಿದ ಅಭ್ಯಾಸವನ್ನು ಆಚರಣೆಗೆ ತರುತ್ತೇನೆ ಎಂದು ಆಸೆಪಡಬಹುದಲ್ಲ!

ಹೀಗೆ ಯೋಚಿಸುತ್ತ ಕಾಗದಗಳನ್ನು ತೆಗೆದುನೋಡುತ್ತಿದ್ದೆ. ವಿಮಾ ಕಂಪೆನಿಯ "ತಿರುಓಲೆಗಳು", ಸಿಕ್ಕಿದುವು. ಲಕ್ಕೋಟೆಯನ್ನು ಒಡೆಯಂದೆ, ಹಾಗೆಯೇ ಅವುಗಳನ್ನು ಕಸದಬುಟ್ಟಿಗೆ ಹಾಕಿದೆ. ಸೂತಕ ತೀರಿತು ಎಂದು ಸಮಾಧಾನಪಟ್ಟುಕೊಂಡೆ. ಕಾಗದಗಳನ್ನು ತೆಗೆಯುತ್ತಲೇ ಇದ್ದೆ.

ರಾಮೇಶ್ವರದ ಕಾಗದ ಸಿಕ್ಕಿತು. ಬೆರಳು ಕಚ್ಚಿಕೊಳ್ಳೋಹಾಗಾಯ್ತು. ಪಾಪ! ಆತ ಏನಂದುಕೊಂಡಿರಬೇಕು? ನಯ ವಿನಯ ಅಂತೆಲ್ಲಾ ಬರೆದಿದ್ದ. ಬರೆದಿದ್ದ ಕಾಗದದ ಜತೆಯಲ್ಲಿ ಮುಂಗಡವಾಗಿ ಹಣವನ್ನು ಕಳಿಸಿದ್ದ. ಮರ್ಯಾದೆಯ ಕಾಗದವನ್ನೂ ಬರೆದಿರಲಿಲ್ಲ. ಮೊದಲು ಆತನ ಕಾಗದಕ್ಕೆ ಜವಾಬು ಬರೆಯಬೇಕು. ಆಮೇಲೆ ಮಿಕ್ಕ ಕೆಲಸ ಎಂದು ನಿರ್ಧರಿಸಿ ಜವಾಬನ್ನು ಬರೆದೆ.

'ಹೀಗೆ ಹೀಗೆಲ್ಲಾ ಪ್ರಯೋಗಗಳನ್ನು ನಡಸಿದೆ. ಹೀಗೆ ಹೀಗೆ ಇದೆ ಆಕೆಯ ದೇಹಸ್ಥಿತಿ. ಇನ್ನು ಕೆಲವು ವಾರಗಳಲ್ಲಿ ಗುಣಮುಖವಾಗಬಹುದು' ಇತ್ಯಾದಿ ಇತ್ಯಾದಿ ಬರೆದು, ಲಕ್ಕೋಟೆಗೆ ಹಾಕಿ, ಅಂಟಿಸಿ, ಮನೆಯ ಮಗನನ್ನು ಕರೆದು, 'ನಾಳೆ ಸ್ಟಾಂಪುಹಚ್ಚಿ ಅಂಚೆಗೆ ಹಾಕಲೇಬೇಕು. ಮರೆಯಬೇಡ', ಅಂತ ನನ್ನ ಜವಾಬ್ದಾರಿಯನ್ನು ಅವನ ಹೆಗಲಿಗೆ ಹಾಕಿದೆ.

೩

ರಾಮೇಶ್ವರದಿಂದ ಮಾರುತ್ತರ ಬಂದಿತು, ನೂರು ರೂಪಾಯಿನ ಚೆಕ್ಕಿನ ಜತೆಗೆ. 'ತಂಗಿಯಿಂದ ವಾರಕ್ಕೊಂದು ಕಾಗದ ಬರುತ್ತಿದೆ. ಎಷ್ಟೆಲ್ಲಾ ಶ್ರಮ ವಹಿಸಿ ನೀವು ಪರೀಕ್ಷಿಸಿ ಆದರದಿಂದ ಚಿಕಿತ್ಸೆ ಮಾಡುತ್ತಿದ್ದೀರಿ ಎಂದು ಬರೆಯುತ್ತಿದ್ದಾಳೆ. ಈ ವಾರ ಸ್ವಲ್ಪ ವಾಸಿ ಎಂದು ಪ್ರತಿ ವಾರವೂ ಬರೆಯುತ್ತಿದ್ದಾಳೆ. ನಿಮಗೆ ತುಂಬಾ ಆಭಾರಿ. ಇನ್ನೂ ಎರಡು ತಿಂಗಳು ಇಲ್ಲಿ ಕೆಲಸದ ನಿಮಿತ್ತ

ನಿಲ್ಲಬೇಕಾಗಬಹುದು. ನಿಮ್ಮ ಕೆಲಸದ ಜರ್ಝರದಲ್ಲಿ ಇಷ್ಟು ವಿರಾಮಮಾಡಿ ಕೊಂಡು ಪತ್ರ ಬರೆದಿದ್ದಕ್ಕೆ ಅನಂತ ವಂದನೆಗಳು' ಎಂದು ಬರೆದಿದ್ದರು.

ಮರುದಿನವೇ ಆತನ ತಂಗಿಯು ದವಾಖಾನೆಗೆ ಬರುವ ಸರದಿ. ಆಕೆಯು ಬಂದಾಗ ರಾಮೇಶ್ವರದಿಂದ ಕಾಗದ ಬಂದ ವಿಷಯವನ್ನು ತಿಳಿಸಿದೆ. "ಅವ ನೊಬ್ಬ ನನಗೋಸ್ಕರ ಹೊಡಕೋತಾನೆ. ಆದರೆ ನನ್ನ ಹಣೆಯಲ್ಲಿ ಬರೆದಿದ್ದನ್ನ ಯಾರು ತಾನೆ ಸರಿಮಾಡಲಾಗುತ್ತೆ ಡಾಕ್ಟರೇ ! ಅವನೆದುರಿಗಾದರೂ ಚೆನ್ನಾಗಿ ದೀನಿ ಎಂದು ತೋರ್ಪಡಿಸಿಕೊಳ್ಳುವುದಕ್ಕೂ ಈ ಮೊಣಕಾಲು ಮೊಂಡುಹಾಕಿ ಕೊಂಡು ಅವಕಾಶ ಕೊಡುವುದಿಲ್ಲ" ಎಂದು ಹೇಳಿದಾಗ ಆಕೆಯ ಕಣ್ಣಂಚಿನಲ್ಲಿ ಹನಿಗೂಡಿತ್ತು. ಅಣ್ಣನ ವಿಷಯ ನುಡಿದರೆ ಯಾಕೆ ಅಳುಕ್ಕೇ ಶುರುಮಾಡು ತ್ತಾಳೆ ಎಂದು ಅನುಮಾನ ಬಂತು. ಕೂಡಲೆ ಕಾಯಿಲೆಯ ಮಾತನ್ನೆತ್ತಿ, 'ಮೂರು ದಿನದಿಂದ ಆ ಮಾತ್ರೆಗಳನ್ನು ತೆಗೆದುಕೊಂಡಿರಲ್ಲಾ ! ಈಗ ಹೇಗಿದೆ ಯಮ್ಮಾ ! ಅದರಲ್ಲಿ ಗುಣ ಕಾಣದಿದ್ದರೆ ಇನ್ಜಕ್ಷನ್ ಕೊಡ್ತೀನಿ' ಎಂದು ಹೇಳಿದೆ. 'ಸ್ವಲ್ಪ ವಾಸಿ ಡಾಕ್ಟರೇ ! ಆದರೆ ಹಾಸಿಗೆಯಲ್ಲಿ ಹೊರಳಿದರೂ ಕೂಡ ಮಂಡಿ ಛಳಕು ಹೊಡೆಯುತ್ತೆ' ಎಂದಳು. ಇನ್ಜಕ್ಷನ್ ಕೊಟ್ಟು ಕಳಿಸಿದೆ. ಆಕೆಯು ನುಡಿದ ಮಾತುಗಳಿಗೆ ಎರಡು ಅರ್ಥ ಬರುವ ಹಾಗಿತ್ತು. ಕಾಯಿಲೆಯ ವಿಷ ಯಕ್ಕೂ ಅನ್ವಯಿಸಬಹುದಾಗಿತ್ತು. ಆದರೆ "ಅವನೊಬ್ಬ ನನಗೋಸ್ಕರ ಹೊಡಕೋತಾನ" ಎಂದಾಗ ಗಂಡನ ಮೇಲಿನ ಅಸಮಾಧಾನವನ್ನು ಸೂಚಿಸಿರ ಬಹುದೇ ಎಂದು ಅನುಮಾನವೂ ಬಂದಿತು. ಇರಲಿ, ಮುಂದೆ ವಿಚಾರಿಸಿ ಕೊಳ್ಳೋಣ ಎಂದುಕೊಂಡೆ.



೬

ಮಗುವನ್ನು ಕರೆದುಕೊಂಡು ದೇವಕಿ ದವಾಖಾನೆಗೆ ಬಂದಾಗ, "ದಿಳ್ಳಿಗೆ ಹೋಗಿದ್ದೆಯಂತಲ್ಲಮ್ಮಾ. ಹಳ್ಳಿಯವರ ಹಾಡುಗಳನ್ನು ಸಚಿವರ ಮುಂದೆ ಹಾಡಿ ಕನ್ನಡದ ಜಯಭೇರಿಯನ್ನು ಹೊಡೆದುಕೊಂಡು ಬಂದೆಯಂತಲ್ಲಮ್ಮಾ! ಪತ್ರಿಕೆಗಳಲ್ಲೆಲ್ಲಾ ಬಂದಿತ್ತು" ಎಂದೆ. ಸ್ವಾತಂತ್ರ್ಯದಿನೋತ್ಸವದ ಸಲುವಾಗಿ ಎಲ್ಲ ಪ್ರಾಂತ್ಯಗಳಿಂದಲೂ ಸಾಂಸ್ಕೃತಿಕ ತಂಡಗಳು ಹೋಗಿದ್ದುವು. ದೇವಕಿಯು

ಜಾನಪದ ಗೀತೆಗಳನ್ನು ಸೊಂಪಾಗಿ ಹಾಡಿದುದರಿಂದಲೇ, ಕನ್ನಡದ ತಂಡಕ್ಕೆ ಮೊದಲ ಬಹುಮಾನ ಬಂದಿತ್ತು.

"ಏನಮ್ಮಾ! ಏನಾಗಿದೆ ಮಗುವಿಗೆ ? ಅದನ್ನು ಮೊದಲು ಕೇಳೋದು ಬಿಟ್ಟು ನಿನ್ನ ಜಯಭೇರಿಯನ್ನು ವಿಚಾರಿಸುತ್ತಿದ್ದೇನೆ" ಎಂದು ಕೇಳಿದೆ.

"ಮಗುವಿಗೇನೂ ಆಗಿಲ್ಲ, ಡಾಕ್ಟರ್ ಮಾಮ! ನಾನೊಬ್ಬಳೇ ಹೋದ ಸಲ ಬಂದಾಗ ಮಗುವನ್ನು ಏಕೆ ಕರೆದುಕೊಂಡು ಬರಲಿಲ್ಲ ಎಂದು ಕೇಳಿದಿರಿ. ಅದಕ್ಕೇ ಯಾವಾಗ ಬಂದರೂ ಮಗೂನ ಕರೆದುಕೊಂಡು ಬರುತ್ತೇನೆ. ಮಗು ಚೆನ್ನಾಗಿದೆ, ಮಾಮ! ನಾನೂ ಚೆನ್ನಾಗಿದೇನೆ. ದಿಳ್ಳಿಯಲ್ಲಿ ನೆಹ್ರೂ ಅವರೇ ಈ ಪದಕವನ್ನು ನನ್ನ ಕೊರಳಿಗೆ ಹಾಕಿದರು. ನನಗೆ ಹೇಗೋ ಆಯಿತು. ಎಲ್ಲಿದೀನಿ, ನಾನು ಯಾರು, ಏತಕ್ಕೆ ಬಂದೆ, ಎಲ್ಲವೂ ಒಂದು ಕ್ಷಣ ಮರತೇ ಹೋಯಿತು, ಮಾಮ. ಆ ಪದಕವನ್ನು ನಿಮಗೆ ತೋರಿಸುಕ್ಕೆ ಬಂದೆ" ಎಂದು ದೇವಕಿ ಹೇಳಿದಳು.

ಈ ಮಗಳಿಗೆ ನನ್ನಮೇಲೆ ಇಷ್ಟು ವಿಶ್ವಾಸ ಏಕೆ ? ಇದನ್ನು ಏಕಾದರೂ ದೇವರು ದೊರಕಿಸಿಕೊಟ್ಟು ನನ್ನ ಸಣ್ಣತನವನ್ನು ನನಗೇ ತೋರಿಸುತ್ತಿದ್ದಾನೆ ? ಎಂದು ಒಂದರೆಕ್ಷಣ ತೋರಿತು.

"ಇಷ್ಟಕ್ಕೋಸ್ಕರ ಬಂದೆಯಾ! ಹೇಳಿ ಕಳಿಸಿದ್ದರೆ ನಾನೇ ನಿಮ್ಮನೆಗೆ ಬಂದು ಆ ಪದಕವನ್ನು ನೋಡಿ, ನೀನು ಮಾಡಿಕೊಡುವ ಕೆಂಡರೊಟ್ಟಿಯನ್ನು ತಿಂದು ಸಂತೋಷಪಡುತ್ತಿದ್ದೆನಲ್ಲಾ!" ಎಂದೆ.

ದೇವಕಿಯ ಮುಖವು ಕೆಂಚಗಾಯಿತು. ಕಣ್ಣುಗಳು ನನ್ನನ್ನೇ ನೆಟ್ಟು ನೋಡಿದುವು.

"ಮಾಮ! ಹಾಯ್‌ಸ್ಕೂಲಿನ ವಾರ್ಷಿಕೋತ್ಸವದಲ್ಲಿ ಗರತಿಯ ಹಾಡು ಗಳನ್ನು ಹಾಡಿದಾಗ, ಅಧ್ಯಕ್ಷ ಪೀಠದಲ್ಲಿ ನೀವು ನಿಂತು ಬಹುಮಾನವನ್ನು ಕೊಟ್ಟಾಗ, ನನ್ನ ಕೆನ್ನೆಯನ್ನು ಆದರದಿಂದ ಚಿವುಟಿದಿರಿ. ಹಾಡೋದನ್ನು ಕಲಿತರೆ ಸಾಲದಮ್ಮ! ಅಡಿಗೆಯನ್ನು ಕಲಿತುಕೊಳ್ಳಬೇಕು ಎಂದಿರಿ, ಮಾಮ. ಏನು ಕೆಟ್ಟ ಧೈರ್ಯ ಬಂತೋ ನನಗೆ, ಅಡಿಗೆ ಚೆನ್ನಾಗಿ ಮಾಡ್ತೀನಿ, ಬೇಕಾದರೆ ಬಂದುನೋಡಿ, ಎಂದೆ.

"ಮಾರನೆಯ ದಿನ ವರಾಂಡದ ಮೂಲೆಯಲ್ಲಿ ಕೂತಿದ್ದ ಅಮ್ಮ ಕೂಗಿ

'ದೇವಕಿ, ಡಾಕ್ಟರ್ ಬಂದಿದ್ದಾರೆ, ನಿನ್ನ ನೋಡುಕ್ಕೇ ಬಂದಿದ್ದಾರಂತೆ' ಎಂದಾಗ ಅಡಿಗೆ ಮನೆಯಿಂದ ನಾನು ಓಡಿಬಂದೆ. 'ಅಡಿಗೆ ಚೆನ್ನಾಗಿ ಮಾಡ್ತೀನಿ ಎಂದೆಯಲ್ಲಾ. ಏನು ಮಾಡಿಕೊಡ್ತೀಯೋ ಕೊಡು, ಬೆಳಗ್ಗೇನೆ ಜರೂರಾಗಿ ಮನೆಬಿಟ್ಟು ಬಂದೆ' ಎಂದಿರಿ. 'ಕೆಂಡರೊಟ್ಟಿ ಸುಟ್ಟುಕೊಡು, ಬೇಗ ಆಗುತ್ತೆ. ಡಾಕ್ಟರಿಗೆ ತುಂಬಾ ಕೆಲಸ. ಬೇಗ ಹೋಗಬೇಕೇನೋ' ಅಮ್ಮ ಹೇಳಿದರು.

"ಅಮ್ಮನ ಹತ್ತಿರ ನೀವು ಮಾತಾಡ್ತಾ ವರಾಂಡದಲ್ಲಿದ್ದಿರಿ. ಬೇಗ ಕೆಂಡರೊಟ್ಟಿಯನ್ನು ಸುಟ್ಟು, ತಟ್ಟೆಯಮೇಲೆ ಇಟ್ಟು, ಬೆಣ್ಣೆ ಉಪ್ಪಿನಕಾಯಿ ಹಾಕಿ ತಂದುಕೊಟ್ಟೆ. ನೀವು ತಿಂದು ಸಂತೋಷಪಟ್ಟು, ಕೆನ್ನೆ ಚಿವುಟಿದಿರಿ.

"ಆಗ ಆದಹಾಗೆ ದಿಳ್ಳಿಯಲ್ಲೂ ಆಯಿತು. ಅದಕ್ಕೇ ಬೆಳಗ್ಗೆ ಹಿಂದಿರುಗಿದ ಕೂಡಲೆ ಮನೆಗೆ ಹೋಗಿ ಬಟ್ಟೆ ಬದಲಾಯಿಸಿ, ಮಗೂನ ಎತ್ತಿಕೊಂಡು ಬಂದೆ, ಮಾಮ" ಎಂದು ಹೇಳಿದಳು.

ಮಿತಿಯಿಲ್ಲದ ಈ ಮಮತೆಯ ಮುಂದೆ, ಮಾತನಾಡಲು ಸಾಧ್ಯವೆ? ಪದಕವನ್ನು ಕಣ್ಣುತುಂಬ ನೋಡಿದೆ. ದೇವಕಿಯನ್ನೂ ನೋಡಿದೆ. ಅವಳ ಮಗುವಿನ ಕೆನ್ನೆಯನ್ನು ಚಿವುಟಿದೆ.

"ಈ ಪದಕವನ್ನು ನೋಡಿ ನೀವು ನನಗಿಂತ ಹೆಚ್ಚು ಸಂತೋಷಪಡುತ್ತೀರಿ ಅಂತ ಗೊತ್ತಿತ್ತು, ಮಾಮ. ಅದಕ್ಕೇ ಬಂದೆ" ಎಂದು ದೇವಕಿ ಹೇಳಿದಳು. ಎದ್ದು ಹೊರಡಲು ನಿಂತು, ಮಗುವನ್ನು ನನ್ನ ತೊಡೆಯಮೇಲಿಂದ ಕಸಿದುಕೊಂಡು ಹೋದಳು.

ಒಂದರೆಕ್ಷಣದಲ್ಲಿ ತಿರುಗಿ ಬಂದಳು. "ಮಾಮ! ಮರೆತೇಹೋಗಿದ್ದೆ. ಮನೆಯಿಂದ ಹೊರಡುವಾಗ, ಕೊನೆಮನೆ ಗೌರಮ್ಮ ಬಂದು, ಕ್ಷೇಮಸಮಾಚಾರ ವಿಚಾರಿಸಿದಳು. 'ನಾನೂ ಡಾಕ್ಟರ್ ಹತ್ತಿರ ಹೋಗಬೇಕಾಗಿತ್ತು. ನೀನು ಹೋಗುವುದಾದರೆ, ನನಗೂ ಔಷಧಿಯನ್ನು ತೊಗೊಂಡು ಬಾ' ಅಂತ ಹೇಳಿದ್ದಳು. ಗೌರಮ್ಮನ ಔಷಧಿ ಕೊಡುತ್ತೀರಾ?" ಎಂದಳು.

"ಗೌರಮ್ಮನ ಪರಿಚಯ ನಿನಗೆ ಚೆನ್ನಾಗಿದೆಯೆ? ನಿಮ್ಮ ಮನೆಯ ಪಕ್ಕದ ಮನೆಯಲ್ಲಿದ್ದಾರೆಯೆ?" ಎಂದು ಕೇಳುತ್ತಾ ಆಕೆಯ ಔಷಧಿಯನ್ನು ಮಾಡಲು ಕಾಂಪೌಂಡರಿಗೆ ಚೀಟಿಯನ್ನು ಕೊಟ್ಟೆ,

"ಪಕ್ಕದ ಮನೆಯನ್ನು ಕಟ್ಟಿಸಿಕೊಂಡು ಗೌರಮ್ಮನವರು ಬಂದು ಹತ್ತು

ವರ್ಷಗಳಾಯ್ತು. ಚೆನ್ನಾಗಿ ಗೊತ್ತು. ಅಂಥ ಒಳ್ಳೆಯ ಮುತ್ತೈದೆಗೆ ದೇವರು ಯಾಕಾದರೂ ಇಷ್ಟು ಕಷ್ಟ ಕೊಟ್ಟಿದ್ದಾನೋ ತಿಳಿಯೋದೇ ಇಲ್ಲ, ಮಾಮ !" ಎಂದು ದೇವಕಿ ಹೇಳಿದಳು.

ಆ ವೇಳೆಗೆ ಔಷಧಿಯನ್ನು ತಯಾರಿಸಿ ಕಾಂಪೌಂಡರು ತಂದುಕೊಟ್ಟ. "ನಮಸ್ತೇ, ಮಾಮ" ಎಂದು ನಸುನಗುತ್ತಾ ಮಗುವನ್ನು ಎತ್ತಿಕೊಂಡು ದೇವಕಿ ಹೊರಟುಹೋದಳು.

೭

ಒಂದು ವಾರವಾಗಿರಬಹುದು. ಗೌರಮ್ಮ ದವಾಖಾನೆಗೆ ಬಂದಿದ್ದಳು. ನೆಟ್ಟಗೆ ನಡೆದುಕೊಂಡು ಬಂದಿದ್ದಳು.

"ಹೇಗಿದೆಯಮ್ಮಾ ?" ಎಂದು ಯಥಾಪ್ರಕಾರ ಕೇಳಿದೆ.

"ಹೋದ ಸರ್ತಿ ಕಳಿಸಿದ ಔಷಧಿಯಿಂದ ಪೂರ್ಣ ಗುಣವಾಯಿತು ಡಾಕ್ಟರೇ ! ನಾಲ್ಕು ದಿನಗಳ ಹಿಂದೆಯೇ ಬರಬೇಕಾಗಿತ್ತು. ಆದರೆ ಮನೆಯಲ್ಲಿ ಕೆಲಸ ಹೆಚ್ಚಾಗಿತ್ತು. ನನಗೂ ಸ್ವಸ್ಥವಾಗಿತ್ತು. ಅದಕ್ಕೇ ಬರಲಿಲ್ಲ. ಈಗ ಮಂಡಿಯನ್ನು ಬಗ್ಗಿಸಲು ಕಷ್ಟವಿಲ್ಲ. ಅದಕ್ಕೇ ಬರಲಿಲ್ಲ. ನೋವೇ ಇಲ್ಲ ನೋಡಿ" ಎಂದು ಮಂಡಿಯನ್ನು ಬಗ್ಗಿಸಿ ನೀಡಿ ತೋರಿಸಿದಳು.

ದೇವಕಿಯ ಕೈಯಲ್ಲಿ, ಹೋದ ಸಲ ನಾನು, ಎಂದೂ ಕೊಡುತ್ತಿದ್ದ ಔಷಧಿಯನ್ನೇ ಕಳಿಸಿಕೊಟ್ಟಿದ್ದು. ಪರಿಣಾಮಕಾರಿಯಾಗಿ ಇಂತಹ ಗುಣ ಮಾಡಲು ಆ ಔಷಧಿಯು ಕಾರಣವಲ್ಲವೇ ಅಲ್ಲ !

ಇದರ ಮರ್ಮ ಏನಿರಬಹುದು ಎಂದು ಯೋಚಿಸಿದೆ. 'ಬಹಳ ಸಂತೋಷ, ಗೌರಮ್ಮ. ಆದರೆ ಈ ಬೇನೆ ಮರುಕಳಿಸಬಹುದು. ಆದ್ದರಿಂದ ಈ ಔಷಧಿಯನ್ನು ಬಿಡಬೇಡಿ. ಮುಂದಿನ ವಾರವೂ ಬಂದುಹೋಗಿ' ಎಂದು ಹೇಳಿ ಕಳಿಸಿದೆ.

೮

ವೈದ್ಯವಿಜ್ಞಾನದಲ್ಲಿ ಕೆಲವು ಮೂಲಭೂತ ಚುಟುಕಾ ಸೂತ್ರಗಳಿವೆ. ಬಹಳ ಪ್ರಯೋಜನಕಾರಿಯಾಗಿ ಅವುಗಳನ್ನು ಆಚರಣೆಗೆ ತರಬಹುದು. ಒಂದು ಅಂತಹುದು ಇದು :

ನಲವತ್ತು ವಯಸ್ಸಿಗಿಂತ ಕಡಮೆಯಾದವರು 'ಅಸಾಧ್ಯ ಎದೆನೋವು, ಹೃದಯ ತಪ್ಪಿ ಬಡಿಯುತ್ತೆ, ಉಸಿರು ಸಿಕ್ಕಿಹಾಕಿಕೊಳ್ಳುತ್ತೆ' ಎಂದು ಕೆಟ್ಟ ರೋಗದ ಚಿಹ್ನೆಗಳನ್ನೆಲ್ಲಾ ಹೇಳಿಕೊಂಡರೆ, ಅವನಿಗೆ ಅಜೀರ್ಣವಾಗಿದೆಯೆ ? ಯಾವ ಹೋಟೆಲಿನಲ್ಲಿ ಯಾರು ಪುಕಟ್ಟೆ ತಿಂಡಿ ತಿನ್ನಿಸಿದರು ? ಎಂದು ಪರೀಕ್ಷೆ ಮಾಡಿ.

ನಲವತ್ತನ್ನು ಮೀರಿದವರು ಬಂದು 'ಸ್ವಲ್ಪ ಊಟ ಮಾಡಿದರೂ ಹೊಟ್ಟೆ ಉಬ್ಬರಿಸಿಕೊಳ್ಳುತ್ತೆ, ಕಮರುತೇಗು ಬರುತ್ತೆ. ಕರುಳು ಕೂಗುವುದು ದೂರಕ್ಕೆ ಕೇಳಿಸುತ್ತೆ' ಎಂದು ಅಜೀರ್ಣದ ಲಕ್ಷಣಗಳನ್ನೆಲ್ಲಾ ಹೇಳಿದಾಗ. ಅವರ ಹೃದಯ ವನ್ನು ಎಚ್ಚರಿಕೆಯಿಂದ ಪರೀಕ್ಷೆ ಮಾಡಿ.

ಅದೇ ರೀತಿ ಇನ್ನೊಂದು ಸೂತ್ರ :

ದೇಹದ ಅವಯವಗಳ, ಅಂಗಾಂಗಗಳ ಬೇನೆಯನ್ನು ಶಾಸ್ತ್ರೀಯವಾಗಿ ಮನಸ್ಸಿಟ್ಟು ಪರೀಕ್ಷೆ ಮಾಡಿಯೂ ತಿಳಿಯಲು ಸಾಧ್ಯವಾಗದೆ ಇದ್ದರೆ, ಅಡ್ಡಾ ದಿಡ್ಡಿ (Irrelevent) ಕಾಣುವ ಪ್ರಶ್ನೆಗಳನ್ನು ಕೇಳಿ. ಬರುವ ಉತ್ತರಗಳಿಂದ ಮಾನಸಿಕ ಅಸಮಾಧಾನಕ್ಕೆ ಮೂಲಕಾರಣ ಯಾವುದೆಂಬುದನ್ನು ಊಹಿಸ ಬಹುದು. ಅಡ್ಡಾದಿಡ್ಡಿ ಪ್ರಶ್ನೆಗಳನ್ನು ಕೇಳುವಾಗ ನಮ್ಮ ಮನಸ್ಸಿನಲ್ಲಿ ರೋಗಿಗೆ ಇಂತಿಂತಹ ಮಾನಸಿಕ ಅಸಮಾಧಾನವಿರಬಹುದೇ ಎಂದು ಊಹಿಸಿ ಕೊಂಡರೆ ಒಳಿತು. ಈ ಪ್ರಯೋಗವನ್ನೇ Psycho-Analysis ಎಂದು ಹೇಳುವುದು,

ಇದರಲ್ಲಿಯೂ ಪ್ರಯೋಜನ ಕಂಡುಬರದೇ ಇದ್ದಾಗ, ಯಾವುದೊಂದು ಖಚಿತವಾದ ಅಭಿಪ್ರಾಯವನ್ನೂ ಇಟ್ಟುಕೊಳ್ಳದೆ, ಕೇವಲ ಲೋಕಾಭಿರಾಮ ವಾಗಿ ಮಾತನಾಡಬಹುದು. ಅನಿರೀಕ್ಷಿತವಾಗಿ ಬರುವ ಉತ್ತರಗಳಿಂದ,

ಬೇನೆಯ ಮಾನಸಿಕ ಮೂಲವನ್ನು ಊಹಿಸಬಹುದು. ಅನಿರೀಕ್ಷಿತವಾಗಿ ಬರುವುದು ಅದೃಷ್ಟವಾಗಬಹುದು ಅಲ್ಲವೆ ?

ಇನ್ನೊಂದು ಪರಿಣಾಮಕಾರೀ ಸೂತ್ರವಿದೆ.

ಯಾವನಾದರೂ ರೋಗಿಯು 'ಬಲಗಡೆ ತಲೆನೋಯುತ್ತೆ. ಎಡಗಡೆ ಎದೆಯಲ್ಲಿ ಒಂದೊಂದು ಸರ್ತಿ ಚಿವುಟಿದ ಹಾಗಾಗುತ್ತೆ. ಬಲಭಾಗದ ಸೊಂಟ ಆಗಾಗ್ಗೆ ಹಿಡಿದುಕೊಳ್ಳುತ್ತೆ. ಎಡ ಮೊಣಕಾಲು ಜೋಮು ಹಿಡಿಯುತ್ತೆ. ಒಂದೊಂದು ಸರ್ತಿ ಉಸುರೆಲ್ಲಾ ಉರಿಯುತ್ತೆ' ಎಂದು ಚಿಹ್ನೆಗಳ ಪಟ್ಟಿಯನ್ನು ಹೇಳಿದರೆ, ಇಂತಹ ಚಿಹ್ನೆಗಳಿಗೆಲ್ಲಾ ವೈದ್ಯಶಾಸ್ತ್ರದ ದೃಷ್ಟಿಯಿಂದ ಯಾವುದೊಂದು ಸಂಬಂಧವೂ ಇರದೆ ಇದ್ದರೆ, ಆಗ ದೇಹಪರೀಕ್ಷೆಗೆ ಹೆಚ್ಚು ಗಮನ ಕೊಡಬೇಕಾಗಿಲ್ಲ. ಆಗ ರೋಗಿಯ ಮಾನಸಿಕ ಸಮಾಧಾನವು ಹೇಗಿದೆ ಎಂದು ವಿಚಾರಿಸಬೇಕು.

ಮನೆಯಲ್ಲಿ ಇರುವವರೊಡನೆ ರೋಗಿಯು ಯಾವ ರೀತಿಯ ಸಂಬಂಧವನ್ನಿಟ್ಟುಕೊಂಡಿದ್ದಾನೆ ? ಅದನ್ನು ಅರಿಯಬೇಕು. ಕೋಪಿಷ್ಠ ಹಾಗೂ ಮುಪ್ಪು ಬಂದ ತಂದೆಯೊಡನೆ ಏಗಬೇಕೆ ? ಅಥವಾ ತಾಯಿ ಹೆಂಡತಿಯರ ಸ್ವಾಭಾವಿಕ ಜಗಳದಲ್ಲಿ ಶಾಂತಿದೂತನಾಗಿರಬೇಕೆ ! ಹಾಗೂ ಹೆಂಡತಿಯ ಕಡೆಯವರಾರಾದರೂ ಬಂದು ಮನೆಯಲ್ಲೇ ಓದುವುದಕ್ಕೆ ಉಳಿದುಕೊಂಡು, ಕಿರಿಕಿರಿಕೊಡುತ್ತಾರೆಯೆ ? ಇಲ್ಲದೆ ತನ್ನ ಅಣ್ಣತಮ್ಮಂದಿರೊಂದಿಗೆ ಒಟ್ಟು ಸಂಸಾರ ಮಾಡುತ್ತಿದ್ದಾನೆಯೆ ? ಹಾಗಾದಾಗ ಜಡೆ ಹಾಕಿದ ಎರಡು ತಲೆ ಒಂದೇ ಸೂರಿನ ಕೆಳಗೆ ಬಾಳುವುದು ಅಸಾಧ್ಯ ಎನ್ನುವುದು ಎಲ್ಲರಿಗೂ ತಿಳಿದ ವಿಷಯ. ಹೀಗೆ ಮನೆಯ ವಾತಾವರಣವನ್ನು ತಿಳಿಯಬೇಕು.

ಸಂಪಾದಿಸಲು ದುಡಿಮೆ ಮಾಡುವ ಸ್ಥಳದಲ್ಲಿರುವ ಮೇಲಧಿಕಾರಿಗಳು, ಜತೆ ಕೆಲಸಗಾರರು, ಇತರ ಸಿಬ್ಬಂದಿಯೊಡನೆ ಯಾವ ರೀತಿ ಹೊಂದಿಕೊಂಡಿದ್ದಾನೆ ಎಂಬುದನ್ನು ತಿಳಿಯಬೇಕು.

ಹೆಂಗಸು ರೋಗಿಯಾದರೆ ಅಕ್ಕಪಕ್ಕದ ಮನೆಯವರೊಂದಿಗೆ ಆಕೆ ಹೇಗೆ ನಡೆದುಕೊಳ್ಳುತ್ತಾಳೆ ? ಮನೆ ಕೆಲಸವಲ್ಲದ ಬೇರೆ ಏನಾದರೂ ಹವ್ಯಾಸವನ್ನಿಟ್ಟುಕೊಂಡಿದ್ದಾಳೆಯೆ ? ಮನೆ ಕೆಲಸ ಮುಗಿದು ವಿರಾಮಕಾಲ ಸಿಗುತ್ತದೆಯೆ ? ಹಾಗೆ ವಿರಾಮ ಸಿಕ್ಕಾಗ ಆಕೆ ಏನು ಮಾಡುತ್ತಾಳೆ ? ಎಲ್ಲವನ್ನೂ ವಿಚಾರಿಸಬೇಕು.

೬

ಗೌರಮ್ಮ ಮುಂದಿನ ವಾರ ಬಂದಾಗ, "ಯಾಕೋ ಡಾಕ್ಟರೆ! ತಿರುಗಿ ಮಂಡಿ ತುಸು ನೋವುಕ್ಕೆ ಶುರುವಾಗಿದೆ" ಎಂದಳು. "ನಾನು ಹೇಳುತ್ತಿಲ್ಲ ವೇನಮ್ಮಾ, ಈ ಬೇನೆಯು ಮರುಕಳಿಸಬಹುದು ಎಂದು ; ಒಂದು ಸಲ ಅಥವಾ ಎರಡು ಸಲ ಮರುಕಳಿಸಬಹುದು. ಅನಂತರ ಸಂಪೂರ್ಣವಾಗಿ ಗುಣವಾಗು ತ್ತದೆ. ಹೀಗಾಯ್ತಲ್ಲ ಎಂದು ನಿರಾಶರಾಗಬಹುದು. ನಿರಾಶೆಯು ಹುಟ್ಟಿ ಬೇರೂರಿಕೊಂಡರೆ ಖಾಯಿಲೆಗಳಿಗೆ ಹಾಸಿಗೆ ಹಾಕಿಕೊಟ್ಟಂತಾಗುತ್ತೆ. ಈ ಸರ್ತಿ ಬೇಗ ಗುಣವಾಗುವುದು ಖಂಡಿತ. ಯಾವ ಮದ್ದು ದೇಹಕ್ಕೆ ಒಂಟುತ್ತೆ ಎನ್ನುವುದು ತಿಳಿದಿದೆಯಲ್ಲಾ" ಎಂದು ಉತ್ತೇಜಕ ಮಾತುಗಳನ್ನಾಡಿದೆ. ಆಮೇಲೆ ಆ ಮಾತು ಈ ಮಾತು ಆಡುಕ್ಕೆ ಶುರುಮಾಡಿದೆ.

"ನಿಮ್ಮ ಕೇರೀಲಿ ಈ ಸರ್ತಿ ಗಣೇಶನ ಹಬ್ಬವನ್ನು ದೊಡ್ಡದಾಗಿ ಯಾರಾದರೂ ಆಚರಿಸಿದರೇನಮ್ಮಾ? ಹಾಗಾಗಿದ್ದರೆ ಅಲ್ಲಿಗೆ ಹೋಗಿ ಸ್ವಲ್ಪ ಹೊತ್ತು ಒಂದೇ ಕಡೆ ಕೂತುಕೊಂಡು, ಅವೇಳೆ ಛಳಿಯಲ್ಲಿ ನಡೆದು ಬಂದರೆ ಮೊಣಕಾಲು ನೋವು ತಿರುಗಿ ಕಾಣಿಸಿಕೊಳ್ಳಬಹುದು" ಎಂದೆ.

"ಎಲ್ಲೂ ಹೋಗುಲ್ಲ ಡಾಕ್ಟರೇ! ಸದ್ಯ ಗಣೇಶನೂ ಬೇಡ, ಗೌರಿಯೂ ಬೇಡ. ನೋವಿಲ್ಲದೆ ಕೂತು ನಿಂತು ಓಡಾಡೋ ಹಾಗಾದರೆ ಸಾಕು" ಎಂದಳು.

"ಗಣೇಶನ ಹಬ್ಬಾನ, ಹಾಗಾದರೆ ಯಾರೂ ಅದ್ದೂರಿಯಿಂದ ಮಾಡಲಿಲ್ಲ ಅನ್ನಿ" ಎಂದು ಅದೇ ಜಾಡಿನಲ್ಲಿ ಮುಂದುವರಿದೆ.

"ನಮ್ಮ ರಸ್ತೇಲೆ ಇರುವ ದೇವಕಿಯಮ್ಮನ ಮನೇಲೆ ಮಾಡಿದರು ಡಾಕ್ಟರೇ! ಐದು ದಿವಸ ಮಾಡಿದರು. ಸಂಜೆ ಸಂಗೀತ ಕಚೇರಿ, ಹರಿಕಥೆ, ಭಜನ ಎಲ್ಲವನ್ನೂ ಮಾಡಿದರು. ಮನೆಮುಂದೇನೆ ಚಪ್ಪರ ಹಾಕಿಸಿ, ಅದ್ದೂರಿ ಯಿಂದ ಮಾಡಿದರು. ನಮ್ಮನೆಗೂ ಕೇಳಿಸುತ್ತಿತ್ತು. ಆದರೆ ಹೋಗಿ ಪೂಜೆ ನೋಡಿ ಮಂಗಳಾರತಿ ತೆಗೆದುಕೊಂಡು ಬರೋ ಪುಣ್ಯಾನ ಪಡೆದುಕೊಂಡು ಬಂದಿರಬೇಕಲ್ಲ! ನಾನಾಯ್ತು. ಮನೆಯಾಯ್ತು. ಮಕ್ಕಳನ್ನ ನೋಡಿ ಕೊಳ್ಳೋದು, ಗಂಡನ್ನ ಕಾಯೋದು, ಇದೇ ಸಾಕಾಗಿಬಿಡುತ್ತೆ, ಸುಸ್ತು ಬಡಿದು ಹೋಗುತ್ತೆ" ಎಂದಳು.

ಗಂಡನ್ನ ಯಾಕೆ ಕಾಯಬೇಕು ಎಂದು ಅನ್ನಿಸಿ, ಮನಸ್ಸಿನಲ್ಲೇ ನಿಂತಿತು. "ನಿಮಗನಕ ಮಂಡಿನೋವು. ಆದರೆ ನಿಮ್ಮ ಯಜಮಾನರೂ ಸಂಗೀತಕ್ಕೆ ಅಥವಾ ಹರಿಕಥೆಗೆ ಹೋಗಲಿಲ್ಲ ಅಂದರೆ ಅವರಿಗೆ ಅಂಥಾದ್ದೆಲ್ಲ ಇಷ್ಟವಿಲ್ಲವೆ?" ಎಂದೆ.

"ಹೋಗಬೇಕು ಅಂತ ಎರಡು ದಿನ ಹೊರಟರು. ನಾನೇ ತಡೆದೆ. 'ಮಂಡಿ ಹಿಡಿದು ಬಿದ್ದುಕೊಂಡು ನರಳ್ತಾ ಇದೀನಿ, ಸ್ವಲ್ಪ ಹೊತ್ತು ನೀರು ಕಾಯಿಸಿ ಶಾಖ ಕೊಟ್ಟರೆ ಎಷ್ಟೋ ಕಡಿಮೆಯಾಗಬಹುದು. ನೀವು ಮನೇಲಿದ್ದರೆ ಮಕ್ಕಳೂ ಓದಿಕೊಂಡು ಬರಕೊಂಡಿರುತ್ತವೆ. ಇಲ್ಲದೆ ಇದ್ದರೆ ರಾಕ್ಷಸ ಮಕ್ಕಳು, ಅವುಗಳ ಆವಾಂತರ ತಡೆಯುಕ್ಕಾಗುಲ್ಲ' ಎಂದು ಹೇಳಿ ನಿಲ್ಲಿಸಿಕೊಂಡೆ. ಗಂಡ ಅಂದರೆ ಅಷ್ಟೂ ಮಾಡಬೇಡವೇ, ಡಾಕ್ಟರೇ!" ಎಂದು ಬಿರಬಿರನೆ ಹೇಳಿದಳು.

"ಮಾಡದೇ ಉಂಟೇಮ್ಮ! ಕಷ್ಟ, ಸಂಕಟ, ನೋವು ಅಂದರೆ ಗಂಡ ಹೆಂಡತಿ ಒಬ್ಬರಿಗೊಬ್ಬರು ನೆರವಾಗದೆ, ಹೇಗಮ್ಮಾ! ಹಾಗೆ ನೆರವಾಗದೆ ಇದ್ದರೆ ಅವರನ್ನು ಗಂಡ ಹೆಂಡತಿ ಅಂತ ಕರೆಯುಕ್ಕಾಗುತ್ತ್ಯೆ?" ಎಂದು ಒಪ್ಪಿ ನುಡಿದೆ.

"ಮನೇಲಾದರೂ ಹಬ್ಬ ಮಾಡಿದಿರಾ? ಕೆಲಸದೋರು ಯಾರೂ ಸಿಗುಲ್ಲವೆ? ಭಕ್ಷ್ಯಮಾಡಿಟ್ಟು ಹೋಗೋರು ನಮ್ಮಕಡೆ ಸಿಗುತ್ತಾರೆ" ಎಂದೆ.

"ನಮ್ಮ ಕಡೆಯೂ ಸಿಗ್ತಾರೆ, ಅಚ್ಚಮ್ಮ ಅಂತ ಒಬ್ಬಾಕೆ ಇದಾರೆ. ಆಕೆ ಬಂದು ಮಾಡಿಟ್ಟು ಹೋಗ್ತಾಳೆ. ಹಬ್ಬಾನ ಮಾಡೋದೇ ಬೇಡ ಅಂತ ಅನ್ನಿಸ್ತು. ಈ ನೋವಿನಲ್ಲಿ ಹಬ್ಬ ಏಕೆ ಅನ್ನಿಸ್ತು. ಆದರೆ ಗೌರಿಹಬ್ಬಕ್ಕೆ ರಾಮೇಶ್ವರ ದಿಂದ ಕಂತ್ರಾಲದ ಸೀರೆಯೊಂದನ್ನೂ ಮಕ್ಕಳಿಗೆ ಬಟ್ಟೆಗಳನ್ನೂ ನಮ್ಮಣ್ಣ ಕಳಿ ಸಿದ್ದ. ಹತ್ತು ಹದಿನೈದು ದಿನಗಳ ಹಿಂದೆಯೇ ಆ ಭಾಂಗಿ ಬಂದಿತ್ತು, ಅದರಲ್ಲೇ ಮುಲಾಮಿನ ಡಬ್ಬಿ ಒಂದನ್ನು ಕಳಿಸಿದ್ದ. ನಿಮಗೆ ಹೇಳಲಿಲ್ಲವೇ ಡಾಕ್ಟರೇ! 'ಡಾಕ್ಟರಿಗೆ ತಿಳಿಸಿ ಮುಲಾಮನ್ನು ಮಂಡಿಗೆ ಹಚ್ಚಿಕೋ, ದಿನಕ್ಕೆ ಮೂರು ಸರ್ತಿ ಬಳಿದು ಶಾಖ ಕೊಡು. ಡಾಕ್ಟರು ಕೊಟ್ಟ ಚಿಕಿತ್ಸೆಯನ್ನೂ ಮುಂದುವರಿಸು' ಅಂತ ಬರೆದಿದ್ದ. ಅದನ್ನು ಹಚ್ಚಿಕೊಂಡ ಮೇಲೆ ಎರಡು ದಿನಗಳಲ್ಲಿ ತುಂಬಾ ಹುಷಾ ರಾಯಿತು. ಸದ್ಯ ಪೀಡೆ ತೊಲಗಿತು ಅಂತಿದ್ದೆ. ತಿರುಗಿ ಆಲೆಮನೆಯ ದೆವ್ವದ ತರಹ ಇಲ್ಲೇ ಬಂದೆ ಕೂತಿದೆ ಅಂತ ಬಾಯಿಬಿಡ್ತಲ್ಲಾ ಡಾಕ್ಟರೇ" ಎಂದಳು.

ಹೋದ ವಾರ ಯಾಕೆ ಗುಣವಾಯ್ತು ಅಂತ ಈಗ ಸ್ಪಷ್ಟವಾಗಿ ತಿಳಿಯಿತು. ಔಷಧಿಯನ್ನು ಕೊಟ್ಟು, ಆ ಮುಲಾಮನ್ನೇ ಹಚ್ಚೀಮ್ಮಾ ಎಂದು ಹೇಳಿ ಕಳಿಸಿಕೊಟ್ಟೆ.

೧೦

ದವಾಖಾನೆಯಿಂದ ಮಧ್ಯಾಹ್ನ ಒಂದು ಗಂಟೆ ಹೊತ್ತಿಗೆ ಮನೆಗೆ ಹೊರಟ್ಟಿದ್ದೆ. ಹತ್ತಿರದಲ್ಲೇ ಇದ್ದ ಬಸ್ ನಿಲ್ದಾಣದಲ್ಲಿ ಒಂದು ಕೈಯಲ್ಲಿ ಮಗು, ಇನ್ನೊಂದು ಕೈಯಲ್ಲಿ ತರಕಾರಿ ಚೀಲ ಹೊತ್ತುಕೊಂಡು ಬಸ್ಸಿಗಾಗಿ ದೇವಕಿ ಕಾದು ನಿಂತಿದ್ದಳು.

"ನಿಮ್ಮ ಮನೆಯ ಮುಂದೆಯೇ ಹೋಗಬೇಕು. ನಿನ್ನ ಬಿಟ್ಟುಹೋಗ್ತೀನಿ, ಬಾ, ದೇವಕಿ" ಎಂದು ಕೂಗಿ ಕರೆದು, ಕಾರಿನಲ್ಲಿ ಕೂರಿಸಿಕೊಂಡು ಹೊರಟೆ,

"ಇದೇನೇ ! ಇಷ್ಟೆಲ್ಲಾ ತರಕಾರಿ ! ಮಗುವಿಗೆ ಹುಟ್ಟಿದ ಹಬ್ಬವೇನೇ" ಎಂದೆ.

"ಇಲ್ಲ ಮಾಮ ! ಹಿರಿಯರು ಬರ್ತಾರೆ ನಾಡಿದ್ದು. ಸರ್ಕೀಟಿನಿಂದ ಇವರು ನಾಳೆ ರಾತ್ರಿ ಬರ್ತಾರೆ. ಅದಕ್ಕೇ ಬಿಡುವಾಗಿದ್ದಾಗ ಬೇಕಾದ ಸಾಮಾನನ್ನು ತಂದೆ. ಸ್ವಲ್ಪ ಹೊತ್ತಾಗಿಹೋಯ್ತು" ಎಂದು ವಿವರಣೆ ಹೇಳಿದಳು.

ಬಿಸಿಲಲ್ಲಿ ನಡೆದು ನಿಂತು ಬೆವತು ಹೋಗಿದ್ದಳು, ದೇವಕಿ.

"ಅವ್ರೂರಿ ಗಣೇಶನ ಪೂಜೆ ಮಾಡಿದಿರಂತೆ ನಿಮ್ಮ ಮನೇಲಿ, ಗೌರಮ್ಮನೋರು ಹೇಳಿದರು" ಎಂದೆ.

"ವರ್ಷವರ್ಷವೂ ಮಾಡೋಹಾಗೇನೆ ! ಆದರೆ ಆಕೆ ಬಂದಿರಲಿಲ್ಲವಲ್ಲ ! ಹೇಗೆ ಹೇಳಿದರು ? ಮಾಮ ! ಮೂರು ವರ್ಷದ ಹಿಂದೆ ಬಂದಿದ್ದಾಗ ಕೃಷ್ಣನನ್ನು ಹಸೆಗೆ ಕರೆದ ಹಾಡುಗಳನ್ನು ಹೇಳಿದರು. ಎಷ್ಟು ಚೆನ್ನಾಗಿ ಹೇಳಿದರು ಅಂತ ! ಆದರೆ ಆಕೆ ಗಂಡನಿಗೆ ಏನೋ ಅವಮಾನವಾಯ್ತು. ಆಮೇಲಿಂದ ಆಕೆ ಎಲ್ಲೂ ಹೋಗುಲ್ಲ" ಎಂದಳು ದೇವಕಿ.

"ಕೃಷ್ಣನನ್ನು ಹಸೆಗೆ ಕರೆದ ಹಾಡುಗಳನ್ನು ಹೆಂಡತಿ ಹೇಳಿದರೆ ಗಂಡನಿಗೆ ಯಾಕೆ ಅವಮಾನ ಆಗಬೇಕು ?" ಎಂದು ಕೇಳಿದೆ.

"ಹಾಗಲ್ಲ. ಮಾವ! ಹಾಡಿದ್ದಕ್ಕೆ ಅವಮಾನ ಅಲ್ಲ ಗೌರಮ್ಮನ ಯಜಮಾನರು ಅವತ್ತಿನ ಸಭೆಯಲ್ಲಿ ಹತ್ತು ಹನ್ನೆರಡು ವರ್ಷದ ಹುಡುಗಿಯೊಬ್ಬಳ ಪಕ್ಕದಲ್ಲಿ ಕುಳಿತಿದ್ದರಂತೆ. ಹಾಡುಗಿಯ ಕೊರಳಲ್ಲಿ ಮುತ್ತು ಹವಳದ ಸರ ಇತ್ತಂತೆ. ಆ ಸರವನ್ನು ಗೌರಮ್ಮನ ಯಜಮಾನರು ತೆಗೆದಿದ್ದನ್ನು ಹಿಂದೆ ಇದ್ದವರೊಬ್ಬರು ನೋಡಿದರಂತೆ. ಹುಡುಗಾಟಕ್ಕೆ, ಕೀಟಲೆಮಾಡುಕ್ಕೆ ತೆಗೆದಿದ್ದಾರೆ ಎಂದುಕೊಂಡರಂತೆ. ಮಂಗಳಾರತಿ ಮುಗಿದಾಗ ಆ ಹುಡುಗಿ ಎದ್ದು, ಕತ್ತಿನ ಸುತ್ತ ಕೈಯಾಡಿಸಿ "ಅಯ್ಯೋ! ನನ್ನ ಸರ ಕಳೆದುಹೋಯಿತು" ಎಂದು ಅಳುಕ್ಕೆ ಶುರುಮಾಡಿದಳಂತೆ. "ಹಾಕ್ಕೊಂಡು ಬಂದಿದ್ದಯೋ ಅಮ್ಮ? ಮನೆಯಲ್ಲಿ ಮರೆತು ಬಂದಿದ್ದೆಯೇನೋ" ಅಂತ ಗೌರಮ್ಮನ ಗಂಡ ಸಮಾಧಾನ ಮಾಡಿದರಂತೆ.

"ಹಿಂದೆ ಇದ್ದು ನೋಡಿದ್ದವರು, ಗೌರಮ್ಮನ ಗಂಡನ ಜೇಬಿಗೆ ಥಟ್ಟಾಗಿ ಕೈಹಾಕಿ ಸರವನ್ನು ತೆಗೆದು, ಇಷ್ಟು ಧಡಿಯರಾಗಿದ್ದೀರಿ, ಇಂಥ ಕೆಲಸಮಾಡುಕ್ಕೆ ನಾಚಿಕೆ ಬರುಲ್ಲವೇನ್ರಿ ಎಂದು ರೇಗಿ, ಆತನ ಕೆನ್ನೆಗೆ ಎರಡು ಬಿಗಿದರಂತೆ. ಏಟು ತಿಂದು ಮಾತಾಡದೆ ತಲೆ ಬಗ್ಗಿಸಿಕೊಂಡು ಆತ ಮನೆಗೆ ಹೊರಟು ಬಂದರಂತೆ. ಅವರ ಹಿಂದೆ ಹೋಗಲು ಓಡಿದ ಗೌರಮ್ಮನನ್ನು ಹಿಡಿದು ಅರಿಶಿನ ಕುಂಕುಮ ಕೊಟ್ಟು ಕಳಿಸೋದೇ ಕಷ್ಟವಾಯಿತು. ಮುತ್ತೈದೆಯರು ಅರಿಶಿನ ಕುಂಕುಮ ತೆಗೆದುಕೊಳ್ಳದೇ ಹೋಗೋದು ಲಕ್ಷಣವೇ ಮಾವ!" ಎಂದಳು ದೇವಕಿ.

ದೇವಕಿಯ ಮನೆಬಾಗಿಲಿಗೆ ಅಷ್ಟು ಹೊತ್ತಿಗೆ ಬಂದಿದ್ದೆವು. "ಕಾಫಿರೊಟ್ಟಿ ಮಾಡಿಕೊಡ್ತೀನಿ ಬಂದರೂ ಈಗ ನಿಲ್ಲೋ ಹಾಗಿಲ್ಲ, ದೇವಕಿ!" ಎಂದು ಹೇಳುತ್ತಾ ಕಾರನ್ನು ನಿಲ್ಲಿಸಿ, ಆಕೆಯನ್ನು ಇಳಿಸಿ. ಮುಂದೆ ಹೊರಟೆ.

## ೧೧

ಆರೆಂಟು ವಾರಗಳಾದುವು. ಗೌರಮ್ಮನ ಚಿಕಿತ್ಸೆ ಎಂದಿನಂತೆ ನಡೆಯುತ್ತಿತ್ತು. ರಾಮೇಶ್ವರದಿಂದ ಆಕೆಯ ಅಣ್ಣ ಬಂದಿದ್ದ. ಭೇಟಿಗೆ ಬಂದಾಗ ಹೇಳಿದೆ: "ನೋಡಪ್ಪಾ! ಕೆಲವರಿಗೆ ಸಣ್ಣಪುಟ್ಟ ಸಾಮಾನುಗಳನ್ನು ಕದಿಯುವ

ಗೀಳು ಇರುತ್ತೆ. Kleptomania ಎಂದು ಅದಕ್ಕೆ ಹೆಸರು. ನಿನ್ನ ಭಾವನಿಗೆ ಈ ಗೀಳಿನ ಬೇನೆ! ನಿನ್ನ ತಂಗಿಗೆ ಇದು ಚೆನ್ನಾಗಿ ಗೊತ್ತಿದೆ. ಗಂಡನ ಜತೆಯಲ್ಲಿ ಎಲ್ಲೂ ಧೈರ್ಯವಾಗಿ ಹೋಗುವ ಹಾಗಿಲ್ಲ. ಹೋಗುವ ಆಸೆ ಅತಿಯಾಗಿದೆ. ಸಾಕಷ್ಟು ಬೇಸರವು ಗಂಡನ ಮೇಲೂ ಬಂದಿರುತ್ತೆ".

"ಮಂಡಿನೋವು ಬಂದರೆ ಹೊರಗೆ ಹೋಗೋ ಗೋಜಿಲ್ಲ. ಗಂಡನನ್ನು ಕಾಯುತ್ತಾ ಮನೆಯಲ್ಲಿರಬಹುದು. ಇದೇ ಆಕೆಯ ಮನಸ ಅಂತರಾಳದ ಯತ್ನ. ಇರಬಹುದಾದ ದೈಹಿಕ ಕಾರಣಗಳಿಲ್ಲವೆಂದು ಖಚಿತಮಾಡಿಕೊಂಡು ಸಾಂಪ್ರದಾಯಿಕ ಚಿಕಿತ್ಸೆ ಮಾಡಿದೆ. ಯಾವ ಗುಣವೂ ಕಂಡುಬರಲಿಲ್ಲ.

"ಗೌರೀಹಬ್ಬಕ್ಕೆ ಸೀರೆ ಕುಂಕುಮ ಅರಿಸಿನ ಕಳಿಸಿದಾಗ, ಮುಲಾಮನ್ನೂ ಕಳಿಸಿದ್ದೀರಿ, ನೀವು. ಅಣ್ಣನ ಆದರದ ಸಂತೋಷದಲ್ಲಿ ಮುಲಾಮನ್ನು ಹಚ್ಚಿ ಗುಣ ಹೊಂದಿದಳು. ಆಗಲೇ ನನಗೆ ತಿಳಿದಿದ್ದು, ಈಕೆಯ ಮಂಡಿ ನೋವಿಗೆ ಮನದ ಆಕ್ಲೇಶವೇ ಕಾರಣ ಎಂಬುದು".

"ಈಗ ನೀವು ಹಿಂತಿರುಗಿದ್ದೀರಿ. ನಿಮ್ಮ ತಂಗಿಗೆ ಇದೆಲ್ಲವನ್ನೂ ನೀವು ಸಾವಧಾನವಾಗಿ ತಿಳಿಸಿ. ಆಯುರ್ವೇದದ ಚಿಕಿತ್ಸೆಯನ್ನೇ ನೀವು ಮಾಡಿ. ಆಕೆ ಬಹಳ ಜಾಣೆ. ಬೇಗ ತಿಳಿದುಕೊಳ್ಳುತ್ತಾಳೆ. ಮಕ್ಕಳನ್ನು ಪೋಷಿಸುವ ಹೊಣೆ ಅವಳದು ಎಂದು ಸೂಚಿಸಿ. ಗುಣಮುಖಳಾಗುತ್ತಾಳೆ" ಎಂದು ವಿಶದವಾಗಿ ವಿವರಿಸಿದೆ.

"ನೀವು ಹೇಳಿದಂತೆಯೇ ಮಾಡುತ್ತೇನೆ. ಭಾವನಿಗೆ ಈ ಕದಿಯುವ ಗೀಳು ಇದೆ ಎಂದು ಮದುವೆಯಾದ ಹೊಸದರಲ್ಲೇ ಅನುಮಾನ ಬಂದಿತ್ತು, ನಮಗೆಲ್ಲಾ. ದೇವರು ಮಾಡಿಸಿದಂತೆ ಆಗಲಿ. ಮನುಷ್ಯಪ್ರಯತ್ನ ಮಾಡುವುದನ್ನು ಮಾಡುತ್ತೇನೆ" ಎಂದು ಆತ ಹೇಳಿ ಹೋದ.

ನಾನು ಹೇಳಿದುದರಲ್ಲಿ ಆತನಿಗೆ ನಂಬಿಕೆ ಉಂಟಾದ ಹಾಗೆ ತೋರಲಿಲ್ಲ.

ಕಾರ್ತೀಕ ಮಾಸದಲ್ಲಿ ನಮ್ಮನೆಗೆ ಆತ ತಂಗಿಯೊಡನೆ ಒಂದು ದಿನ ಬಂದ. ತಟ್ಟೆ ತುಂಬ ಹಣ್ಣು, ಕಲ್ಲುಸಕ್ಕರೆ, ಎಲಡಿಕೆ ಎಲ್ಲವನ್ನೂ ಹೊತ್ತುಕೊಂಡು ನಡೆದು ಬಂದ ಆಕೆಗೆ ಮಂಡಿ ಗುಣವಾಗಿದೆ ಎಂದು ಖಾತರಿಯಾಯಿತು.

"ಎಷ್ಟೆಲ್ಲಾ ಕಷ್ಟಪಟ್ಟು ಜಾಣತನದಿಂದ ಈಕೆಯ ಕಾಯಿಲೆಯ ಮೂಲ ಭೂತ ಕಾರಣವನ್ನು ಕಂಡುಹಿಡಿದಿರಿ. ಡಾಕ್ಟರೇ! ಮೊದಲು ನಂಬಿಕೆ ಬರಲಿಲ್ಲ

ಆದರೂ ನೀವು ಹೇಳಿದಂತೆ ಮಾಡಿದೆ. ಮೂರು ವಾರದಲ್ಲಿ ಜಿಂಕೆ ತರಹ ಚಿಮ್ಮಿ ನಡೆಯಲಿಕ್ಕೆ ಶುರುಮಾಡಿದಳು. ಧನ್ಯವಾದಗಳನ್ನು ಹೇಳಿ ಹೋಗಲು ಬಂದೆವು" ಎಂದು ಹೇಳಿ ನಮಸ್ಕರಿಸಿ ಇಬ್ಬರೂ ಹಿಂತಿರುಗಿದರು.



## ೧೨

### ಕಲಿತ ಪಾಠ

ಒಂದು ತಪ್ಪು ಮಾಡಿದ್ದೆ. ಮೊಣಕಾಲು ನೋವು ಎಂದು ಆಕೆಯು ಬಂದಾಗ ಮುಖವೆಲ್ಲಾ ಕೆಂಪೇರುತ್ತಿತ್ತು, ಬೆವರುತ್ತಿದ್ದಳು. ಇವೆರಡೂ ಮನಸ್ಸಿನ ಕಾತರದ–Anxiety Neurosis–ರೋಗದ ಮುಖ್ಯ ಚಿಹ್ನೆಗಳು. ಕೀಲು ಊದಿರದೆ ಇದ್ದುದೂ, ಮಾಂಸಖಂಡಗಳು ಕೀಲಿನ ಸುತ್ತ ಸೆಟೆದುಕೊಂಡಿದ್ದುದೂ, ಆಕೆಯ ಮಂಡಿನೋವು ಮಾನಸಿಕ ಕಾರಣದಿಂದ ಎಂದು ತಿಳಿಯಬೇಕಾಗಿತ್ತು. ಹಾಗೆ ತಿಳಿಯದೆ ತಪ್ಪು ಮಾಡಿದ್ದೆ.

ಬಾಲ್ಯದಲ್ಲಿ ಒಮ್ಮೆ ಬಂದಿದ್ದ ಕೀಲುನೋವನ್ನು ರ್ಹ್ಯೂಮೆಟಿಕ್ ಜ್ವರ ಇದ್ದಿರಬಹುದು ಎಂದು ತಪ್ಪಾಗಿ ಊಹಿಸಿದ್ದೆ. ಆ ನೋವಿನ ನೆನಪೇ, ಈಗ, ಮಾನಸಿಕ ಅಸಮಾಧಾನವು ಆ ಕೀಲಿನಲ್ಲೇ ಪ್ರಕಟವಾಗುವಂತೆ ಮಾಡಿತ್ತು.

ಪ್ರಾಣಿವರ್ಗಕ್ಕೂ ಸಸ್ಯವರ್ಗಕ್ಕೂ ಇರುವ ದೊಡ್ಡ ವ್ಯತ್ಯಾಸ ಚಲನೆ. ಪ್ರಾಣಿಗಳು ಚರಿಸುತ್ತವೆ. ಸಸ್ಯಗಳು ಇದ್ದಲ್ಲೇ ಬೆಳೆಯುತ್ತವೆ. ಮನುಷ್ಯನು ಮನಸ್ಸನ್ನು ಹೊರವಾಗಿ ಬೆಳೆಸಿಕೊಂಡ ಪ್ರಾಣಿ. ಈ ಮನಸ್ಸೇ ಅಸಮಾಧಾನದಿಂದ ತುಂಬಿದಾಗ, ಮನಸ್ಸಿನಲ್ಲಿ ಆ ಅಸಮಾಧಾನವನ್ನು ಸರಿಪಡಿಸಲಾಗದೆ ಇದ್ದರೆ, ಹುದುಗಿದ ಆ ಅಸಮಾಧಾನವು ದೇಹದ ಮೇಲೆ ಪರಿಣಾಮವನ್ನುಂಟು ಮಾಡುತ್ತದೆ. ಹಾಗೆ ಮಾಡುವಾಗ ಮುಖ್ಯ ಲಕ್ಷಣವಾದ ಓಡಾಟಕ್ಕೆ ಕುಂದು ತರುವುದೂ ಒಂದು ರೀತಿ. ಓಡಾಟಕ್ಕೆ ಕುಂದು ತರಲು ಮಂಡಿನೋವು ಇತ್ಯಾದಿಗಳು ಕಾಣಿಸಿಕೊಳ್ಳುತ್ತವೆ.

ಮನೋದೈಹಿಕ ಬೇನೆಗಳಲ್ಲಿ ಓಡಾಟಕ್ಕೆ ಅಡ್ಡಿ ತರುವ ದೈಹಿಕ ಬೇನೆಗಳು ಹೇರಳ.

ರೋಗಿಯ ಮನಸ್ಸಿನ ಅಸಮಾಧಾನದಿಂದ ಮಂಡಿನೋವು ಬಂದಿತು ಎಂದು ಖಚಿತಪಡಿಸುವುದಕ್ಕೆ (೧) ದೇವಕಿ ಹೇಳಿದ ಸುದ್ದಿ, (೨) ಗಂಡನನ್ನು ಕಾಯಬೇಕು ಅಂತ ಗೌರಮ್ಮ ಹೇಳಿದ್ದು (೩) ಅಣ್ಣ ಕಳಿಸಿದ ಮುಲಾಮಿನಿಂದ ಎರಡು ದಿನವಾದರೂ ಪವಾಡದಂತೆ ಗುಣ ಕಂಡುಬಂದದ್ದು—ಇವು ಮೂರೂ ಸಹಾಯಕವಾಗಿದ್ದುವು. ಗೌರಮ್ಮನ ಮನಸ್ಸಿನ ಹುತ್ತದಲ್ಲಿ ಈ ಹಾವು ಹುದುಗಿಕೊಂಡಿದೆ ಎಂದು ತಿಳಿಯಲು ಇವು ಮೂರೂ ಅಗತ್ಯವಾಗಿತ್ತು.

ಮನೋದೈಹಿಕ ಬೇನೆಗಳಲ್ಲಿ, ನಿಜವಾದ ಕಾರಣವನ್ನು ಕಂಡುಹಿಡಿಯಬೇಕಾದರೆ, ಮೈಯೆಲ್ಲಾ ಕಣ್ಣು, ಕಿವಿ ಮಾಡಿಕೊಂಡು ತೀವ್ರ ಎಚ್ಚರದಿಂದಿರಬೇಕು ಎಂಬ ಪಾಠವನ್ನು ಕಲಿತೆ.

## ೨. ಅಪಸ್ಮಾರ ಬಡಿಯಿತು

ಉದ್ವೇಗ ಉಕ್ಕಿದರೆ
ಮೈಯೆಲ್ಲಾ ನಡುಗಿಬಿಡುತ್ತೆ

"ಹಿರೇ ಮಗನಿಗೆ ಜ್ಞಾನ ತಪ್ಪಿಹೋಯ್ತು, ಸೋಮಿ. ತಕ್ಷಣ ಬರ ಬೇಕು" ಅಂತ ಮಧ್ಯಾಹ್ನ ನಾಲ್ಕು ಗಂಟೆ ಹೊತ್ತಿಗೆ ಬಡವನಂತೆ ಕಂಡು ಬರುತ್ತಿದ್ದವನೊಬ್ಬ ಕಾತರದಿಂದ ಬಂದು ಹೇಳಿದ. "ಏನಾಗಿತ್ತೋ? ಎಷ್ಟು ದಿವಸದಿಂದ ಕಾಯಿಲೆ?" ಅಂತ ಕೇಳಿದೆ. "ಎರಡು ನಿಮಿಷಕ್ಕೆ ಮುಂಚೆ ಚೆಂದಾಗೆ ಇದ್ರು. ಇದ್ದಕಿದ್ದಾಂಗೆ ಕಿರಿಚಿದರು. ಬಿದ್ದುಹೋದರು. ಜಟ್ಟಂತೆ ಬನ್ನಿ ಸೋಮಿ" ಎಂದು ಗೋಗರೆದ.

ಟೆನ್ನಿಸ್ ಮ್ಯಾಚಿಗೆ ಹೋಗೋಣ ಅಂತ ಅಣಿಮಾಡಿಕೊಂಡು ಸಿದ್ಧ ವಾಗಿದ್ದೆ. 'ಐದಕ್ಕೆ ನನ್ನ ಮ್ಯಾಚು, ಮೊದಲು ಇಲ್ಲಿಗೆ ಹೋಗಿ ಬರೋಣ; ಅಷ್ಟು ಕಾಲಾವಕಾಶವಿದೆ' ಎಂದು ತೀರ್ಮಾನಿಸಿ ಅವನ ಹಿಂದೆ ಹೊರಟೆ. 'ಇಲ್ಲೇ ಸೋಮಿ ಮನೆ, ಎದುರಿಕ್ಕೆ ಕಾಣ್ತದಲ್ಲ, ಅದರ ಪಕ್ಕದಾಗೇನೆ' ಎಂದು ಬಿಸಿಲುಗುದುರೆಯನ್ನು ತೋರಿಸುತ್ತಲೇ ಹತ್ತು ನಿಮಿಷ ನಡೆಸಿದ. 'ನನ್ನ ಗಾಡೀನಾದರೂ ತರ್‍ತಾಇದ್ದೆನಲ್ಲೋ ಇಷ್ಟು ದೂರ ಅಂತ ಹೇಳಿದ್ದರೆ' ಎಂದು ಉದ್ಗಾರ ತೆಗೆಯುವ ಹೊತ್ತಿಗೆ 'ಇದೇ ಮನೆ ಸೋಮಿ' ಎಂದು ಎರಡಂತಸ್ತಿನ ಹಳೆಯ ನೆನಪನ್ನು ತಂದ ಬಂಗಲೆಯೊಂದನ್ನು ತೋರಿಸಿದ. ಬಂಗಲೆಯ ಗೇಟಿನ ಹತ್ತಿರ ಬಂದಾಗ "ಡಾಕ್ಟರು ಬಂದಾರೆ, ಡಾಕ್ಟರೆ ಬಂದಾರೆ" ಅಂತ ಕೂಗಿಕೊಂಡು ಬಂಗಲೆ ಒಳಕ್ಕೆ ಓಡಿದ. ಅವನ ಹಿಂದೆಯೇ ನಾನು ನಡೆದೆ. ಬಂಗಲೆಯ ಯಜಮಾನರು "ತುಂಬಾ ದಿವಸಗಳಾಯ್ತು, ನೀವು ಈ ಕಡೆ ಬಂದು,

ಅಲ್ಲವೇ ಡಾಕ್ಟರೇ! ಬನ್ನಿ ಬನ್ನಿ! ಪಿಲ್ಲನ್ನ ಪಕ್ಕದ ಕೊಠಡಿಯಲ್ಲಿ ಮಲಗಿದ್ದಾನೆ. ಇದ್ದಕಿದ್ದ ಹಾಗೇ ಜ್ಞಾನ ತಪ್ಪಿಹೋಯ್ತು ಅವನಿಗೆ. ಎಂದೂ ಹೀಗೆ ಆಗಿರಲಿಲ್ಲ. ನಮ್ಮನೇಲಿ ಯಾರಿಗೂ ಹೀಗೆ ಇಲ್ಲ" ಎಂದು ಹೇಳುತ್ತಾ ಕೊಠಡಿಯೊಂದಕ್ಕೆ ಕರೆದುಕೊಂಡು ಹೋದ.

ರೋಗಿಯು ಮಂಚದ ಮೇಲೆ ಮಲಗಿದ್ದ. ಸುತ್ತ ಸಮುತ್ತಿರಿನ ಮೂರು ಡಾಕ್ಟರುಗಳು. ಡಾ। ಅ. ಅವರು "ನಿನಗೂ ಹೇಳಿ ಕಳಿಸಿದ್ದರೇನಪ್ಪಾ! ಹೇಳಿ ಕಳಿಸಿದ ಎಷ್ಟು ಹೊತ್ತಿನ ಮೇಲಪ್ಪಾ ನೀವು ಬರುವುದು?" ಎಂದು ವ್ಯಂಗ್ಯವಾಗಿ ಕೇಳಿದರು. ಡಾ। ಟ. ಅವರು "ಮನೆ ಡಾಕ್ಟರೇನೋ ನೀವು! ಬೇಕಾದಾಗ ಬರೋರು!" ಎಂದರು. ಡಾ। ಕ. ಅವರೊಬ್ಬರಿಗೇ ಖುಷಿಯಾದ ಹಾಗೆ ಕಾಣಿಸಿತ್ತು. "ಹತ್ತಿರ ಇರೋನು ನೀನು! ನಿನಗೆ ವಿಶ್ರಾಂತಿ ಕೊಟ್ಟು ದೂರದಲ್ಲಿರೋ ನನ್ನನ್ನು ಕರೆದುಕೊಂಡು ಬರಲು ಗಾಡಿ ಕಳಿಸಿದರಲ್ಲಾ ಯಾಕೆ ಅಂತ ಯೋಚಿಸ್ತಾ ಇದ್ದೆ. ನೀನೂ ಬಂದೆಯಲ್ಲ. ನಡೆದುಕೊಂಡು ಬಂದೆಯಲ್ಲ" ಅಂತ ಹೇಳಿದರು.

"ರೋಗಿಗೆ ಏನಾಗಿದೆ ಅದನ್ನು ನೋಡೋಕೆ ಮುಂಚೆಯೇ ಬೇಕಾಬಿಟ್ಟಿ ಕುಚೋದ್ಯದ ಮಾತಾಡ್ತೀರಲ್ಲ" ಎಂದು ಹೇಳುತ್ತಾ ರೋಗಿಯ ಬಳಿಗೆ ಹೋಗಲೆತ್ನಿಸಿದೆ.

"ಅಪಸ್ಮಾರ ಬಡಿದಿದೆ. ಈಗ ತಾನೆ ಎಚ್ಚರಗೊಳ್ಳುತ್ತಾ ಇದ್ದಾನೆ. ನಾನು ಬರೋ ಹೊತ್ತಿಗೆ ಡಾ। ಬ. ಅವರು ಬಂದಿದ್ದರು. ಒಂದು ಇಂಜೆಕ್ಷನ್ನನ್ನೂ ಕೊಟ್ಟಿದ್ದರು. ನಾಲಗೆಯನ್ನೇನೂ ಕಚ್ಚಿಕೊಂಡಿದ್ದಿಲ್ಲ. ಇನ್ನು ಯಾವ ತಾಪತ್ರಯವೂ ಇಲ್ಲ" ಎಂದು ಡಾ। ಅ. ಅವರು ಹೇಳಿದರು.

"ತಾಯಿಯ ಗಾಬರಿ ನೋಡಿ ಅವರನ್ನಾದರೂ ಸಮಾಧಾನ ಪಡಿಸೋಣ ಅಂತ ರೋಗಿಗೆ ಇಂಜೆಕ್ಷನ್ನು ಕೊಟ್ಟೆ. ಕೊಡದೆ ಇದ್ದಿದ್ದರೂ ರೋಗಿಗೆ ಗುಣವಾಗುತ್ತೆ ಅಂತ ತಿಳಿದಿತ್ತು" ಎಂದು ಡಾ। ಬ. ಅವರು ಸಮಜಾಯಿಸಿ ಹೇಳಿದರು.

"ನಾನು ಬರೋ ಹೊತ್ತಿಗೆ ಇವರಿಬ್ಬರೂ ಅದಷ್ಟು ಚಿಕಿತ್ಸೆಯನ್ನೆಲ್ಲಾ ಮುಗಿಸಿದ್ದರು. ಹಿಂತಿರುಗಲು ಕಾಲೆಳೆದಿದ್ದೆ. ನಿನ್ನ ಮುಖ ಕಂಡೆ. ಹೇಗೂ ಹತ್ತಿರದಲ್ಲಿ ವಾಸಮಾಡುವವನು ನೀನು. ಆಗಿಂದಾಗ್ಗೆ ಇನ್ನುಮೇಲೆ ಈ

ಮನೆಯೋರು ಹೇಳಿ ಕಳಿಸುತ್ತಾರೆ. ಈ ರೋಗಿಯ ಜವಾಬ್ದಾರಿಯನ್ನು ನೀನು ಹೊತ್ತುಕೋ. ಇನ್ನು ಯಾವ ಡಾಕ್ಟರಿಗೂ ಈ ಮನೆಯೋರು ತ್ರಾಸ ಕೊಡದ ಹಾಗೆ ಕಾಪಾಡಪ್ಪ" ಎಂದು ಡಾ। ಕ. ಅವರು ಹೇಳಿದರು.

ಡಾ। ಕ. ಅವರೂ ನಾನೂ ಕಾಲೇಜಿನಲ್ಲಿ ಸಹಪಾಠಿಗಳು. ಅದಕ್ಕೇ ಅಷ್ಟು ಸಲಿಗೆ. ಡಾ। ಅ. ಮತ್ತು ಡಾ। ಬ ಅವರುಗಳು ಇನ್ನೂ ಚಿರಂಜೀವಿಗಳು. ನಮ್ಮನ್ನು ಕಂಡರೆ ಇನ್ನೂ ಸ್ವಲ್ಪ ಮರ್ಯಾದೆ ತೋರಿಸುತ್ತಿದ್ದರು.

ಮನೆಯಾತನಿಗೆ "ನಾಲ್ವರೂ ನಾವು ಮಾತನಾಡಿಕೊಳ್ಳುತ್ತೇವೆ. ಹೇಗೂ ರೋಗಿಯು ಎಚ್ಚರಗೊಳ್ಳುತ್ತಿದ್ದಾನೆ. ಸದ್ಯಕ್ಕೆ ಏನನ್ನೂ ಮಾಡಬೇಕಾಗಿಲ್ಲ. ಮುಂದೆ ಏನು ಚಿಕಿತ್ಸೆ ಮಾಡಬೇಕು ಎನ್ನುವ ವಿಷಯದಲ್ಲಿ ಆಲೋಚನೆ ಮಾಡುತ್ತೇವೆ" ಎಂದು ಹೇಳುತ್ತಿರುವಾಗಲೇ—

"ನನ್ನ ಕೊಠಡಿಯಲ್ಲಿ ಕುಳಿತು ಗೋಪ್ಯವಾಗಿ ನೀವುಗಳು ಸಮಾಲೋಚನೆ ನಡೆಸಬಹುದು. ಬನ್ನಿ" ಅಂತ ಆತನ ಕೊಠಡಿಗೆ ಕರೆದುಕೊಂಡು ಹೋದ.

ಕೊಠಡಿಯಿಂದಾಚೆಗೆ ಆತನನ್ನು ಕಳಿಸಿ, ಬಾಗಿಲು ಹಾಕಿಕೊಂಡು "ಅಪಸ್ಮಾರ ಬಡಿದಾಗ, ಯಾವ ಕಡೆ ಶುರುವಾಯಿತು ? ಎಲ್ಲಿಗೆ ಹರಡಿತು ? ಹಿಂದಿನ ಚರಿತ್ರೆಯೇನು ?" ಎಂದು ಕೇಳಿದೆ.

"ನೋಡಪ್ಪಾ! ಇಸ್ಪೀಟು ಆಡ್ತಾ ಇದ್ದೆ. ತಕ್ಷಣ ಬರಬೇಕು ಅಂತ ಯಾರೋ ಗಾಡಿ ತಂದು ಕೂಗಿದರು. ಯಾರು ಏನು ಎಂಬೋದು ತಿಳಿಯದು, ಕಷ್ಟದಲ್ಲಿದ್ದಾರೆ ಅಂತ ಬಂದೆ. ಇಲ್ಲಿ ನನ್ನ ಕೆಲಸವೇನೂ ಇಲ್ಲ. ನಾಳೆಯಿಂದ ಇವರ ಮನೆಯೋರು ನನ್ನ ಹತ್ತಿರ ಬಂದು ತಿರುಗಿ ರೋಗೀನ ನೋಡಿ ಅಂತ ಏನೂ ಕೇಳುವುದಿಲ್ಲ. ಬಂದ ಕೆಲಸ ಮುಗೀತು. ಹಿಂತಿರುಗಿ ಹೋಗ್ತೀನಿ" ಎಂದು ಡಾ। ಕ. ಅವರಂದರು.

"ಜರೂರು ಸಂದರ್ಭ. ಇನ್ಜಕ್ಷನ್ನು ಕೊಟ್ಟೆ. ತಾತ್ಕಾಲಿಕ ಸೇವೆ ಮಾಡಿದೆ. ಯಾಕೆ ಅಪಸ್ಮಾರ ಬಂತು, ಮುಂದೇನು ಮಾಡಬೇಕು ಅಂತ ನಿರ್ಧಾರ ಮಾಡಬೇಕಾದರೆ, ಮನೆ ಡಾಕ್ಟರು! ನನಗ್ಯಾಕೆ ಅದರ ಗೋಜು ? ಹುಡುಗ ನಾನಿನ್ನೂ. ಕರೆದಾಗ ಹೋಗದೆ ಇದ್ದರೆ ಕೆಟ್ಟ ಹೆಸರು ಬರುತ್ತೇನೊ ಎಂದು ಭಯ. ಅದಕ್ಕೇ ಬಂದೆ. ಈ ಮೂರು ವರ್ಷದಲ್ಲಿ ಜರೂರು ಚಿಕಿತ್ಸೆಗೆ ವಾರಕ್ಕೆಂಟು ಹತ್ತು ಬಾರಿ ಹೋಗ್ತಾ ಇದ್ದೀನಿ. ಹೋಗಿ ಬಂದ ಮೇಲೆ,

ಅ... ...ದೂ ...ಂದು. ...ನು ಯಾವ ಊರ ದಾಸಯ್ಯ! ನಿನ್ನ ಬಿಲ್ ಎಷ್ಟು ... ಈಗ ರೋಗಿ ಚೆನ್ನಾಗಿದಾನೆ ಅಥವಾ ತೀರಿಕೊಂಡ ಅಂತ ಹೇಳಿದ್ದಾರೆ ಅಂತೀ... ಒಬ್ಬರೂ ತಿರುಗಿ ನನ್ನ ಬಳಿಗೆ ಬಂದಿಲ್ಲ. ನಮ್ಮ ಊರಿನವರ ಸಂಸ್ಕೃತಿ ಹೀಗಿರೋವಾಗ, ರೋಗಿಗಳ ಜಾತಕವನ್ನೆಲ್ಲಾ ಬರೆದಿಟ್ಟುಕೊಂಡು ಏನು ತಾನ ಕಲಿತುಕೊಳ್ಳಲಿ" ಎಂದರು ಡಾ। ಬ. ಅವರು.

"ಯಾವ ಇನ್ಜಕ್ಷನ್ನು ಕೊಟ್ಟ ಗೊತ್ತೆ?" ಎಂದು ಡಾ। ಕ. ಕೇಳಿದರು. "ಹೇಗೂ ಅಪಸ್ಮಾರದಿಂದ ಚೇತರಿಸಿಕೊಳ್ಳುತ್ತಿದ್ದ ರೋಗಿ. ಅವರ ತಾಯಿ ಒದ್ದಾಡುತ್ತಿದ್ದರು. ಏನಾದರೂ ಇನ್ಜಕ್ಷನ್ನು ಕೊಡಿ ಅಂತ ಗೋಗರೆಯುತ್ತಿದ್ದರು. ಕೋರಮಿನ್ ಟ್ಯೂಬಿತ್ತು. ಅದನ್ನೇ ಚುಚ್ಚಿದೆ" ಎಂದರು ಡಾ। ಬ. ಅವರು.

ನಮಗೂ ಸ್ವಲ್ಪ ನಗು ಬಂತು. ಆದರೆ ಆತ ಹೇಳಿದ್ದು ಸಹಜವಾಗಿತ್ತು. "ವಿಮಾ ಪರೀಕ್ಷೆಗೆಂದು ಕೆಲವರು ಕಕ್ಷಿಗಳನ್ನು ನನ್ನ ಹತ್ತಿರಕ್ಕೆ ಕರೆದು ತರುವವರು ಒಂದು ಕ್ಷಣ ಬನ್ನಿ ಅಂದರು. ಬಂದೆ. ಡಾ। ಬ. ಅವರು ಎಲ್ಲವನ್ನೂ ಮಾಡುತ್ತಿದ್ದರು. ಅವರ ಹಿಂದೆ ನಿಂತು ಅವರು ಮಾಡಿದ್ದಕ್ಕೆಲ್ಲಾ ಮನಸ್ಸಿನಲ್ಲೇ 'ಐಸಾ, ಐಸಾ' ಅಂತ ಪಲ್ಲವಿ ನುಡೀತಿದ್ದೆ" ಎಂದು ಡಾ। ಅ. ಅವರು ಹೇಳಿದರು.

ಏನಾದರೂ ಆಕಸ್ಮಿಕ ಆದರೆ, ಜರೂರು ಪ್ರಸಂಗ ಒದಗಿದರೆ, ಸುತ್ತಲೂ ಇದ್ದ ಹತ್ತು ಜನ, ಹತ್ತು ದಿಕ್ಕಿಗೆ ಹೋಗಿ, ಸಿಕ್ಕಿದ ಹತ್ತು ವೈದ್ಯರುಗಳನ್ನು ಹಿಡಿದು ತರುತ್ತಾರೆ. ಬಂದವರಲ್ಲಿ ಒಬ್ಬರಿಗಾದರೂ "ಈ ರೋಗಿಯ ಜವಾಬ್ದಾರಿ ನನ್ನದು" ಎಂಬ ಯೋಚನೆಯು ಬರುವುದಕ್ಕೂ ಅವಕಾಶವಿರುವುದಿಲ್ಲ. ಇದು ಸಾಮಾನ್ಯವಾಗಿ ನಡೆಯುವ ಸನ್ನಿವೇಶ. ಅದಕ್ಕೇ ಹಿರಿಯರಾದ ಅನುಭವಸ್ಥ ಡಾಕ್ಟರುಗಳು ಹಲವಾರು ವೇಳೆ ಕ್ರೂರರಂತೆ ಕಂಡುಬರುವಂತಾದರೂ, ಜರೂರು ಚಿಕಿತ್ಸೆಗೆ ಅನುವಾಗುವುದೇ ಇಲ್ಲ.

ಈ ಗುಂಪಿಗೆ ದಾಖಲ್ ಮಾಡಿಕೊಂಡವನು, ನಾನು. ಆದರೂ ಈ ರೋಗಿಯ ವಿಚಾರದಲ್ಲಿ ಸ್ವಲ್ಪ ಉತ್ಸಾಹ ನನಗೆ. ರೋಗಿಯ ತಾಯಿಯೂ ನನ್ನ ಮನೆಯೊಡತಿಯೂ ತುಂಬಾ ಸ್ನೇಹಿತರು. ಈ ಮಗುವನ್ನು ಹೆತ್ತ ಎರಡನೇ ವರ್ಷದಲ್ಲಿ ಮರಚಲು ಹರಿಗೆಯಲ್ಲಿ ಆಕೆ ತೀರಿಕೊಂಡಿದ್ದಳು. ಪಿಲ್ಲನ್ನನನ್ನು ನಮ್ಮ ಮನೆಯಲ್ಲೇ ಆಗ ಆರೆಂಟು ವಾರ ಮನೆಯಾಕೆಯೇ ಸಾಕಿ

ಕೊಂಡಿದ್ದಳು. ಅನಂತರ ಅಜ್ಜಿಯು ಮನೆಗೆ ಪಿಲ್ಲನ್ನನನ್ನ ಕರೆದುಕೊಂಡು ಹೋಗಿ, ಐದು ವರ್ಷವಾಗುವ ತನಕ ಅಲ್ಲಿಯೇ ಬಿಟ್ಟಿದ್ದರು, ಎರಡನೆಯ ಮದುವೆಮಾಡಿಕೊಂಡ ಎರಡನೆಯ ವರ್ಷ, ಪಿಲ್ಲನ್ನನನ್ನು ಅವರ ತಂದೆ ಮನೆಗೆ ಹಿಂತಿರುಗಿ ಕರೆದುಕೊಂಡು ಬಂದಿದ್ದರು. ನಮ್ಮ ಮನೆಗೆ ವಾರಕ್ಕೆ ನಾಲ್ಕು ಸರ್ತಿಯಾದರೂ ಪಿಲ್ಲನ್ನ ಬಂದು ಸ್ವಲ್ಪ ಹೊತ್ತು ಇದ್ದು ಹೋಗುತ್ತಿದ್ದ. ಈಗ ಮೂರು ನಾಲ್ಕು ವರ್ಷಗಳಿಂದ ಅವನನ್ನು ಕಂಡಿದ್ದಿಲ್ಲ. ಅವನ ಮೇಲೆ ಸಹಜವಾದ ಮಮತೆ ಇತ್ತು. ಆದಕ್ಕೇ ಅವನ ರೋಗದ ಹಿಂದು ಮುಂದುಗಳನ್ನು ತಿಳಿಯಲು ಆಸೆಯಾಗಿತ್ತು.

ಈ ವಿಷಯಗಳನ್ನು ಇತರ ಮೂರು ಡಾಕ್ಟರುಗಳಿಗೆ ತಿಳಿಸಿದೆ. "ಹಾಗಾದರೆ ಅಳುತ್ತಾ ಇದ್ದ ಆಕೆ, ಪಿಲ್ಲನ್ನನ ತಾಯಿ ಅಲ್ಲ ? ಮಲತಾಯಿ! ಆದರೂ ಅದೆಷ್ಟು ಆದರ! ಎಂತಹ ವಿಶ್ವಾಸ! ಆಶ್ಚರ್ಯ, ಸಾರ್" ಎಂದರು ಡಾ। ಬ. ಅವರು.

ಎಲ್ಲರೂ ಹೊರಕ್ಕೆ ಬಂದೆವು. "ಮಾಡಬೇಕಾದ ತಾತ್ಕಾಲಿಕ ಚಿಕಿತ್ಸೆಯನ್ನೆಲ್ಲ ಡಾ। ಬ. ಅವರು ಯಶಸ್ವಿಯಾಗಿ ಮಾಡಿದ್ದಾರೆ. ನಾವೆಲ್ಲ ಮಾತನಾಡಿಕೊಂಡಿದ್ದೇವೆ. ನಾಳೆ ಪಿಲ್ಲನ್ನನನ್ನು ದವಾಖಾನೆಗೆ ಕಳಿಸಿಕೊಡಿ. ಪೂರ್ಣ ಪರೀಕ್ಷೆ ಮಾಡುತ್ತೇನೆ. ಆದರೆ ಜ್ಞಾನ ತಪ್ಪಿದಾಗ, ಪಿಲ್ಲನ್ನನ ಹತ್ತಿರ ಯಾರು ಇದ್ದರು, ಅವರ ಹತ್ತಿರ ಎರಡು ಮಾತನಾಡಬೇಕು" ಎಂದು ಮನೆಯಾತನಿಗೆ ಎಲ್ಲರ ಪರವಾಗಿ ನಾನು ಹೇಳಿದೆ. "ಗೋಪಾಲೀ ಜತೆಯಲ್ಲಿ ಮಾತನಾಡ್ತ ಇದ್ದ. ತಡೀರಿ ಕರೀತೀನಿ" ಎಂದು ಮನೆಯಾತ ಗೋಪಾಲಿಯನ್ನು ಕೂಗಿ ಕರೆದ. "ನನ್ನ ಭಾವಮೈದುನ ಗೋಪಾಲಿ, ಮೂರು ವರ್ಷಗಳಿಂದ ನಮ್ಮನೆಯಲ್ಲೇ ಓದಿಕೊಂಡಿದ್ದಾನೆ. ಪಿಲ್ಲುವಿನ ವಯಸ್ಸೇ ಇವನಿಗೂ" ಎಂದು ಮನೆಯಾತ ಭಾವಮೈದುನನ ಪರಿಚಯ ಮಾಡಿಕೊಟ್ಟರು.

ಮೂವರು ಡಾಕ್ಟರುಗಳೂ ಹೊರಟು ಹೋದರು.

"ಏನಾಯ್ತು ಪಿಲ್ಲನ್ನನಿಗೆ ? ಹೇಗೆ ಶುರುವಾಯ್ತು ?" ಎಂದು ಕೇಳಿದೆ.

"ಅಕ್ಕ ನಾನು ಪಿಲ್ಲನ್ನನೊಂದಿಗೆ ಕಾಲೇಜಿನ ಆಟಪಾಟಗಳ ವಿಷಯ ಮಾತಾಡ್ತಾ ಇದ್ದೆವು. ಹಠಾತ್ತಾಗಿ ಬಲಗಡೆ ಹೊಟ್ಟೆಯನ್ನು ಹಿಡಿದುಕೊಂಡು ಕಿರುಚಿಕೊಳ್ಳುತ್ತಾ, 'ಪ್ರಾಣಸಂಕಟ ಆಗ್ತಾ ಇದೆ, ಸಂಕಟ, ಸಂಕಟ' ಎಂದು

ಪಿಲ್ಲು ಕಿರುಚಿದ; ಆಕ್ಕ ಅವನನ್ನು ಹಿಡಿದುಕೊಂಡರು. ಹೊಟ್ಟೆಯ ಮೇಲೆ ಮಡಿಕೆ ಹಾಕಿಕೊಂಡು ಕೂತುಕೊಂಡ. ಒಂದು ನಿಮಿಷ ಇರಬಹುದು ಒಮ್ಮೆಲೇ ಹಿಂದಕ್ಕೆ ಝಾಡಿಸಿಕೊಂಡು ಬಿದ್ದುಬಿಟ್ಟ. ಬಲಗಡೆ ತೋಳು ಮುಖ ಎಲ್ಲಾ ಒದರುಕ್ಕೆ ಶುರುವಾಯ್ತು. ಅರೆಕ್ಷಣದಲ್ಲಿ ಮೈಯೆಲ್ಲಾ ಒದರುಕ್ಕೆ ಶುರುವಾಯ್ತು. ಬಾಯಲ್ಲಿ ನೊರೆ ಕಾಣಿಸಿಕೊಂಡಿತು. ಅಷ್ಟು ಹೊತ್ತಿಗೆ ಭಾವನನ್ನು ಕಾಣುಕ್ಕೆ ಬಂದಿದ್ದವರು ಡಾಕ್ಟರನ್ನು ಕರ್ಕೊಂಡು ಬರ್ತೀವಿ ಅಂತ ಹೊರಕ್ಕೆ ಹೋದರು. ಆಳನ್ನ ನಿಮ್ಮನೆಗೆ ಭಾವ ಕಳಿಸಿದರು. ಡಾ। ಬಂ. ಬಂದು ಇನ್ಜಕ್ಷನ್ನು ಕೊಟ್ಟಮೇಲೆ ಒದರುವುದೆಲ್ಲಾ ಕಡಿಮೆಯಾಯ್ತು. ನೀವು ಬರೋ ಹೊತ್ತಿಗೆ ಕಣ್ಣುಬಿಟ್ಟು ನೋಡ್ತಾ ಇದ್ದ. ಜ್ಞಾನ ಸರಿಯಾಗಿ ಬಂದಿತ್ತು" ಎಂದು ವರದಿ ಒಪ್ಪಿಸಿದ.

"ಹಿಂದೆ ಎಂದೂ ಹೀಗೆ ಆಗಿತ್ತಿಲ್ಲವೆ? ಹೊಟ್ಟೆನೋವು ಎಂದು ಆಗಾಗ್ಗೆ ನರಳುತ್ತಾ ಇದ್ದನ? ಕಾಮಾಲೆ ಗೀಮಾಲೆ ಏನಾದರೂ ಬಂದಿತ್ತೆ?" ಎಂದು ಕೇಳಿದೆ. "ಐದು ವರ್ಷದ ತನಕ ಇವನಿಗೆ ಆದದ್ದೆಲ್ಲಾ ನಿಮಗೆ ತಿಳಿದಿರಬೇಕು ಡಾಕ್ಟರೇ! ಆಮೇಲೆ ಈ ತನಕ ದೊಡ್ಡದಾಗಿ ಕಾಯಿಲೆ ಬಿದ್ದದ್ದೇ ಇಲ್ಲ. ಸುಖವಾಗಿ ಉಂಡು ತಿಂದು ಚೆನ್ನಾಗಿ ಓದಿಕೊಂಡೇ ಇದ್ದ. ಒಂದೊಂದು ಸರ್ತಿ ಏನೋ ತಲೆ ನೋವೃತ್ತೆ, ಒಂದೊಂದು ಸರ್ತಿ ಕಾಲು ಹರಿದ ಹಾಗೆ ಆಗುತ್ತೆ ಎಂದು ಹೇಳುತ್ತಿದ್ದ. ಆದರೆ ೧–೨ ಗಂಟೆಗಳಲ್ಲೇ ಸರಿಹೋಯ್ತು ಅಂತಿದ್ದ" ಎಂದು ಪಿಲ್ಲನ್ನನ ತಂದೆಯವರು ಹೇಳಿದರು.

ಎರಡನೇ ಹೆಂಡತಿ ಕಣ್ಣುಸನ್ನೆಮಾಡಿ ಗಂಡನಿಗೆ ಏನನ್ನೋ ಹೇಳಲು ತವಕಿಸುತ್ತಿದ್ದಳು ಎಂದು ನನಗನ್ನಿಸಿತು. "ನಿಮಗೇನಾದರೂ ತಿಳಿದಿದ್ದರೆ ನೀವೇ ಹೇಳೀಮ್ಮಾ! ಯಜಮಾನರು ಏನೂ ಅನ್ನೊಲ್ಲ. ತುಂಬಾ ಹಳೆಯ ದೋಸ್ತಿಗಳು ನಾವು" ಎಂದು ಆಕೆಗೆ ಧೈರ್ಯ ಕೊಟ್ಟೆ. "ನನಗೆ ತೋಚಿದ್ದನ್ನು ನೀನು ಹೇಳು, ರಂಗೂ. ರೋಗ ರಟ್ಟು ಸಂಸಾರ ಗುಟ್ಟು ಅಲ್ಲವೇ? ಡಾಕ್ಟರು ಹೊಸಬರಲ್ಲಾ ಈ ಮನೆಗೆ" ಎಂದು ಮನೆಯಾತ ಅಂದರು.

"ಈಗೊಂದು ಎರಡು ಮೂರು ವರ್ಷದಿಂದ, ಎರಡು ತಿಂಗಳಿಗೊಮ್ಮೆ ಅಥವಾ ಮೂರು ತಿಂಗಳಿಗೆ ಎರಡು ಬಾರಿ, ನಾಲ್ಕೈದು ದಿನಗಳು ಒಟ್ಟೊಟ್ಟಿಗೆ ಪಿಲ್ಲು ಸರಿಯಾಗಿ ಊಟಮಾಡ್ತಿರಲಿಲ್ಲ. ಏನು ಮಾತನಾಡಿದರೂ ರೇಗಿ

ಬೀಳೋನು. ಎರಡು ಹಾಸ್ಯದ ಮಾತನ್ನಾಡಿದರೆ ಉರಿದು ಬೀಳೋನು. ಯಾಕೆ ಏನು ಅಂತ ಗೊತ್ತಾಗ್ತಾ ಇರಲಿಲ್ಲ. ಆಮೇಲೆ ಹಾಗೇ ಸರಿಹೋಗ್ತಿತ್ತು ಇವರಿಗೂ ಒಂದೆರಡು ಸರ್ತಿ ಹೇಳಿದೆ. ಒಮ್ಮೆ ಮೊಂಡು ಹಿಡಿದು ಇವರು ಹೇಳಿದರೂ ಕೂಡ ಊಟಮಾಡದೆ ಒಂದಿನವೆಲ್ಲಾ ಉಪವಾಸ ಇದ್ದ. ಆಮೇಲೇ ಇವರು ಜಂತಿನಪುಡಿ ತಂದುಕೊಟ್ಟಿದ್ದು. ಜಂತೇನೂ ಬೀಳಲಿಲ್ಲ ಅಂತ ಹೇಳಿದ. ಜ್ಞಾಪಕವಿದೆಯೇ ಅಂದ್ರೆ ?" ಎಂದು ಆಕೆ ಹೇಳಿದಳು.

"ಹೌದು ! ಡಾಕ್ಟರೇ ! ಬೆಳೆಯೋ ಪ್ರಾಯ. ರೇಗ್ತಾನೆ ಒಂದು ದಿನ. ಎರಡನೇ ದಿನ ನಿಮ್ಮನ್ನೆಲ್ಲಾ ಎಷ್ಟು ಕಾಡಿದೆನೋ ಅಪ್ಪ ಅಂತ ಹೇಳಿದಾಗ, ಕರುಳೇ ಕುಯ್ದು ಹಾಗೆ ಆಗುತ್ತೆ ನನಗೆ. ಇದೆಲ್ಲಾ ಎಲ್ಲರಿಗೂ ಆಗೋದೇ ! ಇದನ್ನೇನು ಹೇಳೋದು ಅಂತ ಸುಮ್ಮನಾಗಿದ್ದೆ" ಎಂದರು ಪಿಲ್ಲನ್ನನ ತಂದೆ.

ಸಾಧ್ಯವಾದಷ್ಟು ವಿಷಯ ಸಂಗ್ರಹಣೆ ಮಾಡಿದ್ದಾಗಿತ್ತು. ಪಿಲ್ಲನ್ನನ ಹತ್ತಿರ ಹೋಗಿ "ಈಗ ಏನಾದರೂ ಹಸಿವಾದರೆ, ಬೇಕಾದ್ದು ತಿನ್ನು. ಇವತ್ತು ರಾತ್ರಿ ಚೆನ್ನಾಗಿ ನಿದ್ರೆ ಬರುತ್ತೆ. ನಾಳೆ ಬೆಳಗ್ಗೆ ಒಂಭತ್ತು ಗಂಟೆ ಹೊತ್ತಿಗೆ, ತಿಂಡಿ ಏನನ್ನೂ ತಿನ್ನದೆ ದವಾಖಾನೆಗೆ ಬಾ. ಒಂದು ಸರ್ತಿ ಪರೀಕ್ಷೆಮಾಡ ಬೇಕು. ಎಷ್ಟು ದಿವಸ ಅಯ್ತಪ್ಪಾ ನಮ್ಮನೆಗೆ ಬಂದು ನೀನು !" ಎಂದು ಹೇಳಿದೆ.

"ಆಗಲಿ ಡಾಕ್ಟರೇ! ಅಪ್ಪನಿಗೆ ಹೇಳಿದ್ದೀರಲ್ಲ. ನಾಳೆ ಬೆಳಗ್ಗೆ ಬರ್ತೀನಿ" ಎಂದು ಪಿಲ್ಲನ್ನ ಹೇಳಿದ.

ನಾನೂ ಮನೆಗೆ ಹಿಂತಿರುಗಿದೆ. ಐದೂ ಮುಕ್ಕಾಲಾಗಿತ್ತು ಮನೆ ಸೇರಿ ದಾಗ.

ಟೆನ್ನಿಸ್ ಮ್ಯಾಚ್ ಆಡಬೇಕು ಅಂತ ತುಂಬಾ ಆಸೆ ನನಗೆ. ಯಾವು ದಾದರೂ ಒಂದು ಮ್ಯಾಚಿನಲ್ಲಿ, ಕುಂಟರ ಸ್ಕೂಲಿನವರ ಮೇಲಾದರೂ ಆಯಿತು, ಗೆದ್ದು, ಮನೆ ರೇಡಿಯೋ ಮೇಲೆ ಗಳಿಸಿದ ಬಹುಮಾನವನ್ನು ಪ್ರದರ್ಶಿಸಬೇಕು ಅಂತ ಒಳಿಯಾಸೆ. ಆದರೆ ಆಡಿದ ಯಾವುದೊಂದು ಮ್ಯಾಚಿನಲ್ಲೂ, 'ನನ್ನ ಮೊದಲನೆಯ ಮ್ಯಾಚೇ ಕಡೆಯದೂ ಆಗುವ ವಾಡಿಕೆ. ಈ ಬಾರಿ, ಮೊದಲ ಮ್ಯಾಚನ್ನು ಗೆಲ್ಲುವ ಸಂಭವವಿತ್ತು. ಎದುರಾಳಿಗೆ ಹಿಂದಿನ ದಿನದಿಂದ ಉಬ್ಬಸ. ಇಂತಹ ಸದವಕಾಶ ದೊರಕಿದಾಗ, ಪಿಲ್ಲನ್ನನ ಆಕಸ್ಮಿಕ ಬಂದು ಅದನ್ನೂ

ತಪ್ಪಿಸಿತ್ತು. ಆದರೂ—ಯಾರಿಗೆ ಗೊತ್ತು? ಎದುರಾಳಿಯ ಉಬ್ಬಸ ಕಡಿಮೆಯಾಗಿತ್ತೇನೋ?

ಮಾರನೆಯ ದಿನ ಬೆಳಗ್ಗೆ ದವಾಖಾನೆಗೆ ಪಿಲ್ಲನ್ನ ಬಂದಿದ್ದ. ಜತೆಯಲ್ಲೇ ಗೋಪಾಲಿಯೂ ಕೂತಿದ್ದ. "ಭಾವ ಹೇಳಿದರು: ನೀನೂ ಪಿಲ್ಲು ಜತೆಗೆ ಹೋಗಿ ಬಾ. ನಿನ್ನೆ ತಾನೆ ಸುಸ್ತಾಗಿದ್ದ. ಒಬ್ಬನೇ ಹೋಗೋದು ಬೇಡ ಅಂತ. ಅದಕ್ಕೇ ನಾನೂ ಜತೆಯಲ್ಲಿ ಬಂದೆ. ಸದ್ಯ! ಈ ನೆಪದಿಂದ ಕಾಲೇಜಿಗೆ ಚಕ್ಕರ್ ಕೊಡಬಹುದು. ಸಂಜೆ ಫುಟ್‌ಬಾಲ್ ಮ್ಯಾಚಿದೆ, ಡಾಕ್ಟರೇ! ಮಧ್ಯಾಹ್ನವೆಲ್ಲಾ ಓದಿಬಿಟ್ಟು ಸಂಜೆ ಆಟ ಆಡಬೇಕು ಎಂದರೆ ಸಾಧ್ಯವೆ? ನಮ್ಮ ಕಾಲೇಜಿನ ಫುಟ್‌ಬಾಲ್ ಟೀಮಿನ ಕ್ಯಾಪ್ಟನ್ನು ಸಾರ್, ನಾನು. ನಾನೇ ಚೆನ್ನಾಗಿ ಆಡದಿದ್ದರೆ ಮಿಕ್ಕವರು ಏನುತಾನೆ ಮಾಡಲು ಸಾಧ್ಯ!" ಎಂದು ನನಗೆ ಹೇಳಿದ.

ಹೇಳಿದ ಮಾತುಗಳಿಗಿಂತ, ಹೇಳುವಾಗಿನ ರೀತಿ, ಏನೋ ಅಮೋಘವಾದ ಸಹಾಯವನ್ನು ಮಾಡಿದ್ದೇನೆ ಎಂದು ಹೇಳುವಂತಹ ದೃಷ್ಟಿಯನ್ನು ಪಿಲ್ಲನ್ನನನ್ನು ನೋಡಿದಾಗಲೆಲ್ಲಾ ಹರಿಸುತ್ತಿದ್ದುದು. ಇವೆಲ್ಲವೂ ನನ್ನ ಗಮನವನ್ನು ಸೆಳೆದಿತ್ತು. ನೀನು ಯಾಕಪ್ಪಾ ಬಂದೆ ಎಂದು ನಾನೇನೂ ಕೇಳಿತ್ತಿಲ್ಲ. ಆದರೂ ಅವನೇ ಮುಂದೆ ಬಂದು ಹೇಳಿದ್ದ. ಇದೆಲ್ಲವೂ ನನಗೆ ಹಿತವಾಗಿ ಕಾಣಿಸಲಿಲ್ಲ. ಅಲ್ಲದೆ ಪಿಲ್ಲನ್ನನನ್ನು ಮಲತಾಯಿಯ ಮನೆ ಹೇಗಿದೆ ಎಂದು ಎಳ್ಳಂಬಳಸೆ ಪ್ರಶ್ನೆಗಳಿಂದ ಕೇಳಬೇಕು ಎಂದಿದ್ದೆ. ಗೋಪಾಲಿ ಎದುರಿಗೆ ಹಾಗೆ ಕೇಳುವುದು ಸೂಕ್ತವಲ್ಲ, ಸಾಧ್ಯವೂ ಅಲ್ಲ ಅನ್ನಿಸಿತು. ಕೇಳಿದ ಪ್ರಶ್ನೆಗಳಿಗೆ ಗೋಪಾಲಿಯೇ ಉತ್ತರ ಕೊಟ್ಟುಬಿಡುತ್ತಾನೆ ಅನ್ನಿಸಿತು.

"ನೋಡಪ್ಪಾ, ಗೋಪಾಲಿ, ಸುಮಾರು ೨–೩ ಗಂಟೆಗಳ ಕಾಲ ಪಿಲ್ಲನ್ನನನ್ನು ಪರೀಕ್ಷೆ ಮಾಡಬೇಕಾಗುತ್ತೆ. ರಕ್ತಪರೀಕ್ಷೆ ಮಾಡುವುದಕ್ಕೆ ೧–೨ ಗಂಟೆಗಳು ಬೇಕಾಗುತ್ತೆ. ಆದ್ದರಿಂದ ಬೇಕಾದರೆ ನೀನು ಮನೆಗೆ ಹೋಗು. ಮನೆಗೆ ಹೋಗುವಾಗ ಪಿಲ್ಲನ್ನನನ್ನು ನಾನೇ ಕರೆದುತಂದು ಬಿಡ್ತೀನಿ. ಹನ್ನೊಂದು ಗಂಟೆಯ ಹೊತ್ತಿಗೆ ನನಗೆ ತಿಂಡಿಯನ್ನು ಕಳಿಸುತ್ತಾರೆ. ಅದನ್ನೇ ಪಿಲ್ಲನ್ನನಿಗೂ ಹಂಚಿಕೊಡುತ್ತೇನೆ" ಎಂದೆ.

"ಅಷ್ಟು ಹೊತ್ತಾಗುವ ಹಾಗಿದ್ದರೆ, ನಾನು ಹೋಗ್ತೀನಿ ಡಾಕ್ಟರೇ!"

ಎಂದು ಹೇಳಿ ಅವನು ಹೊರಟು ಹೋದ. ಪಿಲ್ಲನ್ನನ ಹಣೆಯ ಮೇಲಿನ ಗೆರೆಗಳು ಮೆಲ್ಲಮೆಲ್ಲನೆ ಮಾಯವಾದುದನ್ನು ಆಗ ನಾನು ಗಮನಿಸಿದೆ. ಪರೀಕ್ಷೆಗೆಂದು ಒಳಕೊಠಡಿಗೆ ಕರೆದುಕೊಂಡು ಹೋದೆ.

"ಯಾವ ಕ್ಲಾಸಿನಲ್ಲಿ ಓದುತ್ತ ಇದೀಪ್ಪಾ ! ಚೆನ್ನಾಗಿ ಪ್ಯಾಸು ಮಾಡ್ತಾ ಇದೀಯಾ ?" ಎಂದು ಸನ್ನ ಅಂಗಿಯನ್ನು ಕಳಚಿ, ಬಿಳಿ ನಿಲುವಂಗಿಯನ್ನು ಹಾಕಿಕೊಳ್ಳುತ್ತ ಕೇಳಿದೆ.

"ಇಂಟರ್‌ನಲ್ಲಿ ಓದುತ್ತಿದ್ದೇನೆ ಸಾರ್ ! ಎಸ್.ಎಸ್.ಎಲ್.ಸಿ.ಯಲ್ಲಿ ಮೂರನೇ ರ್‍ಯಾಂಕು ಬಂದಿತ್ತು. ನಿಮ್ಮ ಆಶೀರ್ವಾದ ಸಾರ್! ಸ್ಕಾಲರ್‌ಷಿಪ್ ಬರ್‍ತಾ ಇದೆ" ಎಂದ.

ಕಾಲೇಜಿಗೆ ಹೋಗಿ ಬರುವ ವೇಳೆ ಬಹಳ ಅನಾನುಕೂಲದ್ದು. ಮನೆಯಲ್ಲೇ ಊಟ ಮಾಡ್ತೀಯಾಪ್ಪ ? ಅಥವಾ ತುಂಬಾ ಹುಡುಗರು ಮಾಡುವ ಹಾಗೆ ಊಟಾನ ತರಿಸಿಕೊಳ್ಳುತ್ತೀಯಾ ?" ಎಂದು ಕೇಳಿದೆ. ಕೈಗಳನ್ನು ತೊಳೆದುಕೊಳ್ಳುತ್ತಾ.

"ಕಾಲೇಜಿಗೆ ಊಟಾನಾ ಕಳಿಸ್ತಾರೆ ಸಾರ್ ! ನಾವಿಬ್ಬರೂ ಅಲ್ಲೇ ಊಟಮಾಡ್ತೀವಿ. ಗೋಪಾಲಿ ಕ್ಯಾಪ್ಟನ್ ಆಗಿರೋದರಿಂದ ಒಂದು ಕೊಠಡಿ ಸಿಕ್ಕಿದೆ. ಅಲ್ಲೇ ನಾವಿಬ್ಬರೂ ಊಟಮಾಡ್ತೀವಿ. ಇನ್ನೊಂದೈದಾರು ಫುಟ್ ಬಾಲ್ ಆಟಗಾರ ಹುಡುಗರೂ ಅಲ್ಲೇ ಊಟಕ್ಕೆ ಬರ್‍ತಾರೆ" ಎಂದ.

"ಹರಟೆ ಹೊಡೀತಾ ಊಟಮಾಡ್ತೀರಿ ಹಾಗಾದ್ರೆ" ಎಂದೆ, ಪರೀಕ್ಷಾ ಸಾಮಾನುಗಳೆಲ್ಲವನ್ನು ಅಣಿಮಾಡಿಕೊಳ್ಳುತ್ತ.

"ಬರೀ ಫುಟ್‌ಬಾಲ್ ಮಾತೇ ! ನನಗೆ ಫುಟ್‌ಬಾಲ್‌ಮೇಲೆ ಅಷ್ಟು ಮೋಹವಿಲ್ಲ ಸಾರ್ ! ಆದಷ್ಟು ಬೇಗ ಊಟಮಾಡಿ ಬಂದುಬಿಡ್ತೇನೆ. ಫುಟ್ ಬಾಲ್ ಬರದೇ ಇದ್ದರೆ ಬದುಕಿ ಪ್ರಯೋಜನವೇ ಇಲ್ಲ ಎಂದೇ ಅವರುಗಳ ಖಚಿತವಾದ ಅಭಿಪ್ರಾಯ. ಸಾಹಿತ್ಯದ ಮಾತಿಲ್ಲ, ವಿಜ್ಞಾನದ ಸುದ್ದಿ ಇಲ್ಲ. ಹೇಗೆ ತಡೆಯಕ್ಕಾಗುತ್ತೆ ಸಾರ್ ಇವರ ಕಾಡು ಹರಟೇನ ?" ಎಂದ.

ಆ ವೇಳೆಗೆ ಪರೀಕ್ಷಾ ಸಾಮಾನುಗಳೆಲ್ಲವನ್ನೂ ಅಣಿಮಾಡಿಕೊಂಡಿದ್ದೆ. ಸಾವಧಾನ್ತ ಅವನ ಪರೀಕ್ಷೆಯನ್ನು ಪೂರ್ಣವಾಗಿ ಮಾಡಿದೆ. ನರಮಂಡಲವನ್ನು ಅತಿ ಸೂಕ್ಷ್ಮವಾಗಿ ಪರೀಕ್ಷೆಮಾಡಿದೆ. ಎಲ್ಲಿಯೂ ಯಾವ ದೋಷವೂ ಕಂಡುಬರಲಿಲ್ಲ. ಕಂಡುಬರುತ್ತೆ ಎಂದು ನಾನು ನಿರೀಕ್ಷಿಸಿಯೂ ಇರಲಿಲ್ಲ.

ಅಂದಮೇಲೆ ಜಾಣನಾದ ರೋಗಿಯನ್ನು ನನ್ನ ನಂಬಿಕೆಯಲ್ಲಿ ಪಾಲುಗಾರನನ್ನಾಗಿ ಮಾಡುವುದು ಉತ್ತಮ ಎಂದು ಎನ್ನಿಸಿತು. ಅದಕ್ಕೇ ಅವನಿಗೆ ರೋಗದ ವಿವರಗಳನ್ನು ಸಾಮಾನ್ಯರು ತಿಳಿಯಬಹುದಾದ ರೀತಿಯಲ್ಲಿ ಹೇಳಲು ಯತ್ನಿಸಿದೆ.

"ನೋಡು, ಪಿಲ್ಲಿನ್ನ. ಅಪಸ್ಮಾರ ರೋಗ ಬರುವುದಕ್ಕೆ, ಮೆದುಳಿನ ಯಾವುದಾದರೂ ಒಂದು ಭಾಗದಲ್ಲಿ ಅತಿಯಾಗಿ ವಿದ್ಯುತ್‌ಶಕ್ತಿ ಸೇರಿಕೊಂಡು ಮಿತಿಮೀರಿದಾಗ ಸಿಡಿಯುವುದೇ ಕಾರಣ. ಉದಾಹರಣೆಗೆ ಹೇಳ್ತೀನಿ: ಮೋಟಾರು ಕಾರಿನಲ್ಲಿ ಬ್ಯಾಟರಿ ಇರುಲ್ಲವೇನಪ್ಪ! ಅದರ ಎರಡೂ ಟರ್ಮಿನಲ್ಲುಗಳಿಗೆ ತಂತಿಯನ್ನು ಬಿಗಿದು, ತಂತಿಗಳನ್ನು ಹತ್ತಿರ ಹತ್ತಿರ ಹಿಡಿದರೆ, ಮಿಂಚು ಹೊಡೆಯುತ್ತೆ ಅಲ್ಲವೇ? ಮೆದುಳಿನ ಕೆಲವು ಕಣಗಳಲ್ಲಿ ವಿದ್ಯುತ್‌ಶಕ್ತಿಯು ರಾಸಾಯನಿಕ ಮಾರ್ಪಾಡುಗಳಿಂದ ಉಂಟಾಗಿ, ಕ್ರೋಢೀಕೃತವಾಗುತ್ತದೆ, ಇದು ಒಂದು ಹಂತಕ್ಕೆ ಬಂದಾಗ ಸಿಡಿಯುತ್ತದೆ. ಮೆದುಳಿನ ಆ ಭಾಗದಿಂದ ದೇಹದ ಯಾವ ಅಂಗಗಳಿಗೆ ನರಸಮೂಹವು ಹರಡಿದೆಯೋ ಆ ಅಂಗಗಳೆಲ್ಲಾ ಒದರುತ್ತವೆ. ಇದನ್ನೇ ಅಪಸ್ಮಾರ. ಮಲರೋಗ, ಮೂರ್ಛೆರೋಗ ಎಂದು ಕರೆಯುವುದು.

"ಎಳೆಯ ಮಕ್ಕಳಲ್ಲಿ ಸರಿಯಾಗಿ ಮಲವಿಸರ್ಜನೆಯಾಗದಿದ್ದರೆ, ಮೂತ್ರ ವಿಸರ್ಜನೆಗೆ ತೊಂದರೆಯಾಗಿದ್ದರೆ, ಆ ಅಂಗಗಳಿಂದ ಮೆದುಳಿಗೆ ಹೋಗುವ ನರಸಮೂಹಗಳು ಉದ್ರೇಕಗೊಳ್ಳುತ್ತವೆ. ಅಂದರೆ ಮೆದುಳಿನ ಆ ಭಾಗವು ಉದ್ರೇಕವಾಗಿ, ಅಪಸ್ಮಾರ ಬರಬಹುದು. ನರಮಂಡಲವು ಎಳೆಯ ಮಕ್ಕಳಲ್ಲಿ ಪೂರ್ಣವಾಗಿ ಬೆಳೆಯದೇ ಇರುವುದು ಇದಕ್ಕೆ ಕಾರಣ. ೨-೩ ವರ್ಷವಾಗುವ ತನಕ ಈ ತೆರನಾದ ಅಪಸ್ಮಾರ ಬರಬಹುದು.

"ಅಥವಾ ಮೆದುಳಿನ ಬೆಳವಣಿಗೆಯಲ್ಲೇ ದೋಷವಿದ್ದೂ ಹೀಗೆ ಅಪಸ್ಮಾರ ಬರಬಹುದು.

"ಆದರೆ ವಯಸ್ಸಾದ ಮೇಲೆ ಈ ರೀತಿ ಅಪಸ್ಮಾರ ಬಂದರೆ ದೈಹಿಕ ಕಾರಣಗಳು ಅಷ್ಟಾಗಿ ಮುಖ್ಯ ಪಾತ್ರವನ್ನು ವಹಿಸುವುದಿಲ್ಲ. ಹಾಗಿದ್ದರೂ ನಿನ್ನನ್ನು ಪೂರ್ಣ ಪರೀಕ್ಷೆಮಾಡಿ, ಅಂತಹ ದೋಷಗಳಿಲ್ಲ ಎಂದು ಸ್ಥಿರಮಾಡಿ ಕೊಂಡೆ. ಮೆದುಳಿನಲ್ಲಿ ನಮ್ಮ ಪರೀಕ್ಷೆಗೆ ಸಿಲುಕುವಂತಹ ಯಾವ ದೋಷವೂ

ಕಂಡುಬರಲಿಲ್ಲ. ಸಾಮಾನ್ಯವಾಗಿ ಕಂಡುಬರುವುದೂ ಇಲ್ಲ. ಹಾಗೆ ದೋಷವು ಕಂಡುಬಂದಾಗ, ದೇಹದ ಒಂದೇ ಭಾಗಕ್ಕೆ, ಹಂತಕ್ಕೆ ಅಪಸ್ಮಾರ ಒಡಿಯುತ್ತವೆ. ಕಾರಣಗಳು ಸಿಗದಿದ್ದಾಗ ಅದನ್ನು Cryptogenic Epilepsy (ರಹಸ್ಯಾತ್ಮಕ ಅಪಸ್ಮಾರ) ಎಂದು ಕರೆಯುತ್ತೇವೆ.

"ಇಂತಹ ಸಂದರ್ಭಗಳಲ್ಲಿ, ವಾರಕ್ಕೆ ೩–೪ ಸರ್ತಿ ಅಪಸ್ಮಾರ ಬಡಿದರೆ ಸಾಕಷ್ಟು ಔಷಧಿಗಳನ್ನು ದಿನಂಪ್ರತಿ ಬಿಡದೆ ಕೊಟ್ಟು, ಮೂರ್ಛೆ ಬರದಂತೆ ಮಾಡಬಹುದು. ನಿನಗೆ ಒಂದೇ ಸರ್ತಿ ಮೂರ್ಛೆ ಬಂದಿರೋದು. ತಿರುಗಿ ಇನ್ನೊಂದು ಸರ್ತಿ ಬಂದರೆ, ಯಾವಾಗ ಬರುತ್ತೆ ಎಂಬುದನ್ನೂ ನೋಡಿಕೊಂಡು ಆಮೇಲೆ ಔಷಧಿಗಳನ್ನು ಕೊಡೋದೇ ಬೇಡವೇ ಯೋಚಿಸೋಣ.

"ಎಷ್ಟೋ ಬಾರಿ, ಸಿನ್ನ ವಯಸ್ಸಿನಲ್ಲಿ ಶುರುವಾದ ಮೂರ್ಛೆರೋಗವು ಒಂದೋ ನಾಲ್ಕೋ ಸರ್ತಿ ಬಂದು, ಐದಾರು ವರ್ಷಗಳಲ್ಲಿ, ಹೇಗೆ ಹಠಾತ್ತಾಗಿ ಬಂದಿತೋ ಹಾಗೆಯೇ ಮಾಯವಾಗುವುದೂ ಉಂಟು.

"ಅಂದರೆ ನಿನ್ನ ವ್ಯಾಸಂಗ, ನಿನ್ನ ಚಟುವಟಿಕೆ ಎಲ್ಲವನ್ನೂ ಯಥಾ ಪ್ರಕಾರ ಮಾಡುತ್ತಾ ಇರು. ಇನ್ನೊಂದು ಸಾರಿ ಮೂರ್ಛೆ ಬರದೇ ಇದ್ದರೆ ಒಳ್ಳೆಯದೇ ಆಯಿತು. ನಿನಗೆ ಮೂರ್ಛೆ ಬಡಿಯುವ ಮೊದಲು ಬಲಭಾಗದ ಮೇಲುಹೊಟ್ಟೆಯನ್ನು ಹಿಡಿದುಕೊಂಡು ಸಂಕಟ, ಮರಣಸಂಕಟ ಅಂತ ಕಿರುಚಿದೆಯಂತೆ. ಇದರಿಂದ ಅಪಸ್ಮಾರದ ಕಾರಣವನ್ನು ಊಹಿಸುವುದು ತಪ್ಪಾದರೂ, ಆ ಅಂತರದಲ್ಲಿರುವ ಲಿವರ್ ಮತ್ತು ಪಿತ್ತಕೋಶದ ಚೀಲವನ್ನು ಹದನಾಗಿಟ್ಟುಕೊಳ್ಳುವುದರಲ್ಲಿ ತಪ್ಪೇನೂ ಇಲ್ಲ. ಅದಕ್ಕಾಗಿ ದೊಡ್ಡಪತ್ರೆ ಸೊಪ್ಪು, ಜೀರಿಗೆ, ಬೆಳ್ಳುಳ್ಳಿ ಇಂತಹವುಗಳನ್ನು ಹೆಚ್ಚಾಗಿ ಉಪಯೋಗಿಸು; ಜಿಡ್ಡು ಪದಾರ್ಥಗಳನ್ನು ಕಡಿಮೆ ಊಟಮಾಡು. ಹೀಗೆ ಆಹಾರದಲ್ಲಿ ಹುಷಾರು ವಹಿಸಿಕೊಂಡರೆ ಒಳ್ಳೆಯದು. ಹಾಗೂ ಸಾಕಷ್ಟು ನೀರು ಕುಡಿದು ವ್ಯಾಯಾಮ ಮಾಡಿ ಮಲವಿಸರ್ಜನೆ ಸರಿಯಾಗಿ ಆಗುವಂತೆ ಅಭ್ಯಾಸ ಮಾಡಿಕೋ.

"ಎಲ್ಲಕ್ಕಿಂತಲೂ ಹೆಚ್ಚಾಗಿ, ಮುಂದೆ ಏನಾಗಿಬಿಡುತ್ತೋ ? ಸಿಂತ ಸಿಂತಲ್ಲೇ, ಎಲ್ಲಿ ಅಂದರೆ ಅಲ್ಲಿ ಅಪಸ್ಮಾರ ಬಡಿದರೆ ನನ್ನ ಮುಂದಿನ ಬಾಳು ಹೇಗೆ ? ವಿದ್ಯಾಭ್ಯಾಸವನ್ನು ಮುಂದುವರಿಸುವುದಾದರೂ ಹೇಗೆ ? ಎಂದೆಲ್ಲಾ

ಅನುಮಾನಗಳು ಸ್ವಾಭಾವಿಕವಾಗಿ ಬರುತ್ತವೆ. ಅಂತಹ ರೋಗಿಗಳಿಗೆ ಅಪ ಸ್ಮಾರವು ವಂಶಾನುಗತವಾಗಿ ಬಂದಿರುತ್ತದೆ ತಂದೆ ತಾಯಿಯರ ಪಾಪದ ಸೋಂಕು ಅವರ ರಕ್ತದಲ್ಲಿ ಹರಿದು ಮೆದುಳಿನಲ್ಲಿ ಮನೆಮಾಡಿಕೊಂಡಿರಬಹುದು. ನಿನಗೆ ಆ ತರಹ ಯಾವ ಶಂಕೆಯೂ ಬೇಡ. ಇನ್ನೊಂದು ಸರ್ತಿ ನೀನು ಬಂದಾಗ ಅಪಸ್ಮಾರ ಬಂದರೂ ಸಮಾಜದಲ್ಲಿ ಕೀರ್ತಿಶಾಲಿಗಳಾಗಿ ಬಾಳಿ ಬದುಕಿದವರ ಜೀವನಚರಿತ್ರೆಯ ಪುಸ್ತಕವನ್ನು ಕೊಡುತ್ತೇನೆ. ಓದು.

"ನಿನ್ನ ಕಾಯಿಲೆಯ ವಿಚಾರವನ್ನು ಇನ್ನುಮೇಲೆ ನಾನು ನೋಡಿಕೊಳ್ಳು ತ್ತೇನೆ. ಅದರ ಕಾಳಜಿ ನನಗಿರಲಿ. ಒಂದೇ ರೋಗಕ್ಕೆ ನಾವಿಬ್ಬರೂ ಕಾಳಜಿ ಮಾಡಿದರೆ ಏನು ಪ್ರಯೋಜನ?" ಎಂದು ಸಕಲ ವಿವರಗಳನ್ನೂ ಹೆಚ್ಚು ಮರೆ ಮಾಚದೆ ಹೇಳಿ, ಧೈರ್ಯ ತುಂಬಿ, ನಿನ್ನ ಬೆಂಬಲಕ್ಕೆ ನಾನಿದ್ದೇನೆ ಎಂಬ ಭರವಸೆ ಕೊಟ್ಟು, ಹತ್ತು ಗಂಟೆಯ ಹೊತ್ತಿಗೆ ಅವನ ಮನೆಗೆ ಕಳಿಸಿಕೊಟ್ಟೆ.

"ಹತ್ತು ಹದಿನೈದು ದಿನಕ್ಕೊಮ್ಮೆಯಾದರೂ ಮನೆಗೆ ಬಂದು ನಿನ್ನ ಅತ್ತೇನ ನೋಡಿಕೊಂಡು ಹೋಗು. ನೀನು ಹೇಗಿದ್ದೀ ಅಂತ ಆಗಾಗ್ಗೆ ಕೇಳ್ತಾ ಇರ್‍ತಾಳೆ. ಒಂದಿಷ್ಟು ದಿನ ನಿನ್ನನ್ನು ಎತ್ತಿಕೊಂಡಿದ್ದಕ್ಕೇ ಇಷ್ಟು ವಾತ್ಸಲ್ಯ ಆಕೆಗೆ" ಎಂದು ಹೇಳಿದೆ.

"ಸಕಲ ವಿವರಗಳನ್ನೂ ಹೆಚ್ಚು ಮರೆಮಾಚದೆ ಹೇಳಿದೆ" ಎಂದು ಹೇಳಿದೆ ಅಲ್ಲವೇ! ವಯಸ್ಸಾದ ಮೇಲೆ ಮೊದಲ ಬಾರಿಗೆ ಅಪಸ್ಮಾರ ಬಂದರೆ ಸುಮಾರು ದಿವಸ ಅದು ಕಾಡಿಸುತ್ತೆ; ಬೇಗ ಹೋಗುವುದಿಲ್ಲ ಎಂದು ಈ ತನಕ ಇರುವ ಅನುಭವದಿಂದ ರೂಪಿಸಿಬಂದ ಶಾಸ್ತ್ರೀಯ ಅಭಿಪ್ರಾಯ. ಅದೊಂದನ್ನು ಮರೆಮಾಚಿದ್ದೆ ಅಷ್ಟೆ.

ಇದಾದ ನಾಲ್ಕು ತಿಂಗಳ ಮೇಲೆ ಒಂದು ಸಲ ಅಪಸ್ಮಾರ ಬಡಿಯಿತು. ಪಿಲ್ಲನ್ನನಿಗೆ. ಅದೂ ಭಾನುವಾರ ಸಂಜೆ ವೇಳೆಯಲ್ಲಿ. ಮ್ಯಾಚು ಗೆದ್ದುಕೊಂಡು ಜಯಭೇರಿ ಹೊಡೆಯುತ್ತಾ ಗೋಪಾಲಿ ಮನೆಗೆ ಬಂದನಂತೆ. ಅಕ್ಕನ ಮುಂದೆ 'ಹೀಗೆ ಹೀಗೆ ಆಡಿದೆ. ಎದುರಾಳಿ ಕ್ಯಾಪ್ಟನ್ನನ ಎದುರು ಮೈನಸ್‌ಮಾಡಿ. ಚೆಂಡನ್ನು ಅವನ ಕಾಲುಗಳ ಮಧ್ಯೆ ತೂರಿಸಿ, ಆ ಕಡೆ ಓಡಿಹೋಗಿ, ಸರ್ರಂತ ಗೋಲನ್ನು ಒಬ್ಬನೇ ಹೊಡೆದೆ' ಎಂದು ಜಂಭಕೊಚ್ಚಿದನಂತೆ.

"ಅಂಥಾ ಮ್ಯಾಚು ನೋಡದೆ ಮನೇಲಿ ಪೊಟ್ಟೆಕೋಳಿಯ ಹಾಗೆ ಕೂತಿದ್ದೆಯಲ್ಲೋ" ಎಂದು 'ಅಕ್ಕ' ಅಂದಿದ್ದಳಂತೆ.

"ಫುಟ್‌ಬಾಲ್ ಆಡದಿದ್ದರೆ ಕೆಡತು. ಯಾವುದಾದರೂ ಆಟ ಆಡಿದ್ದರೆ ಅಪಸ್ಮಾರ ಯಾಕೆ ಬರುತ್ತೆ ಅಂತ ಲೋಕಾಭಿರಾಮವಾಗಿ ಅಂದೆ ಸಾರ್! ಒಂದರೆಕ್ಷಣದಲ್ಲಿ ಮೊದಲ ಸರ್ತಿ ಆದ ಹಾಗೆ ಬಲಭಾಗದ ಮೇಲುಹೊಟ್ಟೆಯನ್ನು ಹಿಡಿದುಕೊಂಡು ಕಿರಿಚಿದ, ಮೂರ್ಛೆ ಬಂತು. ಆದರೆ ಎರಡೇ ನಿಮಿಷದಲ್ಲಿ ಎಚ್ಚರಗೊಂಡು ಕಣ್ಣುತೆರೆದಿದ್ದ. ನಿಮ್ಮನ್ನು ಕರೆದುಕೊಂಡು ಹೋಗುಕ್ಕೆ ಅಂತ ಓಡಿಬಂದುಬಿಟ್ಟೆ" ಎಂದು ಗೋಪಾಲಿ ನನ್ನ ಕರೆಯುಕ್ಕೆ ಬಂದಾಗ ಹೇಳಿದ.

ನಾನೂ ಹೋಗಿ ನೋಡಿದೆ. ಅಷ್ಟು ಹೊತ್ತಿಗೆ ಹುಷಾರಾಗಿದ್ದ. "ನಾಲ್ಕು ತಿಂಗಳಿಗೆ ಈಗ ಬಂದಿದೆ. ಬೆಳಗ್ಗೆ ಮಲವಿಸರ್ಜನೆಯಾಗಿತ್ತೆ ? ನಿನ್ನೆ ರಾತ್ರಿ ನಾಟಕ ಸಿನಿಮಾ ನೋಡುಕ್ಕೆ ಹೋಗಿ ನಿದ್ರೆಕೆಟ್ಟಿದ್ದೆಯಾ ?" ಎಂದು ಕೇಳಿ, ಅಂತಹ ಕಾರಣಗಳಿಲ್ಲ ಎಂದು ಖಂಡಿತಮಾಡಿಕೊಂಡೆ.

ಆ ವೇಳೆಗೆ ಅವನ ತಂದೆಯೂ ಬಂದರು. ಅವರಿಗೂ ವಿಷಯವನ್ನು ತಿಳಿಸಿ, ಸದ್ಯಕ್ಕೆ ಚಿಕಿತ್ಸೆ ಏನೂ ಬೇಡ ಅಂತ ಸಕಾರಣವಾಗಿ ಹೇಳಿ ಹಿಂತಿರುಗಿದೆ.

ಆ ವರ್ಷ ಇಂಟರ್‌ಮೀಡಿಯೇಟ್‌ನಲ್ಲಿ ಎರಡನೇ ರ್‍ಯಾಂಕು ಗಿಟ್ಟಿಸಿದ ಪಿಲ್ಲನ್ನ. ಖರಗ್‌ಪುರ್ ಇಂಜಿನಿಯರಿಂಗ್ ಕಾಲೇಜಿನ ಪ್ರವೇಶ ಪರೀಕ್ಷೆಗೆ ಕೂತು ಅದರಲ್ಲಿ ಅಖಿಲ ಭಾರತಕ್ಕೆ ನಾಲ್ಕನೇ ಸ್ಥಾನವನ್ನು ಗಳಿಸಿದ. ನಮ್ಮೂರಿನ ಇಂಜಿನಿಯರಿಂಗ್ ಕಾಲೇಜಿನಲ್ಲಿ ಕೂಡ ಅವನಿಗೆ ಪ್ರವೇಶವು ನಿರಾಯಾಸವಾಗಿ ಸಿಕ್ಕಿತ್ತು. "ಅಪ್ಪ ಹೇಳ್ತಾರೆ, ಇಲ್ಲೇ ಓದು ಅಂತ. ಖರಗ್‌ಪುರಕ್ಕೆ ಹೋಗುಕ್ಕೆ ನನಗೆ ಆಸೆ. ನೀವೇನಾದರೂ ರಾಜಿ ನ್ಯಾಯ ಮಾಡಿ ಈ ಊರು ಬಿಡೋ ಹಾಗೆ ಮಾಡಿ ಡಾಕ್ಟರೇ. ಅತ್ತೆ! ನೀವೇ ನಾದರೂ ಮಾಡಿ ಡಾಕ್ಟರ ಮನಸ್ಸನ್ನು ಒಲಿಸಿಕೊಂಡು ಈ ಕೆಲಸ ನನಗೆ ಮಾಡಿಸಿಕೊಡಬೇಕು" ಎಂದು ಭಾನುವಾರ ಸಂಜೆ ನಾವಿಬ್ಬರೂ ಕೂತಿದ್ದಾಗ, ಪಿಲ್ಲನ್ನ ಬಂದು ಕೇಳಿಕೊಂಡ. ತಿಂಡಿ ಕಾಫಿ ಕುಡಿದು, ನನ್ನ ಮನೆಯೊಡತಿಯ ಕೈಯಲ್ಲಿ ನಟ್ಟಿಗೆ ಮುರಿಸಿಕೊಂಡು ಪಿಲ್ಲನ್ನ ಹೋದ.

ಅವನು ಹೋದ ದಿಕ್ಕನ್ನೇ ನೋಡುತ್ತ, "ಏನಾರೂ ಮಾಡಿ, ತಬ್ಬಲಿ ಮಗು! ಕೇಳಿದ್ದನ್ನು ಮಾಡಿಕೊಡಿ ಅಂದ್ರೆ" ಅಂದಳು ಮನೆಯೊಡತಿ.

"ಅಷ್ಟು ಆದರಮಾಡುವ ಮಲತಾಯಿ ಇದ್ದರೂ, ತನ್ನ ಸ್ವಂತ ಮಕ್ಕಳಿಲ್ಲದೆ ಇರುವ ಆಕೆ ಇದ್ದರೂ, ಇವನು ತಬ್ಬಲಿಮಗು! ಹಾಗೇಕೆಂದಿತು, ಈ ತಾಯಿಹೃದಯ" ಎಂದು ನನಗೆ ಸ್ವಲ್ಪ ತಬ್ಬಿಬ್ಬಾಯಿತು.

ಪಿಲ್ಲನ್ನನ ತಂದೆಯನ್ನು ಭೆಟ್ಟಿಯಾಗಿ, "ಖರಗ್‌ಪುರದ ಕಾಲೇಜಿನಲ್ಲಿ ಚೆನ್ನಾಗಿ ಕಲಿಸುತ್ತಾರೆ. ಪ್ರವರ್ಧಮಾನಕ್ಕೆ ಬರಲು ಬಹಳ ಅವಕಾಶಗಳಿರುತ್ತೆ. ಕೈತುಂಬಾ ವಿದ್ಯಾರ್ಥಿವೇತನ ಬಂದ್ರು, ನಿಮ್ಮ ಕೈ ಏನೂ ಕಚ್ಚುಲ್ಲ. ನಮ್ಮೂರಿನ ಇಂಜಿನಿಯರಿಂಗ್ ಕಾಲೇಜ್ ಸೇರಿ, ಭಾವಿಯಲ್ಲಿರೋ ಕಪ್ಪೆ ತರಹ ಏಕೆ ಆಗಬೇಕು? ಹುಡುಗ ಹೊರಗೆ ಹೋಗಿ ಧೈರ್ಯ ಸಂಪಾದಿಸಲಿ. ಊರು ಕೇರಿ ನೋಡಿ ಜೀವನದ ಪಾಠಗಳನ್ನೂ ಕಲಿಯಲಿ" ಎಂದು ಆಗ್ರಹದ ಆದರದ ವಿನಂತಿ ಮಾಡಿ, ಅವರನ್ನೊಪ್ಪಿಸಿದೆ.

ಇದಾಗಿ ಆರು ವರ್ಷಗಳ ಕಾಲ ತಿಂಗಳಿಗೊಮ್ಮೆ ಪಿಲ್ಲನ್ನ ಎಲ್ಲಿದ್ದರೂ ನನಗೊಂದು ಕಾಗದ ಬರೆಯುತ್ತಿದ್ದ: "ಆರೋಗ್ಯವಾಗಿದ್ದೀನಿ. ತಿರುಗಿ ಏನೂ ಬಂದಿಲ್ಲ. ಓದು ಸುಸೂತ್ರವಾಗಿ ನಡೆಯುತ್ತಿದೆ. ಅತ್ತೆಗೆ ನಮಸ್ಕಾರ ಹೇಳಿ."

ಅನಂತರ ಆರು ವರ್ಷ ಎರಡು ತಿಂಗಳಿಗೊಮ್ಮೆ ಇದೇ ತರಹ ಕಾಗದ ಬರುತ್ತಿತ್ತು: "ಆರೋಗ್ಯವಾಗಿದ್ದೀವಿ. ತಿರುಗಿ ಏನೂ ಬಂದಿಲ್ಲ. ನೌಕರಿ ಹಿತವಾಗಿದೆ. ಅತ್ತೆಗೆ ನಮ್ಮಿಬ್ಬರ ನಮಸ್ಕಾರಗಳನ್ನೂ ಹೇಳಿ."

ನೌಕಾ ಎಂಜಿನಿಯರಿಂಗ್ ಪರೀಕ್ಷೆ ಪ್ಯಾಸುಮಾಡಿ ನೌಕಾದಳದಲ್ಲಿ ದೊಡ್ಡ ಕೆಲಸಕ್ಕೆ ಸೇರಿಕೊಂಡಿದ್ದ. ಅಧಿಕಾರಿಗಳ ಮಗಳನ್ನು ಮದುವೆಯಾಗಿದ್ದ. ಲಗ್ನಪತ್ರಿಕೆಯನ್ನೂ, ತಮ್ಮಿಬ್ಬರ ಫೋಟೋ ಒಂದನ್ನೂ ನಮಗೆ ಆಗಲೇ ಕಳಿಸಿದ್ದ.

"ಮಕ್ಕಳಾಗಿದ್ದರೆ ಅವುಗಳ ಫೋಟೋನೂ ಕಳಿಸು, ಅಂತ ಕಾಗದ ಬರೀರಿ ಅಂದ್ರೆ" ಅಂತ ಈಕೆ ಎಷ್ಟೋ ಸಾರಿ ಹೇಳಿದಳು. ನಾಳೆ ಬರೀತೀನಿ, ನಾಡಿದ್ದು, ಅಂತ ಕಡೆಗೆ ಮರೆತೇಬಿಟ್ಟಾ ಇದ್ದೆ. ಈಗವರು ಎಲ್ಲಿದ್ದಾರೋ ತಿಳಿಯದು. ಅವರ ಕಡೆಯ ಕಾಗದ ಬಂದು ಎರಡು ವರ್ಷದ ಮೇಲಾಗಿತ್ತು.

ಜವಾಬು ಕೊಡಲಿಲ್ಲ ಅಂತ ಬೇಸರಪಟ್ಟುಕೊಂಡು ಹಾಗೆ ಮಾಡಿದ್ದರು ಅವರು, ಎಂದೇ ನನ್ನ ನಂಬಿಕೆ.

## ಕಲಿತ ಪಾಠ

ಹದಿನೆಂಟರ ಪ್ರಾಯದಲ್ಲಿ ಮೊದಲಬಾರಿಗೆ ಕಾಣಿಸಿಕೊಂಡ ಆನುವಂಶಿಕವಾಗಿರದ ಮೂರ್ಛೆರೋಗ ಇನ್ನೊಮ್ಮೆ ಮಾತ್ರ ಕಾಣಿಸಿಕೊಂಡಿತ್ತು. ಅನಂತರ ಮನೆಯನ್ನು ಬಿಟ್ಟು ಖರಗ್‌ಪುರಕ್ಕೆ ಹೋದಮೇಲೆ ಹನ್ನೆರಡು ವರ್ಷಗಳು ಅವನಿಗೆ ಪುನಃ ಮೂರ್ಛೆ ಬಂದಿರಲಿಲ್ಲ.

ಆದರೆ ವೈದ್ಯಶಾಸ್ತ್ರದ ಪ್ರಕಾರ ಹೀಗೆ ಗುಣವಾಗುವುದು ವಿರಳ. ಆದರೂ ದೈಹಿಕವಾಗಿರದೆ, ಕೇವಲ ಮಾನಸಿಕ ಕಾರಣಗಳಿಂದಲೇ ಮೂರ್ಛೆ ಬರಬಹುದು ಎನ್ನುವುದಕ್ಕೆ ಸಾಕಷ್ಟು ನಿದರ್ಶನಗಳುಂಟು.

ಆದರೆ ಪಿಲ್ಲನ್ನನಿಗೆ ಏನಾಗಿದ್ದಿರಬಹುದು ? ಜಾಣಹುಡುಗ. ಚೆನ್ನಾಗಿ ಓದುತ್ತಾ ಇದ್ದವ. ತುಂಬಾ ವಿಶ್ವಾಸಪ್ರಕೃತಿ. ಯಾರಾದರೂ ಮೂದಲಿಸಿದರಾಗಲಿ, ಸ್ವಲ್ಪ ಜಂಭದಿಂದ ವರ್ತಿಸಿದರಾಗಲಿ, ಅತಿಯಾಗಿ ನೊಂದುಕೊಳ್ಳುವ ಜಾಯಮಾನ. ಗೋಪಾಲಿಗೆ ಆಟದ ಮೈದಾನದಲ್ಲಿ ಮೆರೆಯುವ ಹಾಗೂ ಮೆರೆದು ಮೇಲುಕುಹಾಕಿ ಸುಖಕಾಣುವ ಸ್ವಭಾವ. ಅಂತಹ ಸ್ವಭಾವದಿಂದ ದೂರ ಇರಬೇಕೆಂಬ ಮನದಾಳದ ಹಂಬಲವು ಸ್ವಾಭಾವಿಕ. ಹಾಗೆ ಮಾಡಲು ಸಂಸಾರದಲ್ಲಿ ಸಾಧ್ಯವಿಲ್ಲ. ಅಂತಹ ಸಂದರ್ಭದಲ್ಲಿ ಏನಾಗಿರಬಹುದು ? ಮನೆಯಲ್ಲಿ ಅಕ್ಕನ, ತಮ್ಮನ ಸ್ವಭಾವವೇನು ? ಹುಟ್ಟುಗುಣವೇನಿರಬಹುದು ?

ಕಲಿಯಲಿಕ್ಕೆ ಬಾಲ್ಯದಲ್ಲಿ ಶುರುಮಾಡಿದಾಗ ಆಟ ಊಟ ಓಟ ಎಂದು ಪ್ರಾರಂಭಿಸಿದ್ದರು. ಆದರೆ ಜೀವನದಲ್ಲಿ ಇಷ್ಟೇ ಸಾಕು, ಸುಖಪಡುವುದಕ್ಕೆ, ಎಂದು ಅಂದುಕೊಂಡವರು. 'ಪಾಠ ಅಂತ ಇನ್ನೊಂದು ಹಿರಿಯ ವಸ್ತುವಿದೆ. ಅದನ್ನು ಅಭ್ಯಾಸಮಾಡಿದರೆ ಬಾಳು ಚೆನ್ನಾಗುತ್ತದೆ' ಎಂದು ಅರಿಯುವಷ್ಟು ಬುದ್ಧಿಯನ್ನು ಕರುಣಾಮಯನಾದ ಭಗವಂತನು ಅವರಿಗೆ ದಯಪಾಲಿಸಿರಲಿಲ್ಲ. ಹಾಗಾಗಿ ಸುಖವಾಗಿ ಆಡಿಕೊಂಡು ಮೆರೆಯುತ್ತಾ ಇದ್ದರು. ಹಾಗೆ ಮೆರೆಯುವಾಗ ಸಂತ್ರಸ್ತರೂ ಇದ್ದವರ ಮನಸ್ಸಿಗೆ ನೋವಾಗಬಹುದು ಎಂದು

ಅನುಮಾನವೂ ಬರುತ್ತಿದ್ದಿಲ್ಲ. ಇದು ಸ್ವಾಭಾವಿಕವಾದದ್ದೇ! ಇತರರಿಗೆ ನೋವಾಗಬಹುದು ಎಂಬ ಅನುಮಾನ ಬರಬೇಕಾದರೆ ಸ್ವಲ್ಪ ಬುದ್ಧಿ ಇರಬೇಕು. ಹಾಗೆ ಬುದ್ಧಿ ಇದ್ದೋರು ತಿದ್ದಿಕೊಳ್ಳಲು ಸಾಧ್ಯವಾಗುತ್ತೆ. ತಿದ್ದಿಕೊಂಡ ನಂತರ ಇತರರಿಗೆ ನೋವಾಗದ ಹಾಗೆ ನಡೆದುಕೊಳ್ಳುತ್ತಾರೆ. ಅಂದವೇಲೆ ಮೆರೆಯುವ ಸ್ವಭಾವದವರಿಗೆ ಇತರರ ನೋವು ಸಂಕಟಗಳ ಮೇಲೆ ಹೆಚ್ಚು ಗಮನವಿರಲು ಸಾಧ್ಯವಿಲ್ಲ.

ಅಕ್ಕನ, ತಮ್ಮನ ಸ್ವಭಾವ ಹೀಗಿರುವಾಗ, ಇದಕ್ಕೆ ವ್ಯತಿರಿಕ್ತವಾದ ಸ್ವಭಾವದ ಪಿಲ್ಲನ್ನನಿಗೆ ಬಲು ತ್ರಾಸಾಗಿರಬೇಕು. ಓದುಕ್ಕೆ ಬಂದಾಗಿನಿಂದ. ಗೋಪಾಲಿ, ಮಾಲತಾಯಿಯರ ಮಾತುಕತೆ ಎಲ್ಲವೂ ಪಿಲ್ಲನ್ನನಿಗೆ ಬೇಸರ ತಂದಿರಬೇಕು. ಅವರಾಡಿದ ಮಾತುಗಳಲ್ಲಿ ತನ್ನನ್ನು ಮೂದಲಿಸುತ್ತಾರೆ ಎಂದು ಅವನು ತಪ್ಪು ತಿಳಿದಿರಲೂ ಬಹುದು. ಹೇಗೂ ಇರಲಿ, ಪಿಲ್ಲನ್ನ ನೊಂದುಕೊಂಡಿರಬೇಕು. ಎದುರುಮಾತಾಡಿ ಈ ನೋವನ್ನು ತೀರಿಸಿಕೊಳ್ಳುವ ಹಾಗಿಲ್ಲ. ಹಿರಿಯಳು ಮಾಲತಾಯಿ. ಮನಸ್ಸಿನಲ್ಲಿಯೇ ನುಂಗಿ ಮರೆಯು ವಂತಿಲ್ಲ. ಅಷ್ಟು ಸೂಕ್ಷ್ಮಸ್ವಭಾವವನ್ನು ತಂದೆತಾಯಿಯರಿಂದ ಪಡೆದು ಕೊಂಡು ಬಂದಿದ್ದು. ಅಂತಹ ಸಂದರ್ಭದಲ್ಲಿ ಏನು ಮಾಡಬೇಕು ? ಆಡಲೂ ಆಗದೆ, ಅನುಭವಿಸಲೂ ಆಗದೆ, ಆಗಾಗ್ಗೆ ಮೊಂಡುಬಿದ್ದು, ರೇಗಿ ಹುಚ್ಚಾಡಿ, ಅನಂತರ ಸ್ತಿಮಿತಕ್ಕೆ ಬಂದಿರಬೇಕು. ಇಷ್ಟರಲ್ಲೇ ಪರ್ಯವಸಾನಮಾಡಿ ಕೊಳ್ಳಲು ಆಗದಿದ್ದಾಗ ಮೂರ್ಛೆಬಿದ್ದಿರಬೇಕು.

ಎರಡು ಸಲ ಮೂರ್ಛೆ ಬಂದಾಗಲೂ, ಮಾಲತಾಯಿ ಮತ್ತು ಗೋಪಾಲಿ ಯರು ಮಾತನಾಡುತ್ತಿದ್ದರು. ಅವರು ಆಡಿದ ಮಾತುಗಳಿಂದಲೇ, ಅಥವಾ ನುಡಿದ ರೀತಿಯಿಂದಲೇ, ತೋರಿಸಿದ ಅಹಂಕಾರ ಸೂಸುವ ಮುಖಗಳಿಂದಲೇ. ಅಥವಾ ತಾತ್ಸಾರದಿಂದ ಪಿಲ್ಲನ್ನನ ಕಡೆ ತಿರುಗಿ ಮೂದಲಿಸುವ ದೃಷ್ಟಿಯನ್ನು ಹರಿಸಿ ಹುಬ್ಬನ್ನೆತ್ತುವುದರಿಂದಲೇ, ಅಥವಾ "ನೀನು ನಿಷ್ಪ್ರಯೋಜಕ, ಪುಸ್ತಕದ ಬದನೆಕಾಯಿ" ಎಂದು ಮಾತುಗಳನ್ನು ಆಡದೇನೇ ಸ್ಪಷ್ಟವಾಗಿ ಅರ್ಥವಾಗು ವಂತೆ ದನಿಯನ್ನು ಏರಿಳಿಸುವುದರಿಂದಲೇ, ಪಿಲ್ಲನ್ನನಿಗೆ ಬೇಜಾರು ಅತಿಯಾಗಿ ಬಂದಿರಬೇಕು. ಏನನ್ನೂ ಮಾಡಲಾಗದೆ ಮನಸ್ಸೆಲ್ಲಾ ಕಲಕಿದಂತಾಗಿ ಮೂರ್ಛೆ ಬಂದಿದ್ದಿರಬೇಕು.

ಖರಗ್‌ಪುರಕ್ಕೆ ಹೋದ. ನೌಕಾ ಇಂಜಿನಿಯರಿಂಗಿನಲ್ಲಿ ಪ್ರಶಸ್ತಿ ಪಡೆದು ಪ್ಯಾಸುಮಾಡಿದ. ಮನದಂತರಾಳದಲ್ಲಿ ಅವನಿಗನಿಸಿರಬೇಕು: 'ನಮ್ಮೂರು ಕಡೆಗೆ ಹೋಗುವುದೇ ಬೇಡ. ಆ ಊರು ಕಡೆಯ ಹೆಣ್ಣುಗಳೊಂದಿಗೆ ಸಂಸಾರ ಮಾಡಿಕೊಂಡು ಅನುಭವಿಸುವುದೂ ಬೇಡ' ಎಂದು. ಅದಕ್ಕೇ ಪ್ರಾಯಶಃ, ಅಧಿಕಾರಿಗಳ ಮಗಳನ್ನು ಮದುವೆಯಾಗುವ ಅವಕಾಶ ಸಿಕ್ಕಾಗ ಹ್ಞೂ ಅಂತ ಒಪ್ಪಿಕೊಂಡಿರಬೇಕು.

ಖರಗ್‌ಪುರಕ್ಕೆ ಹೋದಾಗಿನಿಂದ ಅವನ ಮನಸ್ಸಿನ ಅಂತಸ್ಸಿಗೆ ಸರಿಯಾದ ಸರಿದೂಗುವ ಸಂಸ್ಕೃತಿಯಿದ್ದವರ ಸ್ನೇಹ ಸಹವಾಸಗಳು ದೊರಕಿರಬೇಕು. ಪುನಃ ಮೂರ್ಛೆ ಬಾರದೇ ಇರುವಂತೆ ಆಗಿರಬೇಕು.

ಮೂರ್ಛೆ ಬರುತ್ತಿತ್ತು ಎಂದರೂ ನೌಕಾದಳದಲ್ಲಿ ಕೆಲಸಕ್ಕೆ ಸೇರಿಸಿ ಕೊಳ್ಳುವುದಕ್ಕೆ ಯೋಚನೆಮಾಡುತ್ತಾರೆ. ಅಂದಮೇಲೆ ಖರಗ್‌ಪುರಕ್ಕೆ ಹೋದ ಮೇಲೆ, ತನಗೆ ಎರಡು ಬಾರಿ ಮೂರ್ಛೆ ಬಂದಿತ್ತು ಎನ್ನುವುದನ್ನು ಮರೆಯಲು ಪಿಲ್ಲನ್ನನಿಗೆ ಸಾಧ್ಯವಾಗಿರಬೇಕು.

ಈಗಿನ ವೈದ್ಯವಿಜ್ಞಾನದ ಪ್ರಕಾರ, ಇವೆಲ್ಲಾ ಒಂದು ರೀತಿಯಾಗಿ ಊಹಾಪೋಹ, ದಿಟ. ಆದರೆ ಸಕಾರಣವಾದ ಊಹೆ, ಸಾಧ್ಯತೆ ಇರಬಹುದಾದ ಊಹೆ. ಹಾಗೂ Cryptogenic ಅಥವಾ Idiopathic, ಅಂದರೆ 'ತಿಳಿಯದೆ ಇದ್ದ ಕಾರಣಗಳಿಂದ ಉತ್ಪನ್ನವಾದ' ಎಂದು ಈಗಲೂ ಹೆಸರಿರುವುದೇ, ಈ ತೆರನಾದ ಊಹೆಗೆ ಅವಕಾಶವನ್ನು ಕೊಡುತ್ತದೆ. ಕಣ್ಣಾರೆ ಕಂಡ ನಿದರ್ಶನ ಗಳಿಂದ ಈ ರೀತಿ ಊಹಿಸುವುದು ನ್ಯಾಯಸಮ್ಮತವಾದುದೇ.

## ಒಟ್ಟಿನಲ್ಲಿ

ಮಾನಸಿಕ ಅವ್ಯವಸ್ಥೆ, ಅಸಮಾಧಾನ, ಇವುಗಳಿಂದ ಅಪಸ್ಮಾರ ಬಡಿಯು ತ್ತದೆ. ಹಾಗೆ ಕಾಣಿಸಿಕೊಂಡ ಅಪಸ್ಮಾರ ಒಂದೆರಡು ಸಾರಿ ಬಂದು, ತಿರುಗಿ ಬಾರದೆ ಇರಬಹುದು. ಹೀಗಾಗುವುದನ್ನು ವೈಜ್ಞಾನಿಕವಾಗಿ ಎಲ್ಲರೂ ಒಪ್ಪಿಲ್ಲ. ತೀವ್ರವಾದ ಭಯವು ಮನಸ್ಸಿನಲ್ಲಿ ಕಾಣಿಸಿಕೊಂಡಾಗ ಅಪಸ್ಮಾರ ಬಂದರೂ

ಬರಹುದು ಎಂದು ವೈಜ್ಞಾನಿಕರು ಹೇಳುತ್ತಾರೆ. ಆದರೂ ಹೀಗಾಗಬಹುದು ಎಂದು ಅನುಭವದಿಂದ ಧೈರ್ಯವಾಗಿ ಹೇಳಬಹುದು.

೧೬–೧೮ರ ಪ್ರಾಯದಲ್ಲಿ ಮೊದಲಬಾರಿಗೆ ಆರಂಭವಾಗುವ ಅಪಸ್ಮಾರ ಮಾನಸಿಕ ಕಾರಣಗಳಿಂದಾಗಿ ಉಂಟಾಗಬಹುದು ಎಂದು ತಿಳಿದಂತಾಯಿತು ಹೀಗಾಗುವ ಯೌವನಸ್ಥರು ತುಂಬಾ ಸೂಕ್ಷ್ಮಪ್ರಕೃತಿಯುವರು, Sensitive. ಸಣ್ಣಮಾತಿಗೂ ದೊಡ್ಡದಾಗಿ ಕೊರಗುವವರು. ಬುದ್ಧಿಶಕ್ತಿಯೂ ಹೆಚ್ಚಾಗಿರುತ್ತದೆ. ತಮ್ಮ ಸುತ್ತಮುತ್ತಿನ ಆವರಣಕ್ಕೆ ಸರಿಹೋಗಲು ಇವರುಗಳಿಗೆ ತುಂಬಾ ಕಷ್ಟ. ಇಂತಹವರಿಗೆ ಅಪಸ್ಮಾರ ಪೂರ್ಣ ಗುಣವಾಗುವ ಸಂಭವ ಹೆಚ್ಚು, ಅವರ ಸುತ್ತಲಿನ ವಾತಾವರಣ ಸರಿಹೋದರೆ—ಎಂದು ಧೈರ್ಯವಾಗಿ ಹೇಳಬಹುದು.



## ೩. 'ತಲೆ ತಿರುಗಿದ ಹಾಗಾಗುತ್ತೆ'

ಅಪ್ಪ ಹಾಕಿದ ಆಲದ ಮರದ ಕೆಳಗೆ
ಅಪ್ಪನ ಮಕ್ಕಳಿಗೆ ತಂಪು !
ಆದರೆ—
ಮಕ್ಕಳು ಬೆಳೆದು ಸ್ವತಂತ್ರರಾಗಲು ಕಷ್ಟ !

"ನಾಳೆ ಮಧ್ಯಾಹ್ನ ನಮ್ಮನೆಗೆ ಊಟಕ್ಕೆ ಬನ್ರೋ ! ಊಟಮಾಡಿ ಸ್ವಲ್ಪ ಹೊತ್ತು ಹಳೇಕಾಲದ ಹಾಗೆ ಹರಟೆ ಹೊಡಯೋಣ್ರೋ ! ಅಂದಹಾಗೆ ನಿಮ್ಮಿಬ್ಬರನ್ನೂ ನೋಡಿ ಇಪ್ಪತ್ತು ವರ್ಷಗಳಾಯಿತು ಅಂತ ಕಾಣುತ್ತೆ ಅಲ್ವೇ ! ದೊಡ್ಡ ಕೆಲಸ ಹುಡುಕಿಕೊಂಡು ದಿಲ್ಲೀಗೆ ಆಗ ಹೋಗಿ ದಿವನಾಗಿ ಬಾಳ್ತಾ ಇರೋರು ನೀವು ! ನಮ್ಮ ಕೊಂಪೆ ಕಡೆ ಯಾಕೆ ಬರ್‍ತೀರಿ ? ಹಾಗೆ ದಾರಿ ತಪ್ಪಿ ಬಂದಾಗಲಾದರೂ ಹಳೆಯ ದಿನದ ನೆನಪುಗಳನ್ನು ಮೆಲುಕುಹಾಕೋಣ್ರೋ !" ಎಂದೆ.

"ಅಂದಹಾಗೆ 'ಗಿಳಿಯಂದಿರಾಗಿ ಇವರಿಬ್ಬರೂ ನಮ್ಮ ಮದುವೆಗೆ ಬಂದಿದ್ದೋರು ಕಣೆ ! ಜ್ಞಾಪಕ ಇದೆಯೇ ?' ಎಂದು ನಿಮ್ಮ ಪರಿಚಯವನ್ನು ಮನೆಯೊಡತಿಗೆ ಮಾಡಿಕೊಟ್ಟರೆ, ನಿಮ್ಮ ಗುರುತನ್ನು ಆಕೆ ಹಿಡಿಯೋದು ಕಷ್ಟವಾಗುತ್ತೇನೋ ! ಅಡ್ಡಡ್ಡಲಾಗಿ ಇಬ್ಬರೂ ಹಾಗೆ ಬೆಳೆದಿದ್ದೀರಿ !" ಎಂದೂ ಹೇಳಿದೆ.

"ನಿನ್ನ ಹಾಗೇ ನಾವೂ ಬೆಳೆದಿದ್ದೇವೆ. ಗುರ್ತುಹಿಡಿಯುಕ್ಕೆ ಅತ್ತಿಗಮ್ಮ ನಿಗೆ ಕಷ್ಟ ಆಗಲಾರದು. ಆದರೂ ನೋಡೋಣ ! ನೆನಪು ಎಷ್ಟರಮಟ್ಟಿಗೆ ಉಳಿದಿರುತ್ತ್ರೋ ! ನಮಗನಕ ಹಸೆ ಮೇಲೆ ಕೂತು ನಿನ್ನ ಕಡೆಗೆ ಹೆದರಿ ಬೆದರಿ

ನೋಡಿದ ಹರಿಣಾಕ್ಷಿಯ ಜ್ಞಾಪಕ ಚೆನ್ನಾಗಿದೆಯಪ್ಪ" ಎಂದರು, ಇಪ್ಪತ್ತು ವರ್ಷಗಳಿಂದ ನನ್ನ ಜತೆಯಲ್ಲಿ ಕಾಲೇಜಿನಲ್ಲಿ ಓದುತ್ತಿದ್ದ ಗಳಸ್ಯ ಕಂಠಸ್ಯ ಸ್ನೇಹಿತರು, ಅಕಸ್ಮಾತ್ತಾಗಿ ಕ್ಲಬ್ಬಿನಲ್ಲಿ ಸಂಜೆ ಭೇಟಿಯಾದಾಗ.

"ಮಧ್ಯಾಹ್ನ ಒಂದು ಗಂಟೆ ಹೊತ್ತಿಗೆ ಬಂದುಬಿಡಿ. ಆ ಹೊತ್ತಿಗೆ ನಾನೂ ದವಾಖಾನೆಯಿಂದ ಹಿಂತಿರುಗಿ ಬಂದಿರುತ್ತೇನೆ" ಎಂದೆ.

"ಡಾಕ್ಟರ ಒಂದು ಗಂಟೆಯೇನೋ ? ಅಂದರೆ ವರಾಂಡದ ಹತ್ತಿರ ಬಂದು 'ನಾವು ಇಂಥೋರು ಊಟಕ್ಕೆ ಬಂದಿದ್ದೀವಿ' ಎಂತ ನಮ್ಮ ಪರಿಚಯ ವನ್ನು ನಾವೇ ಮಾಡಿಕೋಬೇಕೇನೋ ?" ಎಂದ ಸಂಬ್ಬು.

"ಹಾಗೆ ಮಾಡುಲ್ಲ ಕಣೋ ! ಬೇಗಲೇ ಮನೆಗೆ ಹೋಗಿರುತ್ತೇನೆ ಅಂಥಾ ಕೆಲಸವೇನೂ ನಾಳೆ ಇಲ್ಲ" ಎಂದು ಭರವಸೆ ಕೊಟ್ಟೆ.

ಮಾರನೇ ದಿನ ಮಧ್ಯಾಹ್ನ ೧೨-೩೦ರ ಹೊತ್ತಿಗೆ ದವಾಖಾನೆಯ ಕೆಲಸ ವೆಲ್ಲಾ ಮುಗಿದಿತ್ತು. ಬಿಕ್ಕ ಕೆಲಸವನ್ನು ಮುಗಿಸಿ ಬೇಗ ಹೊರಡಲು ಅಣಿ ಮಾಡಿಕೊಂಡು, ಹೊರಬಾಗಿಲ ಬಳಿಗೆ ಹೋದಾಗ ೧೨-೪೫ ಆಗಿತ್ತು.

ಅಷ್ಟು ಹೊತ್ತಿಗೆ ಆಟೋರಿಕ್ಷಾವೊಂದು ಬಂದು ಬಾಗಿಲೆದುರಿಗೆ ನಿಂತಿತು. ಮಗುವನ್ನು ಎತ್ತಿಕೊಂಡು ೨೦-೨೨ರ ಪ್ರಾಯದ ಹೆಣ್ಣುಮಗಳೊಬ್ಬಳು. ದಡಬಡ ಇಳಿದು ಬಂದು, "ಡಾಕ್ಟರೇ ! ಸಿಕ್ಕಿದಿರಲ್ಲಾ ? ಎಲ್ಲಿ ಹೊರಟು ಹೋಗಿರ್ತೀರೋ ಎಂದು ಹೆದರಿಕೊಂಡೇ ಬಂದೆ !" ಎಂದು ಬೆವರನ್ನು ಹಣೆಯ ಮೇಲಿಂದ ಒರಸಿಕೊಂಡಳು.

"ಹನ್ನೆರಡು ಗಂಟೆಗೆ ದವಾಖಾನೆ ಬಂದಾಗುತ್ತೆ ಅಂತ ಗೊತ್ತಿಲ್ವೇನಮ್ಮಾ ? ಒಂದು ಗಂಟೆಗೆ ಬಂದರೆ ಇಲ್ಲಿ ಯಾರು ಸಿಕ್ತಾರಮ್ಮ ! ದೆವ್ವದ ಪಿಳ್ಳೆ ಕೂಡ ಇರುಲ್ವಲ್ಲಮ್ಮಾ !" ಎಂದೆ. ಬೇಗ ಹೋಗುವ ಆತುರ ನನಗೆ.

"ಹನ್ನೊಂದಕ್ಕೇ ಮನೆ ಬಿಟ್ಟೆ ಡಾಕ್ಟರೇ ! ಅರ್ಧದಾರೀಲೀ ಬಸ್ಸು ಕೆಟ್ಟುಹೋಯಿತು. ಇಳಿದು ಆಟೋರಿಕ್ಷಾ ಹುಡುಕಿ ಬರುವ ಹೊತ್ತಿಗೆ ಹೊತ್ತಾಗಿ ಹೋಯಿತು" ಎಂದಳು ಆ ಹೆಣ್ಮಗಳು.

"ಅಷ್ಟೆಲ್ಲಾ ಕಷ್ಟಪಟ್ಟುಕೊಂಡು, ಮಟಮಟ ಬಿಸಿಲಿನಲ್ಲಿ ಮಗೂನ ಎತ್ತಿಕೊಂಡು ಇಲ್ಲಿಗೆ ಬರ್ತೀರಿ. ಹಾಕಿದ ಬಾಗಿಲನ್ನು ನೋಡಿಕೊಂಡು ಬೈಯುತ್ತಾ ಹೋಗ್ತೀರಿ" ಎಂದು ಸಮಾಧಾನದ ಮಾತನ್ನು ಹೇಳುತ್ತಾ,

ದವಾಖಾನೆಯ ಒಳಗೆ ಹೋದೆ. ಮಗುವನ್ನೆತ್ತಿಕೊಂಡು ತೊಡೆಯ ಮೇಲೆ ಕೂರಿಸಿಕೊಂಡು, ಗಂಟಲ ಕೆಳಗೆ ಬೆರಳಾಡಿಸಿ, ಡಿಫ್ತಿರಿಯಾ ಸೂಚನೆಗಳೇನಾದರೂ ಇವೆಯೇ ಅಂತ ನೋಡಿ; ಹೊಟ್ಟೆ ಮೇಲೆ ಕೈ ಆಡಿಸಿ, ಗಡ್ಡೆ ಏನೂ ಇಲ್ಲ, ಹಗುರಾಗಿದೆ ಅನ್ನೋದನ್ನು ಖಚಿತಮಾಡಿಕೊಳ್ಳುತ್ತಾ "ಏನಾಗಿದೇಮ್ಮಾ ಮಗುವಿಗೆ? ಆಡಿಕೊಂಡು ಚೆನ್ನಾಗಿಯೇ ಇದೆಯಲ್ಲ! ಗಾಬರಿಪಟ್ಟುಕೊಂಡು ಯಾಕೆ ಕರ್‍ಕೊಂಡುಬಂದಿರಿ ?" ಎಂದು ಕೇಳಿದೆ.

"ಹತ್ತು ಗಂಟೆಗೆ ರಚ್ಚೆ ಹಿಡಿದು ಅಳುಕ್ಕೆ ಶುರುಮಾಡಿತು, ಡಾಕ್ಟರೇ ! ಏನೇನು ಮಾಡಿದರೂ ಸುಮ್ಮನಾಗಲಿಲ್ಲ. ಪಕ್ಕದ ಮನೆಗೆ ಹನ್ನೊಂದು ಗಂಟೆಗೆ ಹೋಗಿ ಕಾವಕ್ಕನಿಗೆ ತೋರಿಸಿದೆ. 'ಮನೆ ಔಷಧೀಲಿ ಸರಿಯಾಗೋ ಹಾಗೆ ಕಾಣಲ್ಲ ಪುಟ್ಟೀ ! ಡಾಕ್ಟರ ಹತ್ತಿರ ಕರಕೊಂಡು ಹೋಗಮ್ಮಾ ! ಮೊನ್ನೆ ತಾನೆ ಸಾತಿಮಗೂಗೆ ಹೊಟ್ಟೇಲಿ ಗಡ್ಡೆ ಇದೆ ಅಂತ ಆಪರೇಷನ್ ಮಾಡಿದರು. ಈಗಿನ ಕಾಲದಲ್ಲಿ ಎಂಥೆಂಥಾ ಕಾಯಿಲೆಗಳು ಬರುತ್ತೋವಮ್ಮಾ !' ಅಂದರು. ನನಗೆ ಗಾಬರಿಯಾಯ್ತು. ಕಾವಕ್ಕನೇ ನಮ್ಮ ಯಜಮಾನರ ಆಫೀಸಿಗೆ ಫೋನ್‌ಮಾಡಿ, ಸಮಾಚಾರ ತಿಳಿಸಿ, ನನ್ನನ್ನು ಇಲ್ಲಿಗೆ ಕಳಿಸಿದಳು" ಎಂದು ಹೇಳಿದಳು ಆಕೆ.

"ನಗ್ತಾ ಇದೆಯಲ್ರೀ ಈಗ! ತಿಳಿಯದ ಮಗುವಿನ ಮೇಲೆ ಸುಳ್ಳು ಸುಳ್ಳು ಚಾಡಿ ಹೇಳ್ತೀರಲ್ರಿ !" ಎಂದೆ.

"ಬಸ್ಸಿನಲ್ಲಿ ಕೂತಕೊಳ್ಳೋತನಕ ಅಳ್ತಾ ಇತ್ತು ಡಾಕ್ಟರೇ ! ಆಮೇಲೆ ಹಾಗೇ ಸ್ವಲ್ಪ ನಿದ್ದೆಹೋಯಿತು. ಭೇದಿ ಆಗಿತ್ತು ಬೆಳಗ್ಗೆ, ಮೂತ್ರ ಹೋಗಿತ್ತು. ಹಾಲು ಕುಡಿದಿತ್ತು. ಆದರೂ ರಚ್ಚೆ ಮಾಡೋದು ಯಾಕೆ ಅಂತ ತಿಳೀಲಿಲ್ಲ: ಅತ್ತು ಅತ್ತು ಬೆವತುಹೋಗಿತ್ತು. ಕಾವಕ್ಕ ಹೇಳಿದ ಮೇಲೆ ಹೆದರಿಕೆ ಹೆಚ್ಚಾಯಿತು. ಅದಕ್ಕೇ ಬಂದೆ ಡಾಕ್ಟರೇ! ಗಡ್ಡೆ ಏನೂ ಇಲ್ಲವೇ, ಡಾಕ್ಟರೇ ? ಲಿವರ್ ಅಲ್ಲ ತಾನೆ, ಡಾಕ್ಟರೇ ?" ಎಂದು ಆಕೆ ಕಾತರದಿಂದ ಕೇಳಿದಳು.

"ಮಲ್ಲಿಗೆಹೂವು ಇದ್ದ ಹಾಗಿದೆಯಲ್ಲಮ್ಮಾ, ಹೊಟ್ಟೆ! ಗಡ್ಡೆ ಯಾಕಾದರೂ ಬಾದೀತು ? ಎಲ್ಲೋ ಗಾಳಿ ಸೇರಿಕೊಂಡುಬಿಟ್ಟಿತ್ತು ಅಂತ ಕಾಣುತ್ತೆ, ಕರುಳಲ್ಲಿ. ಅದನ್ನು ಮುಂದಕ್ಕೆ ದೂಡಲು ಕರುಳು ಪ್ರಯತ್ನಿಸಿದಾಗ ನೋವು

ಕಾಣಿಸಿರಬಹುದು. ಅದಕ್ಕೇ ಅತ್ತಿರಬೇಕು. ಬಸ್ಸಿನ ಜಂಝಾಟಕ್ಕೆ ವಾಯು ಸಡಿಲಿರಬೇಕು. ಈಗೆಲ್ಲಾ ಸರಿಹೋಗಿದೆಯಮ್ಮಾ!" ಎಂದೆ.

ಆ ಹೊತ್ತಿಗೆ ಮೋಟಾರೊಂದು ಬಂದು ನಿಂತಿತು. ಯುವಕನೊಬ್ಬ ಅವಸರದಲ್ಲಿ ಬಂದು "ಏನಾಯ್ತೋ ಮಂಗಳೂಗೆ? ಸಾಹೇಬರನ್ನ ಕೇಳಿಕೊಂಡು, ಅವರ ಮೋಟಾರಿನಲ್ಲೇ ಜಟ್ಟಂತ ಬಂದೆ" ಅಂತ ಗಾಬರಿಯಾಗಿ ಕೇಳಿದ.

"ನಿಮ್ಮ ಯಜಮಾನ್ರು ಅಂತ ಕಾಣುತ್ತೆ!" ಎಂದೆ. ಹ್ಞೂ ಅಂತ ಅನ್ನುವ ರೀತಿಯಲ್ಲಿ ಆಕೆ ಸಮಾಧಾನದ ದೃಷ್ಟಿಯನ್ನು ಅವನ ಕಡೆಗೆ ಹಾಯಿಸಿದಳು.

"ದೇವರು ಎಂತಹ ಜಾಣ ಅಂತೀರಿ! ಗಾಬರಿಯಾಗೋ ಹೆಂಡತೀಗೆ ಸರಿಯಾಗಿ ಗಾಬರಿಯಾಗೋ ಗಂಡನನ್ನೇ ತಂದು ಗಂಟುಹಾಕಿದ್ದಾನಲ್ಲಾ!" ಎಂದು ಉದ್ಗಾರ ತೆಗೆದೆ.

"ಅಳದೇ ಇರೋ ಮಗುವನ್ನು ಎಲ್ಲಾದರೂ ನೋಡಿದ್ದೀರಾ? ಅಷ್ಟಕ್ಕೇ ಬೆದರಿ, ಪಕ್ಕದ ಮನೆ ಕಾವಕ್ಕ ಹೆದರಿಸಿದಳು ಅಂತ ಭಯಬಿದ್ದು ಬರೋ ಹೆಂಡತೀನ ಕಟ್ಟಿಕೊಂಡು ಹೇಗಪ್ಪಾ ಸಂಸಾರ ಮಾಡ್ತೀ ನೀನು! ಲಕ್ಷಣವಾಗಿ ಆಡ್ತಾ ಇದೆ, ನೋಡು!" ಎಂದು ಮೊಸಳೆಯ ಕನಿಕರವನ್ನು ಅವನ ಬಗೆಗೆ ತೋರಿಸಿದಾಗ, ಅವನು ನಕ್ಕ; ಆಕೇನೂ ನಕ್ಕಳು.

"ಇಂತಹ ಹೆಂಡತಿಯನ್ನು ಮದುವೆಯಾದದ್ದಕ್ಕೇ ಏನೋ, ಈಗೀಗ ತಲೆ ಸುತ್ತುತ್ತೆ, ಡಾಕ್ಟರೇ!" ಎಂದ. "ಆರು ಎಂಟು ತಿಂಗಳಿಂದ ಒಮ್ಮೊಮ್ಮೆ ತಲೆ ತಿರುಗುತ್ತೆ. ಏನೇನೋ ಮಾಡಿ ನೋಡಿದೆ, ಗುಣವಾಗಲಿಲ್ಲ" ಎಂದ.

ಇದೇನೂ ಹೊಸ ಅನುಭವ ಅಲ್ಲ ಡಾಕ್ಟರುಗಳಿಗೆ. ತುರ್ತಾಗಿ ಮನೇಗೆ ಹೋಗಬೇಕು ಅಂದಾಗಲೆಲ್ಲಾ ಈ ತರಹ ಜರೂರಿಲ್ಲದ ಕೆಲಸಗಳೇ ಕೊಂಡಿ ಹಾಕಿಕೊಂಡು ಬರುತ್ತವೆ. ಅದಕ್ಕೇ ನಾನು ಮುಂಜಾಗ್ರತೆ ತೆಗೆದುಕೊಂಡೆ.

"ನಿಮ್ಮ ಕಾಯಿಲೆಯ ವಿಚಾರದಲ್ಲಿ ಸಲಹೆ ಪಡೆಯಬೇಕಾದರೆ, ನಾಳೆ ಬೆಳಗ್ಗೆ ಒಂಭತ್ತು ಗಂಟೆಗೆ ಬರೀ ಹೊಟ್ಟೆಯಲ್ಲಿ ಬನ್ನಿ. ಈಗ ಬೇಗ ಆಫೀಸಿಗೆ ಹೋಗಿ. ಸಾಹೇಬರು ಕಾತರಪಡ್ತಾ ಇರ್ತಾರೆ, ಅವರ ಮೋಟಾರಿಗೆ ಎಲ್ಲಿ ಅಪಘಾತವಾಗಿರುತ್ತೋ ಅಂತ. ಹೊರಡಪ್ಪಾ!" ಎಂದು ಮಂಗಳವನ್ನು ಹಾಡಿ, ಅವರನ್ನು ಕಳಿಸಿ, ನಾನೂ ತಕ್ಷಣವೇ ಹೊರಟೆ.

ನಾಳೆ ಬೆಳಗ್ಗೆ ಅವನು ಪರೀಕ್ಷೆಗೆ ಬರುವುದಿಲ್ಲ. ಕುದುರೆ ನೋಡಿ ಕಾಲುನೋವಿನ ಜ್ಞಾಪಕ ಬಂದಹಾಗೆ ಕೇಳಿದ್ದನೆಂದೂ ನನಗೆ ಗೊತ್ತಿತ್ತು.

* * *

ಆದರೆ ಮಾರನೆಯ ಬೆಳಗ್ಗೆ ದವಾಖಾನೆಗೆ ಹೋದಾಗ, ಆ ಯುವಕನು ಹೆಂಡತಿ ಮತ್ತು ಎರಡು ಮಕ್ಕಳೊಂದಿಗೆ ಹಾಜರಾಗಿದ್ದ.

"ನಿನ್ನೆ ನೀವು ಹೇಳಿದ್ದು ದಿಟ, ಡಾಕ್ಟರೇ! ಇಂತಹ ಹೆಂಡತೀನ ಕಟ್ಟಿಕೊಂಡು ಬಾಳೋದು ಸ್ವಲ್ಪ ಕಠಿಣವೇ, ಸಾರ್! ಬೆಳಗಿನಿಂದ ಸತಾಯಿಸಿ ಸತಾಯಿಸಿ ಇಲ್ಲಿಗೆ ಕರೆದುಕೊಂಡು ಬಂದಳು. ತಪ್ಪಿಸಿಕೊಳ್ಳಲು ಆಗಲೇ ಇಲ್ಲ. ಎಲ್ಲೋ ಒಂದೊಂದು ಸರ್ತಿ ತಲೆ ತಿರುಗುತ್ತೆ. ನನಗೇನೂ ಹೆಚ್ಚು ತೊಂದರೆ ಮಾಡುಲ್ಲ" ಎಂದು ಅವನು ಹೇಳಿದ.

"ತಮ್ಮನ್ನು ತಾವು ನೋಡಿಕೊಳ್ಳುವಷ್ಟು ಬುದ್ಧಿ ಗಂಡಸರಿಗಿದ್ದರೆ, ಹೆಂಗಸರು ಯಾಕೆ ಕಾಳಜಿ ಮಾಡಬೇಕು, ಡಾಕ್ಟರೇ! ಮೂರು ವಾರದ ಹಿಂದೆ ಆಫೀಸಿಗೆ ಹೋಗುಕ್ಕೆ ಅಂತ ತಿಂಡಿ ತಿಂದು ಕಾಫಿ ಕುಡಿದು ಹೊರಟಿದ್ದರು. 'ಯಾಕೋ ತಲೆ ತಿರುಗುತ್ತೆ' ಅಂತ ಹೇಳಿ ಕುಸಿದು ಕೂತುಕೊಂಡುಬಿಟ್ಟರು. ಮೈಯೆಲ್ಲಾ ಬೆವರಿಹೋಯ್ತು, ಬೆಳ್ಳಗಾಗಿಬಿಡ್ತು ಮುಖ. ಐದು ನಿಮಿಷ ಆದ ಮೇಲೆ ಚೇತರಿಸಿಕೊಂಡರು. 'ಎಲ್ಲೋ ಸ್ವಲ್ಪ ಪಿತ್ತವಾಗಿರಬೇಕು ಕಣೆ' ಅಂತ ಉಢಾಯಿಸಿ ಮಾತಾಡ್ತಾರೆ" ಎಂದು ಆಕೆ ಕಳಕಳಿಯಿಂದ ಹೇಳಿದಳು.

"ಇದೇನ್ರಿ? ಮೂರು ವಾರದ ಹಿಂದೆ ತಲೆ ತಿರುಗಿ ಕೂತುಕೊಂಡರು ಎಂದ್ರಿ. ನಿನ್ನೆ ದಿನ ೬-೮ ತಿಂಗಳಿಂದ ಅಂತ ಹೇಳಲಿಲ್ಲವೆ?" ಎಂದೆ.

"ಆರೆಂಟು ತಿಂಗಳಿಂದ ಆಗಾಗ್ಗೆ ತಲೆ ತಿರುಗುತ್ತಿತ್ತು, ಡಾಕ್ಟರೆ. ಆದರೆ ಅವತ್ತು ಹೆಚ್ಚಾಗಿ ತಿರುಗಿ, ಕಣ್ಣು ಕತ್ತಲೆ ಕಟ್ಟಿಕೊಂಡು ಬಂತು ಅಷ್ಟೇ!" ಅಂತ ಅವನು ಹೇಳಿದ.

'ಓಹೋ! ಈಕೆ ಕಳಕಳಿಪಡೋದನ್ನು ನೋಡಿದರೆ, ಇದು ಬರೀ ಪಿತ್ತ ವಿಕಾರದ್ದಲ್ಲ! ಇನ್ನೇನೋ ಗುರುತರವಾದ ರೋಗದ ಸೂಚನೆಯಾಗಿದ್ದರೂ ಇರಬಹುದು' ಎಂದೆನ್ನಿಸಿತು.

ಪರೀಕ್ಷೆಗೆಂದು ಒಳಕ್ಕೆ ಕರೆದುಕೊಂಡು ಹೋದೆ.

ಎದುರಿನಲ್ಲಿ ಕೂರಿಸಿಕೊಂಡು, ವಿವರಗಳನ್ನು ಬರೆದುಕೊಳ್ಳಲು ದಫ್ತರವನ್ನು ತೆಗೆದು, "ಹೆಸರೇನಪ್ಪಾ ? ವಯಸ್ಸೆಷ್ಟು ?" ಎಂದೆ.

"ತಿಪ್ಪಾಜಿ ಎಂದು ಹೆಸರು. ೩೨ ವರ್ಷ ವಯಸ್ಸು" ಎಂದ.

"ಮಾವನವರಿಗೆ ಆರು ಮಕ್ಕಳಾಗಿ ಎಲ್ಲವೂ ಚಿಕ್ಕ ವಯಸ್ಸಿನಲ್ಲೇ ತೀರಿಕೊಂಡಿದ್ದುವಂತೆ. ಈ ಹೆಸರನ್ನಿಟ್ಟು, ಈ ಮಗುವಾದರೂ ತಿಪ್ಪೇ ಹಾಗೆ ಬೆಳೆಯಲಿ ಎಂದು ಹರಕೆ ಹೊತ್ತರಂತೆ" ಎಂದು ಅವನ ಹೆಂಡತಿ, ತಾನಾಗಿಯೇ ವಿವರಣೆ ಕೊಟ್ಟಳು.

"ತಮ್ಮಂದಿರೆಷ್ಟು ? ತಂಗಿಯರೆಷ್ಟು ?" ಎಂದೆ.

"ನಾನೊಬ್ಬನೇ ಮಗ. ಸರ್" ಎಂದ.

"ಏನು ಕೆಲಸ ಮಾಡಿಕೊಂಡಿದ್ದೀಯಪ್ಪಾ ?" ಎಂದೆ.

"ಇಂಜನಿಯರ್ ಕೆಲಸ, ಸಾರ್. ನಮ್ಮ ತಂದೆ ಓವರ್ಸಿಯರ್ರಾಗಿದ್ದರು. ಅದೇ ಇಲಾಖೇಲಿ ಮಗ ಇಂಜನಿಯರ್ ಆಗಿ ಅಧಿಕಾರ ಮಾಡಬೇಕು ಅಂತ ಅವರ ಆಸೆ. ಅದಕ್ಕೇ ಸರಕಾರಿ ಕೆಲಸಕ್ಕೆ ಸೇರಿಕೊಂಡೆ" ಎಂದ.

"ಒಳ್ಳೆಯ ಕೆಲಸ ಮಾಡಿದೇಪ್ಪಾ! ಹುಟ್ಟಿ ಕಲಿತ ಊರಿಗೆ ಸೇವೆ ಮಾಡೋದು ಒಳ್ಳೆಯದೇ !" ಎಂದು ಹೇಳಿ–

"ನಿನ್ನ ಬೇನೆ ಮೊದಲ ಸರ್ತಿ ಬಂತಲ್ಲಪ್ಪಾ ! ಅದು ಹೇಗೆ ಶುರುವಾಯ್ತು ? ಇನ್ನೇನಾದರೂ ಕಾರಣ ಇತ್ತೇ ? ಎಲ್ಲಾ ವಿವರಗಳನ್ನೂ ಹೇಳು" ಎಂದೆ.

"ಖಚಿತವಾಗಿ ಹೀಗೆ ಶುರುವಾಯ್ತು ಎಂದು ಹೇಳುಕ್ಕೆ ಬರಲ್ಲ, ಸಾರ್! ಇಂಥಾ ಹೊತ್ತಿನಲ್ಲಿ ಅಂತ ಹೇಳುಕ್ಕೆ ಆಗುಲ್ಲ. ಯಾವಾಗ ಅಂದರೆ ಅವಾಗ ಕಾಣಿಸಿಕೊಳ್ಳುತ್ತೆ. ತಲೆಯೆಲ್ಲಾ ತೇಲ್ತಾ ಇರೋ ಹಾಗೆ ಆಗುತ್ತೆ. ಕಣ್ಣು ಮಂಜುಮಂಜಾಗುತ್ತೆ. ಸುಸ್ತಾಗುತ್ತೆ. ಸ್ವಲ್ಪ ಹೊತ್ತಿನಲ್ಲಿ ಸರಿಹೋಗುತ್ತೆ. ಒಂದೇ ಸರ್ತಿ ಸಾರ್, ಕೂತುಕೊಳ್ಳೋ ಹಾಗಾಗಿದ್ದು" ಎಂದ.

"ಹಾಗಾದರೆ ಏನಾದರೂ ವಾಂತಿ ಬರೋಹಾಗೆ ಆಗುತ್ತ್ಯೇ ?" ಎಂದೆ.

"ನಾನು ಹೇಳಿದೆ, ಡಾಕ್ಟರೇ ! ನಿಂಬೆಹಣ್ಣು ಷರಬತ್ತು ಮಾಡಿಕೊಡ್ತೀನಿ, ಪಿತ್ತ ಕಡಿಮೆ ಆಗುತ್ತೆ. ತಲೆಸುತ್ತು ಹೋಗುತ್ತೆ, ಅಂತ. ಆದರೆ ಇವರು ಕೇಳಬೇಕಲ್ಲ ?" ಎಂದಳು ಅವನ ಹೆಂಡತಿ.

"ಇಲ್ಲ ಡಾಕ್ಟರೇ, ವಾಕರಿಕೆ ಆಗುಲ್ಲ. ವಾಂತಿ ಬರೋ ಹಾಗೆ ಆಗುಲ್ಲ. ಹೊಟ್ಟೆ ತೊಳಸುಲ್ಲ. ತಲೆ ಮಾತ್ರ ಒಂದು ತರಹಾ....ಆಗುತ್ತೆ" ಎಂದ, ತಿಪ್ಪಾಜಿ.

"ಕಣ್ಣುಕತ್ತಲೆ ಕಟ್ಟಿಕೊಂಡ ಹಾಗೆ ಆಗುತ್ತೆ ಅಂದೆಯಲ್ಲಪ್ಪಾ ಒಂದು ಸರ್ತಿ. ಮಿಕ್ಕ ಸರ್ತಿ ಏನಾದರೂ ಮಂಜುಮಂಜು ಕಾಣಿಸ್ತೇ ?" ಎಂದೆ.

ಅವನ ಹೆಂಡತಿ ನಡುವೆ ಮಾತನಾಡುತ್ತಾ "ನಾನು ಹೇಳಿದೆ, ಡಾಕ್ಟರೇ ! ಕಣ್ಣು ಪರೀಕ್ಷೆಮಾಡಿಸಿಕೊಳ್ಳಿ ಅಂತ. ಇವರು ಕೇಳಬೇಕಲ್ಲ ?" ಎಂದಳು.

"ಮಂಜುಮಂಜೇನೂ ಹೆಚ್ಚಾಗಿ ಆಗುಲ್ಲ, ಡಾಕ್ಟರೇ ! ಆದರೆ ಸೊಳ್ಳೆ ಪರದೇನ ಮುಖ ಮುಂದೆ ಹಿಡಿದ ಹಾಗಾಗುತ್ತೆ. ಸ್ಪಷ್ಟವಾಗಿ ಕಾಣಿಸುತ್ತೆ ; ಆದರೆ ಯಾವುಯಾವುದೋ ಗೆರೆಗಳು ಅಡ್ಡ ಬಂದ ಹಾಗೆ ಇರುತ್ತೆ. ಎಲ್ಲಾ ಒಂದರೆಕ್ಷಣ. ಆಮೇಲೆ ಎಲ್ಲಾ ಸರಿಯಾಗಿ ಕಾಣಿಸುತ್ತೆ" ಎಂದ ತಿಪ್ಪಾಜಿ.

"ತಲೆ ಸುತ್ತುಕ್ಕೆ ಶುರುವಾದಾಗ, ಕಿವಿಯಲ್ಲಿ ಏನಾದರೂ ಗುಂಯ್ ಅಂತ ಶಬ್ದ ಆದ ಹಾಗೆ ಆಗುತ್ಯೆ ? ಗುಪ್ಪು ಹಾಕಿಕೊಂಡ ಹಾಗೆ ಏನಾದರೂ ಆಗುತ್ಯೆ ?" ಎಂದು ಕೇಳಿದೆ.

"ಇಲ್ಲ, ಡಾಕ್ಟರ್" ಎಂದ ತಿಪ್ಪಾಜಿ.

"ಇವರ ಕಿವಿಯೇನೋ ಚೆನ್ನಾಗಿದೆ, ಡಾಕ್ಟರೇ ! ಆದರೆ ನಾನು ಏನಾದರೂ ಹೇಳಿದರೆ, ಅದು ಮಾತ್ರ ಇವರ ಕಿವಿಗೆ ಕೇಳಿಸುವುದಿಲ್ಲ. ಅಷ್ಟೇ. ಅಲ್ಲವೇಂದ್ರ !" ಎಂದು ಆಕೆ ನಗುತ್ತಾ ಹೇಳಿದಳು.

"ಸಿಗರೇಟ್ ಅಥವಾ ಆ ತರಹಾ ಏನಾದರೂ ಅಭ್ಯಾಸ ಇದ್ದುದನ್ನು ಹೆಚ್ಚಾಗಿ ನಡಸಿದಾಗ ಹೀಗೇನಾದರೂ ಆಗುತ್ತದೆಯೋ ?" ಎಂದೆ.

"ಅಂಥಾ ದುರಭ್ಯಾಸಗಳಿಗೆಲ್ಲಾ ನಾನು ಅವಕಾಶ ಕೊಡೋದಿಲ್ಲ, ಡಾಕ್ಟರೇ ! ಪಾಪ ! ಇವರು ಅಂಥಾದ್ದನ್ನೆಲ್ಲಾ ರುಚಿ ಕೂಡ ನೋಡಿಲ್ಲ !" ಎಂದು ತಿಪ್ಪಾಜಿಯ ಹೆಂಡತಿಯೇ ಭರವಸೆ ಕೊಟ್ಟಳು.

ಸ್ವಲ್ಪ ಹೊತ್ತು ಹೊರಗೆ ಹೋಗಿ ಕೂತುಕೊಂಡಿರಮ್ಮಾ ! ಇವರ ದೇಹ ಪರೀಕ್ಷೆಯನ್ನು ಮಾಡಿ ಮುಗಿಸುತ್ತೇನೆ" ಎಂದು ಆಕೆಯನ್ನು ಕಳಿಸಿಕೊಟ್ಟು, ಪರೀಕ್ಷೆಗೆ ಆರಂಭಿಸಿದೆ.

ಕಿವಿಯಲ್ಲಿ ಗುಗ್ಗೆ ಕಟ್ಟಿಕೊಂಡಿದ್ದು, ಸ್ನಾನ ಮಾಡಿದಾಗ ಒಂದೆರಡು ಹನಿ ನೀರು ಕಿವಿಗೆ ಹೋಗಿ, ಗುಗ್ಗೆಯನ್ನು ಉಬ್ಬಿಸಿ ಹರಡಿ, ಅದು ಕಿವಿಯನ್ನು ಪೂರ್ಣವಾಗಿ ಮುಚ್ಚುವಂತೆ ಮಾಡಬಹುದು. ಹಾಗಾದರೆ, ಕಿವಿಯ ತಮಟೆಯು ಇತ್ತ ಅತ್ತ ಆಡಲಾಗದೆ ಗುಪ್ಪು ಹಾಕಿಕೊಂಡಂತಾಗುವುದು. ಅಂತಹ ಸಂದರ್ಭಗಳಲ್ಲಿ ಕಿವುಡು, ಕಿವಿ ಮೊರೆಯುವುದು, ಈ ಲಕ್ಷಣಗಳ ಜತೆಗೆ ತಲೆ ತಿರುಗುವಿಕೆಯೂ ಉಂಟಾಗಬಹುದು. ಆದಕ್ಕಾಗಿ ಕಿವಿಯನ್ನು ಪರೀಕ್ಷಿಸಿದೆ. ಕಿವಿಯ ಹೊರಮಾರ್ಗವೆಲ್ಲಾ ಶುದ್ಧವಾಗಿತ್ತು. ತಮಟೆಯು ಲಕ್ಷಣವಾಗಿತ್ತು. ನೆಗಡಿ ಇತ್ಯಾದಿಗಳು ಬಂದ ನಂತರ, ಕಿವಿಯ ತಮಟೆಯು ಒಳಕ್ಕೆ ಸೆಳೆದಂತಾಗ ಬಹುದು. ಏಕೆಂದರೆ ಗಂಟಲಿನಿಂದ ಕಿವಿಗೆ ಗಾಳಿಯನ್ನು ಪಸರಿಸುವ ಯೂಸ್ಟೇಷಿಯನ್ ನಾಳವೊಂದಿರುತ್ತದೆ. ಅದು ನೆಗಡಿ ಹಿಡಿದ ಮೇಲೆ ಕೆಲವು ಕಾಲ ಮುಚ್ಚಿದಂತಾಗಬಹುದು. ಹೀಗಾದಾಗಲೂ ಕಿವಿರೋಗದ ಉಳಿದ ಲಕ್ಷಣಗಳೊಂದಿಗೆ ತಲೆ ತಿರುಗುವುದೂ ಕಾಣಿಸಿಕೊಳ್ಳಬಹುದು.

ಕಣ್ಣುಗಳನ್ನು ಪರೀಕ್ಷೆಮಾಡಿದೆ.

ವಸ್ತುವಿನ ಆಕಾರ ವರ್ಣಗಳನ್ನೆಲ್ಲಾ ಒಂದೇ ಕಣ್ಣಿನಿಂದ ಕಂಡು ತಿಳಿಯಬಹುದು. ಆದರೆ ವಸ್ತುವು ಎಲ್ಲಿದೆ ಎಂದು ತಿಳಿಯಬೇಕಾದರೆ, ಎಷ್ಟು ದೂರದಲ್ಲಿದೆ ಎಂದು ಖಚಿತವಾಗಿ ತಿಳಿಯಬೇಕಾದಾಗ, ಎರಡೂ ಕಣ್ಣುಗಳಿಂದ ನೋಡಬೇಕು. ಎರಡೂ ಕಣ್ಣುಗಳಿಂದ ಗ್ರಹಿಸಿದ ಚಿತ್ರಗಳನ್ನು ಮೆದುಳು ಸಮನ್ವಯ ಮಾಡಿಕೊಂಡೇ ಎಷ್ಟು ದೂರದಲ್ಲಿದೆ ಎಂಬುದನ್ನು ತಿಳಿಯುತ್ತದೆ. ಎರಡೂ ಕಣ್ಣುಗಳು ಸಮನಾಗಿ ನೋಡಿದರೆ ಈ ಕೆಲಸ ಸುಲಭ. ಆದರೆ ಆಕಸ್ಮಾತ್ ಒಂದು ಕಣ್ಣು ಸ್ವಲ್ಪ ವ್ಯತ್ಯಾಸವನ್ನು ಹೊಂದಿದ ಚಿತ್ರವನ್ನು ಗ್ರಹಿಸಿದರೆ, ಈ ಚಿತ್ರವನ್ನು ಇನ್ನೊಂದು ಕಣ್ಣಿನ ಚಿತ್ರಕ್ಕೆ ಸಮನ್ವಯಮಾಡಲು, ಮೆದುಳಿಗ ತ್ರಾಸಾಗುತ್ತದೆ. ಆಗಲೂ ತಲೆ ತಿರುಗುವಿಕೆಯು ಉಂಟಾಗಬಹುದು. ಇಂತಹ ದೋಷವನ್ನು Astigmatic ದೋಷವೆಂದು ಕರೆಯುತ್ತಾರೆ.

ಕಣ್ಣುಗಳ ಪರೀಕ್ಷೆ ಮಾಡಿದಾಗ, ತಿಪ್ಪಾಜಿಗೆ ಆಸ್ಟಿಗ್‌ಮ್ಯಾಟಿಕ್ ದೋಷ ಇದ್ದಂತೆ ಕಾಣಬರಲಿಲ್ಲ.

ರಕ್ತದ ಒತ್ತಡವನ್ನು ಪರೀಕ್ಷೆಮಾಡಿದೆ. ೧೨೦ ಸಿಸ್ಟಾಲಿಕ್, ೭೫ ಡಯಾಸ್ಟಾಲಿಕ್ ಇತ್ತು. ಆ ವಯಸ್ಸಿನಲ್ಲಿ ರಕ್ತದ ಒತ್ತಡ ಬರುವುದು

ಅಪರೂಪವಾದರೂ, ಪೂರ್ಣ ಪರೀಕ್ಷೆಮಾಡುವ ಶಾಸ್ತ್ರೀಯ ಪದ್ಧತಿಯನ್ನು ಅನುಸರಿಸಿದ್ದೆ.

ಪಿತ್ತಕೋಶವು ಅವ್ಯಸ್ತವಾಗಿ ಕಾಮಾಲೆ ಮೊದಲಾದ ರೋಗಗಳ ಪೂರ್ವ ಲಕ್ಷಣವಾಗಿ ತಲೆತಿರುಗುವಿಕೆಯೂ ಬರುವುದುಂಟು. ಅಂತಹ ಸೂಚನೆ ಇದ್ದಿಲ್ಲ.

ಮಾದಕ ಪದಾರ್ಥಗಳ ಸೇವನೆಯಿಂದ, ಹಾಗೂ ಜ್ವರ ಹೆಚ್ಚಾಗಿ ಬಂದರೆ, ಜ್ವರಕಾರಕವಾದ ವಿಷದ ಪರಿಣಾಮವು ಮೆದುಳಿನ ಮೇಲೆ ಆಗುವುದರಿಂದ ಈ ರೀತಿಯ ತಲೆತಿರುಗು ಬರುವುದುಂಟು. ತಿಪ್ಪಾಜಿಯ ವಿಷಯದಲ್ಲಿ ಅವುಗಳು ಕಾರಣವಲ್ಲ ಎಂದು ಸ್ವತಃ ಸಿದ್ಧವಾಗಿತ್ತು.

ತಲೆತಿರುಗುವಿಕೆಗೆ ಯಾವ ಕಾರಣವೂ ದೇಹದಲ್ಲಿ ಕಂಡುಬರಲಿಲ್ಲ. ಮಾನಸಿಕ ಕಾರಣಗಳೂ ಮೇಲೆದ್ದು ಕಾಣಿಸುವಂತಹುವಲ್ಲ. ಒಬ್ಬನೇ ಮಗ, ಸಾಕಷ್ಟು ಆರ್ಥಿಕ ಭದ್ರತೆ ಇದೆ. ಚೂಟಿಯಾದ, ಓದಿದ ಹೆಂಡತಿ. ಮುತ್ತಿನ ಮಣಿಯಂತಹ ಎರಡು ಮಕ್ಕಳು. ಆಳಮನಸ್ಸಿನಲ್ಲಿರಬಹುದಾದ ಆಸೆ ನಿರಾಸೆ ಗಳಿಂದ ಹೀಗಾಗಬಹುದಾದರೂ, ಅವುಗಳನ್ನು ಕೆದಕಿ ಕೆದಕಿ ಎತ್ತಿದರೆ ಮಿಕ್ಕ ಭೂತಗಳು ಹಿಡಿದುಕೊಳ್ಳಬಹುದು. ಹಾಗೆಯೇ ಬಿಟ್ಟರೆ, ಕಾಲಾನುಕಾಲದಲ್ಲಿ ಸರಿಹೋಗುತ್ತದೆ ಎಂಬ ಧೈರ್ಯವಿತ್ತು. ಅದಕ್ಕೇ ತಿಪ್ಪಾಜಿಗೆ ಸಬೂಬು ಚಿಕಿತ್ಸೆ ಹೇಳಿದೆ: "ಹೇಳಿಕೊಳ್ಳುವಂತಹ ಕೆಡುಕೇನೂ ಇಲ್ಲ. ಆದರೆ ವ್ಯಾಯಾಮ ಸಾಲದೆ, ದೇಹದಲ್ಲಿ ಸಾಕಷ್ಟು 'ಸಿದ್ಧತೆ' (Tone) ಇಲ್ಲ, ಅದಕ್ಕೋಸ್ಕರ ದಿನಾಗಲೂ ನಿಯಮಿತ ಕಾಲದಲ್ಲಿ ಇಷ್ಟು ಎಂದು ಯಾವು ದಾದರೂ ವ್ಯಾಯಾಮಮಾಡು. ಈ ಔಷಧಿಯನ್ನು ತೆಗೆದುಕೋ, ಸಹಾಯ ಮಾಡುತ್ತದೆ" ಎಂದು ಒಂದು ಚೀಟಿಯನ್ನು ಬರೆದುಕೊಟ್ಟೆ.

"ಇದನ್ನ ನನ್ನ ಹೆಂಡತೀಗೆ ಹೇಳಿಬಿಡಿ, ಡಾಕ್ಟರೇ! ಇಲ್ಲದೆ ಇದ್ದರೆ, ಏನನ್ನೋ ಅವಳಿಂದ ಮುಚ್ಚಿಟ್ಟುಕೊಳ್ಳುತ್ತಿದ್ದೀನಿ ಎಂದು ಸತಾಯಿಸಿಬಿಡ್ತಾಳೆ" ಎಂದ.

"ಆಕೆಯನ್ನು ಒಳಕ್ಕೆ ಬರಹೇಳು" ಅಂತ ದವಾಖಾನೆಯ ಹುಡುಗನಿಗೆ ಹೇಳಿದೆ.

"ನಮಸ್ತೇ ಮಾಡು, ಡಾಕ್ಟರಿಗೆ. ಜಾಣಮರಿ ನೀನು" ಎಂದು ಪುಸಲಾಯಿಸಿ ಹೆದರಿಸುತ್ತಾ, ನಾಲ್ಕು ವರ್ಷದ ಮಗನನ್ನು ಹೆಚ್ಚು ಕಡಿಮೆ

ದಬ್ಬಿಕೊಂಡೇ ಆಕೆಯೂ ಬಂದಳು. ದೇಹಸ್ಥಿತಿಯ ಆರೋಗ್ಯ, ವ್ಯಾಯಾಮದ ಆವಶ್ಯಕತೆಗಳನ್ನು ಹೇಳಿದೆ.

"ನನಗೂ ಹಾಗೆಯೇ ಅನ್ನಿಸಿತ್ತು, ಡಾಕ್ಟರೇ! 'ಬೆಳಗಾಗೆದ್ದು ಹತ್ತೋ ಇಪ್ಪತ್ತೋ ಸೂರ್ಯನಮಸ್ಕಾರ ಹಾಕಿ, ಅಂದ್ರು. ನಮ್ಮ ತಂದೆ ಹಾಗೇ ಮಾಡ್ತಾರೆ. ಈವತ್ತಿಗೂ ಅರವತ್ತಾದರೂ ದೃಢಕಾಯರಾಗಿದ್ದಾರೆ. ಆಫೀಸ್ ಕೆಲಸ ಎಲ್ಲಾ ಮಾಡ್ತಾರೆ' ಎಂದು ಹೇಳಿದೆ" ಎಂದಳು.

"ಇದೇನಮ್ಮ, ಅರವತ್ತು ವಯಸ್ಸು ನಿಮ್ಮ ತಂದೆಗೆ ಅಂತೀರಿ. ಆಫೀಸ್ ಕೆಲಸ ಅಂತೀರಿ. ಯಾವ ಆಫೀಸಿನಲ್ಲಮ್ಮಾ ಅವರಿರೋದು?" ಎಂದೆ.

'ನನಗೆ ಗೊತ್ತಿತ್ತು, ನನಗೆ ತಿಳಿದಿತ್ತು, ಹಾಗೇ ನನಗೂ ಅನ್ನಿಸಿತ್ತು' ಎಂದೆಲ್ಲಾ ಹೇಳ್ತಾ ಇದ್ದಳು. ಮಾತಿನಲ್ಲಿ ಸಿಕ್ಕಿಹಾಕಿಕೊಂಡಾಗ, ಮಾತಿನಲ್ಲೇ ಅವಳನ್ನು ಬೀಳಿಸೋಣ ಅಂತ ಹಾಗೆ ಕೇಳಿದ್ದೆ.

"ಕಲಕತ್ತೇಲಿ ಇದ್ದಾರೆ, ಡಾಕ್ಟರೇ! ೩೫–೪೦ ವರ್ಷಗಳಿಂದ ಅಲ್ಲೇ ಇರೋದು. ಖಾಸಗಿ ಕಂಪೆನೀಲಿ ಮ್ಯಾನೇಜರಾಗಿದ್ದಾರೆ. ಬಹಳ ಕೆಲಸ. ಮನೇಲೊಬ್ಬ ಕ್ಲಾರ್ಕ್, ಟೈಪಿಸ್ಟ್ ಕೂಡ ಯಾವಾಗಲೂ ಇರ್ತಾರೆ. ಬಿಡುವೇ ಇಲ್ಲ ಅಪ್ಪಂಗೆ" ಎಂದು ಜಂಭಕೊಚ್ಚಿಕೊಳ್ಳುವುದಕ್ಕೇ ಶುರುಮಾಡಿದಳು.

ಮಾತಿನಲ್ಲಿ ಕೆಡವೋಣ ಅಂತ ಹೋದ ನಾನು, ರಭಸದಲ್ಲಿ, ನಮಾಜು ಮಾಡುಕ್ಕೆ ಹೋಗಿ ಮಸೀದಿಯನ್ನೇ ತಲೆಯ ಮೇಲೆ ಕೆಡವಿಕೊಂಡವನ ಹಾಗಾಗಿದ್ದೆ.

ದೊಡ್ಡ ಮಗುವಿನ ಕೈ ಕುಲುಕಿ, ಚಿಕ್ಕ ಮಗುವಿನ ಕೆನ್ನೆ ಚಿವುಟಿ, ಬೇಗ ಅವರುಗಳನ್ನೆಲ್ಲಾ ಸಾಗಹಾಕಿದೆ.

* * *

ಆಗಿಂದಾಗ್ಗೆ ವಾರಕ್ಕೊಮ್ಮೆ ಹತ್ತುಕ್ಕೊಮ್ಮೆ ಒಮ್ಮೆ ತಿಪ್ಪಾಜಿ ಬರುತ್ತಿದ್ದ. "ಇವತ್ತು ಸ್ವಲ್ಪ ವಾಸಿ. ಮೊನ್ನೆ ದಿನ ಸ್ವಲ್ಪ ವಿಪರೀತಕ್ಕೆ ಇಟ್ಟುಕೊಂಡಿತ್ತು, ಸಾರ್. ಬೈಸಿಕಲ್ ಹತ್ತಿಕೊಂಡು ಹೋಗ್ತಾ ಇದ್ದೆ. ಬೈಸಿಕಲ್ ಪಾಡಿಗೆ ಬೈಸಿಕಲ್ಲು, ನನ್ನ ಪಾಡಿಗೆ ನಾನು. ಬೇರೆ ಬೇರೆ ತಿರುಗಿದ ಹಾಗಾಯ್ತು. ಕೂಡಲೇ ಇಳಿದು, ಮೆಲ್ಲಗೆ ನಡೆಯುತ್ತಾ ಸುಧಾರಿಸಿಕೊಂಡೆ. ಮನೇಲಿ

ಯಾರಿಗೂ ಹೇಳಲಿಲ್ಲ. ವಾಸಿಯಾಗುವ ತನಕ ಬೈಸಿಕಲ್ ಸವಾರಿ ಬಿಟ್ಟು ಬಿಡೋಣ ಎಂದು ನಿರ್ಧರಿಸಿದ್ದೇನೆ" ಎಂದ ಒಮ್ಮೆ.

"ಹೋದ ತಿಂಗಳಿಗಿಂತ ಈ ತಿಂಗಳು ವಾಸಿ ಅಂತ ಹೇಳಲೇಬೇಕು, ಸಾರ್. ಆದರೂ ಹೋದ ಭಾನುವಾರ ಬೆಳಗ್ಗೆ ಮಾರ್ಕೆಟ್ಟಿಗೆ ಹೋಗಿ ತರಕಾರಿ ತರ್‍ತಿದ್ದಾಗ, ರಸ್ತೇಲಿ ತಲೆಗೇರಿ ಬಂದು, ಕಂಭ ಹಿಡಿದುಕೊಂಡು ನಿಲ್ಲೋ ಹಾಗಾಯ್ತು. ಆ ಸಮಯಕ್ಕೆ ಸರಿಯಾಗಿ ಪಕ್ಕದಲ್ಲಿ ದೀಪದ ಕಂಭ ಇಲ್ಲದೆ ಇದ್ದಿದ್ದರೆ ಬಿದ್ದೇಬಿಡ್ತಾ ಇದ್ದೆ ಅಂತ ಅನ್ನಿಸಿತ್ತು. ಮೂರು ನಾಲ್ಕು ನಿಮಿಷ ಆದ ಮೇಲೇ ಚೇತರಿಸಿಕೊಂಡದ್ದು. ಆಮೇಲೆ ನೋಡಿದರೆ ಕೈಯಿನಲ್ಲಿದ್ದ ಚೀಲ ನೆಲದ ಮೇಲೆ ಬಿದ್ದಿತ್ತು. ಅದನ್ನು ಕೆಳಗಿರಿಸಿದ ನೆನಪಾಗಲಿ, ಬಿದ್ದ ನೆನಪಾಗಲಿ, ನನಗೇ ಇರಲೇ ಇಲ್ಲ" ಎಂದು ಇನ್ನೊಮ್ಮೆ ಹೇಳಿದ.

ಇವೆಲ್ಲಾ ಶುಭಸೂಚನೆಗಳೇನೂ ಅಲ್ಲ. ಅಷ್ಟು ನನಗೆ ಗೊತ್ತಾಗಿತ್ತು. ಆದರೆ ಮೂಲಕಾರಣವನ್ನು ತಿಳಿಯಲಾಗಲಿಲ್ಲವಲ್ಲ !! ತಿಳಿಯಂದೆ ಇದ್ದ ಕಾರಣ ವನ್ನು ನಿವಾರಣೆಯಾದರೂ ಮಾಡುವುದು ಹೇಗೆ ? ಪ್ರಾಯಂದ ವಯಸ್ಸು, ಕಾಲಾನುಕಾಲದಲ್ಲಿ ಗುಣವಾಗುತ್ತೆ, ಎಂಬ ಆಸೆಯನ್ನೇ ಬಿಗಿಯಾಗಿ ಹಿಡಿದು ಕೊಂಡೆ.

೮–೯೦ ತಿಂಗಳಾದುವು, ಇದೇ ರೀತಿ. ಅವನ ಮೇಲಿನ ಜವಾಬ್ದಾರಿ ಹೆಚ್ಚಾಗುತ್ತ ಬಂದಿತ್ತು.

*　　*　　*

ಸೋಮವಾರ ಮಧ್ಯಾಹ್ನ ಮೂರು ಗಂಟೆ ಇರಬಹುದು. ನನಗೆ ಚೆನ್ನಾಗಿ ಜ್ಞಾಪಕವಿದೆ. ಮಹಾಲಯ ಅಮಾವಾಸ್ಯೆ ಪಿತೃತರ್ಪಣ ಕೊಟ್ಟು, ಉದ್ದಿನ ವಡೆ ತಿಂದಿದ್ದ ಮಧ್ಯಾಹ್ನ, ತಿಪ್ಪಾಜಿ ಬಂದು, "ಅಪ್ಪ ಮಾತಾಡೋದೆ ಇಲ್ಲ. ತಕ್ಷಣ ಬನ್ನಿ, ಡಾಕ್ಟರೇ. ಏನಾರೂ ಮಾಡಬೇಕು ಕೂಡಲೇ" ಎಂದು ಅಳುವುದಕ್ಕೆ ಶುರುಮಾಡಿದ. ಅವನಿಗೆ ಸಮಾಧಾನ ಹೇಳುತ್ತಾ, ನನ್ನ ಮದ್ದಿ ಪೆಟ್ಟಿಗೆಯನ್ನು ತೆಗೆದುಕೊಂಡು, ಮೋಟಾರಿನತ್ತ ಹೊರಟೆ. "ಬಾಪ್ಪ, ಬಾ. ಕೂತುಕೋ" ಅಂತ ಅವನನ್ನು ಕರೆದು ಗಾಡಿಯಲ್ಲಿ ಕೂರಿಸಿಕೊಂಡು "ಹೇಗೆ

ಬಂದೆಯಪ್ಪಾ ?" ಎಂದೆ. "ಬೈಸಿಕಲ್ ಹತ್ತುಕ್ಕೆ ಹೆದರಿಕೆಯಾಯ್ತು, ಸಾರ್ ! ಜಟ್ಕಾ ಯಾವುದೂ ಸಿಗಲಿಲ್ಲ. ಓಡಿ ಓಡಿ ಬಂದೆ" ಎಂದು ಹೇಳಿದ.

ದಾರಿಯಲ್ಲಿ ಕೇಳಿದೆ : "ನಿಮ್ಮ ತಂದೆಗೆ ಇನ್ನೇನಾದರೂ ಕಾಯಿಲೆ ಇತ್ತೆ ? ಯಾರು ನೋಡಿಕೊಳ್ಳುತ್ತಿದ್ದಾರೆ ? ಈಗಿನ ಕಾಲದಲ್ಲಿ ಪರಿಣಾಮಕಾರೀ ಔಷಧಿಗಳು ಬಳಕೆಗೆ ಬಂದಿವೆ. ಒಬ್ಬರಿಗೆ ತಿಳಿಯದ ಹಾಗೆ ಇನ್ನೊಬ್ಬ ಡಾಕ್ಟರು ಔಷಧಿ ಕೊಟ್ಟರೆ, ನಾವೇ ಕೈಯಾರ ಅನ್ಯಾಯಮಾಡಿದಂತಾಗುತ್ತದೆ. ನಿನ್ನ ಗಾಬರಿ ನೋಡಿ, ಹೊರಟುಬಂದೆ. ರೀತಿ ನೀತೀನ ಆಗ ಹೇಳಿದ್ದರೆ ನಿನಗೆ ತಿಳಿಯೋ ಹಾಗೆ ಕಾಣಿಸಲಿಲ್ಲ. ಅದಕ್ಕೇ ಆಗ ಮಾತಾಡದೆ ಹೊರಬಿದ್ದೆ. ಈಗಲಾದರೂ ಹೇಳು" ಎಂದೆ.

"ಚೆನ್ನಾಗಿಯೇ ಇದ್ದರು, ಸಾರ್. ಮಧ್ಯಾಹ್ನ ಊಟಮಾಡಿದರು. ನಾಲ್ಕೈದು ವರ್ಷಗಳಿಂದ ರಕ್ತದ ಒತ್ತಡ ಹೆಚ್ಚು. ಉಪ್ಪು ಕಡಿಮೆ ಉಪಯೋಗಿಸಲಿ ಅಂತ ಅವರ ಡಾಕ್ಟರು ಹೇಳುತ್ತಾ ಇದ್ದರು. ಅಪ್ಪಾನೂ ಆ ಡಾಕ್ಟರೂನೂ ಒಟ್ಟೊಟ್ಟಿಗೆ ಕೆಲಸಮಾಡಿದವರು. ಇಬ್ಬರಿಗೂ ಒಂದೇ ಊರಿಗೆ ವರ್ಗವಾಗುತ್ತಿತ್ತಂತೆ. ಹಾಗಾಗಿ ತುಂಬಾ ದೋಸ್ತು. ನೀನು ತಾನು ಅಂತಲೇ ಮಾತನಾಡೋದು. ನಿಮ್ಮನ್ನು ಕರೆದು ಸಲಹೆ ಪಡೆಯೋಣ ಅಂತ ಹೇಳಿದರೆ 'ಬಿಡೋ ಮರಿ ! ಯಾರೇನು ಬಂದು ಕಾಯಕಲ್ಪ ಮಾಡ್ತಾರೆ ? ನಮ್ಮ ನಂಜಣ್ಣ ನೋಡಿಕೊಂಡರೆ ಸಾಕು' ಎಂದು ಅಂದುಬಿಡುತ್ತಿದ್ದರು. ಊಟಮಾಡಿ ಸ್ವಲ್ಪ ಹೊತ್ತು ಮಲಗಿದ್ದರು. 'ಯಾಕೋ, ಮರಿ, ನಿದ್ರೆಬರುಲ್ಲ. ತಲೆ ನೋವಾಗೋ ಹಾಗೆ ಆಗ್ತಿದೆ. ಸ್ವಲ್ಪ ಕಾಫಿ ಮಾಡಿಸಿ ತಂದುಕೊಡು' ಅಂದರು. ನಾನೇ ಹೋಗಿ ಸ್ವಿಚ್ ಹಾಕಿ ನೀರು ಕಾಯಿಸಿ ಕಾಫಿ ಮಾಡಿಕೊಂಡು ಬಂದೆ. ಬರೋ ಅಷ್ಟರಲ್ಲೇ ಹಾಸಿಗೇ ಮೇಲೇ ಬಿದ್ದುಬಿಟ್ಟಿದ್ದರು. ಮಾತೇ ನಿಂತುಹೋಗಿದೆ. 'ಅಣ್ಣಯ್ಯಾ ! ಕಾಫಿ ತಂದಿದೀನಿ' ಅಂತ ಎಷ್ಟೋ ಕೂಗಿದೆ. ಜ್ಞಾನ ತಪ್ಪೋಗಿದೆ ಅಂತ ಖಡಿತವಾದ ಮೇಲೆ, ನಿಮ್ಮ ಹತ್ತಿರಕ್ಕೆ ಓಡಿಬಂದೆ. ಅಪ್ಪನ ಡಾಕ್ಟರೂ ಮುದುಕರು. ಈ ಮಟ ಮಟ ಮಧ್ಯಾಹ್ನದಲ್ಲಿ ಅವರನ್ನು ಕರೆದರೆ, ಅವರು ಬರೋದಾದರೂ ಹೇಗೆ, ಡಾಕ್ಟರೇ ? ಬಂದು ಮಾಡೋದಾದರೂ ಏನು ? ಈಗ ಅವರು ಪ್ರಾಕ್ಟೀಸ್ ಮಾಡ್ತಾ ಇಲ್ಲ" ಎಂದೆಲ್ಲಾ ವಿವರಗಳನ್ನು ಕೊಟ್ಟ.

ತಿಪ್ಪಾಜಿಯ ತಂದೆಗೆ ಲಕ್ವ ಬಡಿದಿತ್ತು. ಬಲಪಾರ್ಶ್ವವೆಲ್ಲಾ ಬಿದ್ದು ಹೋಗಿತ್ತು. ಮೆದುಳಿನ ಎಡಭಾಗದಲ್ಲಿ ರಕ್ತನಾಳವು ಒಡೆದು ರಕ್ತಸ್ರಾವ ವಾಗಿರಬಹುದು ಅಥವಾ ರಕ್ತವು ನಾಳದಲ್ಲಿ ಹೆಪ್ಪುಗಟ್ಟಿರಬಹುದು, ಹೀಗೆ ಲಕ್ವ ಹೊಡೆದಾಗ. ಪಾರ್ಶ್ವವಾಯುವಿನ ತೀವ್ರತೆ, ಮುಂದಿನ ೨–೩ ದಿನಗಳಲ್ಲಿ ಗುಣಮುಖವಾಗುವ ರೀತಿ, ಇವುಗಳನ್ನು ನೋಡಿಯೇ ರಕ್ತಸ್ರಾವವಾಗಿದೆಯೇ, ಹೆಪ್ಪುಗಟ್ಟಿದೆಯೇ ತಿಳಿಯಬಹುದು. ಈ ಸಂದರ್ಭದಲ್ಲಿ ರಕ್ತಸ್ರಾವವೇ ಆಗಿರ ಬಹುದು ಎಂದು ಅನುಮಾನ ಬರುತ್ತಿತ್ತು.

ಈ ಬೇನೆಗೆ ಮಾಡುವ ಚಿಕಿತ್ಸೆಯನ್ನು ಆ ಹೆಸರಿನಿಂದ ಕರೆಯುವ ಬದಲು ಉಪಚಾರಮಾಡುವುದು ಎಂದು ಕರೆಯಬಹುದು. "ಮನೆಯಲ್ಲಿ ಉಪಚಾರ ಮಾಡುವುದು ಕಷ್ಟಸಾಧ್ಯ ! ಆಸ್ಪತ್ರೆಗೆ ಸೇರಿಸೋಣ" ಎಂದೆ.

"ಏನು ಬೇಕಾದರೂ ಆಗಲಿ, ಮನೆಯಲ್ಲೇ ಎಲ್ಲಾ ಉಪಚಾರವನ್ನೂ ಮಾಡುತ್ತೇವೆ. ಖಂಡಿತ ಆಸ್ಪತ್ರೆಗೆ ಬೇಡ. ಚೆನ್ನಾಗಿ ಬಾಳಿ ಮರ್ಯಾದೆಯಿಂದ ಬದುಕಿದವರು, ಸಾರ್ ! ಮನೇಲೇ ಕಡೆತನಕ ಇರಲಿ" ಎಂದು ತಿಪ್ಪಾಜಿ ಖಡಾಖಂಡಿತವಾಗಿ ಹೇಳಿದ. ಆಕೇನೂ ಅಷ್ಟೇ ಆದರದ ಆಗ್ರಹದಿಂದ ಹ್ಞೂ ಗುಟ್ಟಿದಳು.

ಹದಿನೈದು ದಿನಗಳಾಯ್ತು, ತಿಪ್ಪಾಜಿಯ ಅಪ್ಪ ಸಾಯುವುದಕ್ಕೆ. ಆದರೆ ಆ ಹದಿನೈದು ದಿನಗಳೂ ರಾತ್ರಿಗಳೂ ಮಗ ಸೊಸೆ ಇಬ್ಬರೂ ಎಷ್ಟು ಒಲವಿನಿಂದ, ಇನ್ನೆಷ್ಟು ಆದರದಿಂದ ಸ್ವಲ್ಪವೂ ಬೇಸರಗೊಳ್ಳದೆ ಹಿರಿಯರ ಸೇವೆ ಮಾಡಿದರು ಅಂತ ! ಒಮ್ಮೆ ನನಗೂ ಹೊಟ್ಟೆಕಿಚ್ಚಿನಿಂದ ಅನ್ನಿಸಿತು, ಇಂಥಾ ಮಗ ಸೊಸೆಯರು ನನ್ನ ಉತ್ಕ್ರಮಣಕಾಲದಲ್ಲಿ ಸಿಗುತ್ತಾರೆಯೇ ಅಂತ. ಕೂಡಲೇ ಖಚಿತವಾಗಿ ಕಂಡಿತು : ಅಂಥಾ ಪುಣ್ಯ ಪಡೆದು ಬಂದವರ ಬಾಳಿನ ರೀತಿಯೇ ಬೇರೆ ಅಂತ. ಅಂತಹ ಪುಣ್ಯವಂತರು ಡಾಕ್ಟರು ಯಾಕಾಗ್ತಾರೆ !

ಮೂರು ನಾಲ್ಕು ಬಾರಿ ನಂಜಣ್ಣನವರೂ ಬಂದು ನೋಡಿಕೊಂಡು ಹೋದರು. "ನನಗಿಂತ ಒಂದು ವರ್ಷ ಚಿಕ್ಕೋನು. ನೋಡು ನನ್ನ ಕಣ್ಣ ಮುಂದೇನೆ ಹೋಗಿಬಿಡ್ತಾನಲ್ಲ. ನಾನು ಹೋಗೋ ತನಕ ಇದ್ದು ಆಮೇಲೆ ಹೋಗಬಾರದಾಗಿತ್ತೇ ! ಏನು ಅವಸರವೋ ಇವನಿಗೆ" ಎಂದು ದುಃಖವನ್ನು ಹುದುಗಿಸಿಕೊಂಡು ನನಗೆ ಹೇಳಿದರು. "ತುಂಬಾ ವಿಶ್ವಾಸದಿಂದ ಎಲ್ಲರನ್ನೂ

ಕಾಣುತ್ತಿದ್ದ ನಿಷ್ಠಾವಂತ. ಓವರ್ಸಿಯರ್ ಇವನು, ರಿಟೈರಾದಾಗ. ಆದರೆ ಸೂಪರಿಂಟೆಂಡಿಂಗ್ ಇಂಜನಿಯರುಗಳು, ಊರ ಹಿರಿಯರು ಎಲ್ಲರೂ ಎಷ್ಟು ಮರ್ಯಾದೆ ಮಾಡ್ತಾ ಇದ್ದರು ಅಂತಿ, ಇವನಿಗೆ!" ಎಂದು ಹೊಗಳಿಕೆಯ ಮಾತನ್ನು ತೇಲಿಸಿ ಆಡಿದ್ದರು.

"ಇಷ್ಟು ಪ್ರೀತಿ ಅಪ್ಪನ ಮೇಲೆ. ಸಾಯುವಾಗ ಎರಡು ಮಾತುಗಳ ನ್ನಾಡದೆ ಹೋಗಿಬಿಟ್ಟರೆ, ತಿಪ್ಪಾಜಿಯ ಮನಸ್ಸಿನ ಮೇಲೆ ತೀವ್ರ ಆಘಾತ ಆಗಿ ಹೋಗುತ್ತದೆ. ಮೊದಲೇ ತಲೆ ಗೇರಿಹೊಡಿಯುತ್ತಾ ಇದೆ. ಅಪ್ಪ ಸತ್ತ ಮೇಲೆ, ವಿಷವಿುಸಿಕೊಂಡು, ಮೂರ್ಛೆಬೀಳುತ್ತಾನೋ ಏನೋ" ಎಂದು ಬಹಳ ಆತಂಕವಾಯಿತು. ಆದರೆ ನಾನು ಮಾಡೋದಾದರೂ ಏನಿತ್ತು? ಒಂದೂ ಇಲ್ಲ. ಮುದುಕರ ಸಾವು ತಪ್ಪಿಸುವಂತಿಲ್ಲ. ಅವರ ಕೈಲಿ ಎರಡು ಮಾತನಾಡಿ ಸುವ ಹಾಗಿಲ್ಲ. ಬಂದದ್ದೆಲ್ಲ ಬರಲಿ. ಆದರೆ ಈಗಿನಿಂದಲೆ ತಿಪ್ಪಾಜಿಗೆ ಧೈರ್ಯ ಹೇಳೋಣ" ಅಂತ, "ಅಪ್ಪನ ಸೇವೇನ ನಿನ್ನ ಹಾಗೆ ಆದರದಿಂದ ಮಾಡುವವ ರನ್ನು ಕಂಡಿಲ್ಲವಯ್ಯಾ. ಸಾಕಷ್ಟು ಜನ ಸಾಯೋರನ್ನು ನೋಡಿದ್ದೇನೆ. ಹೋದರೆ ಸಾಕಪ್ಪಾ ಬೇಗ, ಅನ್ನೋ ಕಿರಿಯರೇ ಹೆಚ್ಚು" ಎಂದು ಸಮಾಧಾನ ತುಂಬುವ ಮಾತುಗಳನ್ನಾಡಲು ಶುರುಮಾಡಿದೆ.

*   *   *

ತಿಪ್ಪಾಜಿಯ ತಂದೆ ಸತ್ತು ಎರಡು ಮೂರು ತಿಂಗಳಾಗಿತ್ತು. ಒಮ್ಮೆ ಯಾದರೂ ತಿಪ್ಪಾಜಿ ನನ್ನ ಬಳಿಗೆ ಬಂದಿರಲಿಲ್ಲ. ತಂದೆಯ ಸಾವಿನಿಂದ ಕಾಯಿಲೆಯು ಹೆಚ್ಚಾಗಿ, ಆರೆಂಟು ತಿಂಗಳ ನನ್ನ ಚಿಕಿತ್ಸೆಯಿಂದ ವಾಸಿಯಾಗದೆ ಇದ್ದ ಕಾರಣ, ಆಯುರ್ವೇದದ ಚಿಕಿತ್ಸೆಗೋ, ಮಂತ್ರ ಮಾಟಗಳ ಬಲೆಗೋ ಬಿದ್ದಿರಬಹುದೇನೋ ಎಂಬ ಶಂಕೆಯೂ ಉಂಟಾಗಿತ್ತು. ಮೇಲೆ ಬಿದ್ದುಕೊಂಡು ನಾವೇ ಹೋಗಿ, ಹೇಗಿದೀರಿ? ಎಂದು ರೋಗಿಯನ್ನು ಕೇಳುವುದಕ್ಕೆ ಏನೋ ಮಾಮೂಸಿಕೆ. ಎಂಥದೋ ಸಂಕೋಚ. ನಮ್ಮ ಅಂತಸ್ತನ್ನು ಕಡಿಮೆಮಾಡಿ ಕೊಂಡ ಹಾಗೆ ಆಗುತ್ತೆ. ಹಾಗಾಗಿ, ಹೋಗಿ ವಿಚಾರಿಸಿಕೊಳ್ಳಲಾಗದಿದ್ದರೂ ತಿಪ್ಪಾಜಿಯ ಯೋಚನೆಯನ್ನು ಅನುಕಂಪದಿಂದ ಮಾಡಿಕೊಂಡಿದ್ದೆ. ಕೂಡಲೆ ನೆನಪಿನ ಅಂಚಿಗೆ ಅವನ ಯೋಚನೆಯನ್ನು ನೂಕುತ್ತಿದ್ದೆ.

ಒಂದು ದಿನ ಮಧ್ಯಾಹ್ನ ಊಟಕ್ಕೆ ಕುಳಿತಿದ್ದಾಗ "ಇವತ್ತು ಸಂಜೆ ಅರಿಶಿನ ಕುಂಕುಮಕ್ಕೆ ಹೋಗಬೇಕು ಅಂದ್ರೆ. ನೀವು ಮನೆಗೆ ರಾತ್ರಿ ಬರೋದಕ್ಕೆ ಮುಂಚೇನೇ ಹಿಂತಿರುಗಿ ಬಂದುಬಿಡ್ತೀನಿ. ಅವರ ಮನೇಲಿ ಹಾಡಿನ ಸಮಾರಂಭ ವನ್ನು ಇಟ್ಟುಕೊಂಡಿದ್ದಾರೆ. ಮನೆಹಾಡುಗಳನ್ನು ಕೇಳಿ ತುಂಬಾ ದಿನಗಳಾಯ್ತು" ಎಂದು ಮನೆಯೊಡತಿಯು ಹೇಳಿದಳು.

ಸಾಮಾನ್ಯವಾಗಿ ಇದರ ಅರ್ಥ ಇಷ್ಟೆ: ನೀವು ದವಾಖಾನೆಗೆ ಹೋದ ಮೇಲೆ ಯಾರಾದರೂ ಡ್ರೈವರನ್ನು ತಲಾಷ್‌ಮಾಡಿ, ಮೋಟಾರನ್ನು ಮನೆಗೆ ಕಳಿಸಿ; ಅರಿಶಿನ ಕುಂಕುಮಕ್ಕೆ ಹೋಗಿ ಹಿಂತಿರುಗಿದ ಮೇಲೆ ದವಾಖಾನೆಗೆ ಮೋಟಾರನ್ನು ಕಳಿಸುತ್ತೇನೆ, ಅಂತ. ಮನೆಯಾಚೆ ಹೋಗಿಬರಲು ಮನೇ ಯಜಮಾನನ ಅಪ್ಪಣೆ ಪಡೆಯಲೋಸುಗ ಮನೆಯೊಡತಿಯು ಕೋರುವ ಬೇಡಿಕೆಯಲ್ಲ ಇದು.

"ಇವತ್ತು ಮಧ್ಯಾಹ್ನ ನಾಲ್ಕು ಗಂಟೆಗೆ ಸಭೆಯೊಂದಕ್ಕೆ ಹೋಗಬೇಕು. ಡ್ರೈವರು ಯಾರೂ ಈ ದಿನ ಸಿಗುವ ಸಂಭವವಿಲ್ಲ. ಹಾಗಾಗಿ ಮೋಟಾರು ಕಳಿಸಲು ಸಾಧ್ಯವಿಲ್ಲ. ನಾನೇ ಬಂದು ಡ್ರೈವರ ಕೆಲಸವನ್ನು ಮಾಡಲು ಅವಕಾಶವಿಲ್ಲ. ಬಸ್ಸಿನಲ್ಲಿ ಹೋಗಿ ಬಸ್ಸಿನಲ್ಲಿ ಬರುವುದಾದರೆ ನನ್ನ ಅಭ್ಯಂತರ ವಿಲ್ಲ" ಎಂದು ಗಂಡುಜಂಭದಿಂದ ಹೇಳಿದೆ. ಊಟದ ಕೊನೆಯ ಹಂತವನ್ನು ಮುಟ್ಟಿದ್ದೆ.

"ಅರಿಶಿನ ಕುಂಕುಮಕ್ಕೆ ಹೋಗಿ ಬರ್ತೀನಿ ಎಂದು ಹೇಳಿದೆನೇ ಹೊರತು ನಿಮ್ಮ ಮೋಟಾರನ್ನು ಏನೂ ಕೇಳಿಯೇ ಇಲ್ಲವಲ್ಲ! ಬಸ್ಸಿನಲ್ಲಾದರೂ ಹೋಗ್ತೀನಿ. ತಿಳಿದೋರು ಯಾರಾದರೂ ಮೋಟಾರನ್ನು ತಂದು ಕರೆದುಕೊಂಡು ಹೋಗಿ ಕರೆದುತಂದುಬಿಟ್ಟರೂ ಆಯಿತು. ಬೇಡ! ನಡೆದುಕೊಂಡು ಹೋಗಿ. ನಡೆದುಕೊಂಡು ಬರ್ತೀನಿ. ಅದನ್ನ ಕಟ್ಟಿಕೊಂಡು ನಿಮಗೇನು?" ಅಂತ ಮನೆಯೊಡತಿಯು ಹೇಳಿದಳು.

ಮಧ್ಯಾಹ್ನ ಮೊಸರನ್ನವನ್ನು ಉಂಡಕೂಡಲೆ, ದಿಂಬನ್ನು ಹುಡುಕುವ ಅಭ್ಯಾಸ ನನಗೆ. ಆ ಹೊತ್ತಿನಲ್ಲಿ ಯಾರು ಏನನ್ನೇ ಅನ್ನಲಿ, ಮನ್ನಿಸಲಿ. ಬಯ್ಯಲಿ, ಎಲ್ಲಕ್ಕೂ ಬಾರಾ ಖೂನ್ ಮಾಫ್. ಸುಖವಾಗಿ ಮಲಗಿ ಗಾಢನಿದ್ರೆ ಮಾಡುತ್ತೇನೆ.

ನಾಲ್ಕಕ್ಕೆ ಕಾಫಿ ಕುಡಿದು ಹೋಗುವ ಹೊತ್ತಿಗೆ ಸಭೆಯ ಕಾರ್ಯ ಲಾಪಗಳೇ ನನ್ನ ತಲೆಯನ್ನು ತಿಂದಿದ್ದುವು. 'ಹೋಗಿಬರ್ತೀನಿ' ಅಂತ ಬಾಗಿಲಿಗೆ ಹೇಳಿ ಹೊರಟುಹೋದೆ.

ರಾತ್ರಿ ಮನೆಗೆ ಹಿಂದಿರುಗಿದಾಗ ಯಥಾಪ್ರಕಾರ ಎಂಟೂವರೆ ಆಗಿತ್ತು. ಅಡಿಗೆಯು ಮುಂದಿನ ಬಾಗಿಲನ್ನು ತೆಗೆದು ಒಳಕ್ಕೆ ಹೋದಳು. ಬೆಳೆದಿದ್ದ ಮಕ್ಕಳು ಓದುತ್ತ ಕುಳಿತಿದ್ದರು. ಮನೆಯೊಡತಿಯು ಅರಿಶಿನ ಕುಂಕುಮಕ್ಕೆ ಹೋಗ್ತೀನಿ ಎಂದು ಹೇಳಿದ್ದು ಜ್ಞಾಪಕಕ್ಕೆ ಬಂತು. ಆದಕ್ಕೇ ಮನೆಯಲ್ಲಿ ಬುಸುಬುಸು ಕೂಡ ಇತ್ತಿಲ್ಲ. ಯಾವ ಗುಡುಗುಡು ಕೂಡ ಇರಲಿಲ್ಲ. ಮನೆ ಒಂದು ರೀತಿಯಾಗಿ ಬಿಕೋ ಅನ್ನಿಸಿತು. ವರಾಂಡದಲ್ಲಿ ಆರಾಮುಕುರ್ಚಿಯ ಮೇಲೆ ಕುಳಿತುಕೊಂಡೆ.

ಎರಡು ನಿಮಿಷ ಆಗಿರಬಹುದು. ದೊಡ್ಡ ಮೋಟಾರೊಂದು ಬಂದು ಮನೆಯ ಮುಂದೆ ನಿಂತಿತು. "ಯಾವನು ಬಂದನಪ್ಪಾ! ಸುಸ್ತುಬಡಿದು ಮನೆಗೆ ಬಂದರೆ ತಿರುಗಿ ಸತಾಯಿಸುಕ್ಕೆ ಬಂದನಲ್ಲಪ್ಪಾ!" ಎಂದು ಮನಸ್ಸಿನಲ್ಲೇ ಬಯ್ಯುತ್ತ ಮುಖದ ಮೇಲೆ ದೇಶಾವರದ ನಗೆಯನ್ನು ಮೂಡಿಸುತ್ತಾ ಎದ್ದು ನಿಂತೆ.

ದೊಡ್ಡ ತಟ್ಟೆಯೊಂದನ್ನು ಹಿಡಿದು ಹೆಣ್ಣುಮಗಳೊಬ್ಬಳು ಮೋಟಾರಿಳಿದು ಗೇಟಿನ ಬಳಿಗೆ ಬಂದಿದ್ದಳು. "ಬನ್ನಿ ತಾಯಿ! ಮನೆಯಾಕೆ ಎಲ್ಲೋ ಹೋಗಿದ್ದಾರೆ. ಬನ್ನಿ. ಅವರೂ ಬಂದುಬಿಡೋರು" ಎಂದು ಗೇಟಿನ ಹತ್ತಿರ ಅರೆಕತ್ತಲೆಯಲ್ಲಿ ಕಾಣಿಸಿದಾಗಲೇ ಹೇಳಲು ಶುರುಮಾಡಿದ್ದೆ. ಕಿಲಕಿಲ ನಕ್ಕು ಆಕೆ ಒಳಕ್ಕೆ ಬಳುಕುತ್ತಾ ಬಂದಳು. ಹಿಂದೆಯೇ ಇನ್ನೊಬ್ಬ ಮುತ್ತೈದೆಯೂ ಯುವಕನೊಬ್ಬನೂ ಇಳಿದು ಮೆಲ್ಲಗೆ ಬರುತ್ತಿದ್ದರು. ವರಾಂಡಕ್ಕೆ ಬಂದ ಮೇಲೇ ಗೊತ್ತಾಗಿದ್ದು! ತಿಪ್ಪಾಜಿಯ ಹೆಂಡತಿ ತಟ್ಟೆ ಹಿಡಿದು ಬಂದಿದ್ದವಳು! ಹಿಂದೆ ಬಂದ ಆಕೆ ನಮ್ಮಮನೆಯೊಡತಿ. ಯುವಕ? ಹೇಳಬೇಕೆ? ತಿಪ್ಪಾಜಿ!

"ಇವರ ಮನೆಗೇನೇ ಅರಿಶಿನ ಕುಂಕುಮಕ್ಕೆ ಕರೆದಿದ್ದು?" ಎಂದೆ.

"ಇಲ್ಲಾ ಅಂದ್ರೆ. ಇವರ ಪಕ್ಕದ ಮನೆಯವರು ಕರೆದಿದ್ದರು. ಇವರುಗಳು ಹಿಂತಿರುಗಿ ಕರೆದುಕೊಂಡು ಬರಲು ಜತೆಗೆ ಬಂದರು" ಎಂದಳು.

"ಯಾವಾಗಪ್ಪ ಕಾರ್ ಕೊಂಡುಕೊಂಡೆ, ತಿಪ್ಪಾಜಿ? ದೊಡ್ಡದಾಗಿದೆ! ಪರವಾಗಿಲ್ಲ. ಈಗ ಆರೋಗ್ಯವಾಗಿರೋ ಹಾಗೆ ಕಾಣುತ್ತೆ" ಎಂದೆ.

"ಇವರು ಹೇಗೆ ಕಾರು ಕೊಳ್ಳೋಕ್ಕೆ ಸಾಧ್ಯ, ಡಾಕ್ಟರೇ? ಈ ಊರಿನವರು ಕೊಡೋ ಸಂಬಳದಲ್ಲಿ ಬೈಸಿಕಲ್ಲು ಇಟ್ಟುಕೊಳ್ಳೋದೇ ಕಷ್ಟ! ಮುಸಲಾ ಏನಾದರೂ ಕಾರು ಇಟ್ಟುಕೊಳ್ಳುವಂತಾದರೆ, ಅಂಗೈಯನ್ನು ಮುಂದೆ ತೋರಿಸುವ ಹಾಗೇ ಇರುಲ್ಲ!! ಅಲ್ಲವೇ ಡಾಕ್ಟರೇ!" ಎಂದಳು, ಇಂಜನಿಯರ್ ತಿಪ್ಪಾಜಿಯ ಹೆಂಡತಿ.

ನನಗೆ ಯಾವುದೊಂದೂ ಅರ್ಥವಾಗಲಿಲ್ಲ. ಮುಖ ಪೆಚ್ಚುಬಡಿದಿರ ಬಹುದು. ಅದಕ್ಕೇನೇ ಏನೋ ತಿಪ್ಪಾಜಿಯ ಹೆಂಡತಿಯೇ ಮುಂದುವರಿದು "ನಮ್ಮ ತಂದೆ ನಾಲ್ಕು ತಿಂಗಳ ರಜಾದ ಮೇಲೆ ಪಕ್ಕದ ಮನೇನ ಬಾಡಿಗೆಗೆ ತೆಗೆದುಕೊಂಡು ವಿಶ್ರಾಂತಿಗೆ ಬಂದಿದ್ದಾರೆ, ಡಾಕ್ಟರೇ! ನಾವೇ ಮನೇನ ಗೊತ್ತು ಮಾಡಿಕೊಟ್ಟೆವು. ಇವತ್ತು ನನ್ನ ಚಿಕ್ಕತಂಗಿಗೆ ಆರತಿ ಮಾಡಿದ್ದರು. ಏಳನೇ ತಿಂಗಳು. ಅದಕ್ಕೇ 'ಅಮ್ಮಾವರನ್ನು ಕರಕೊಂಡು ಬರಲೇ ಬೇಕು. ಅವರ ಕೈಲಿ ಆಶೀರ್ವಾದ ಮಾಡಿಸಲೇಬೇಕು' ಎಂದು ಅಪ್ಪ ಹೇಳಿದರು. ಅವರ ಮೋಟಾರನ್ನೇ ಕಳಿಸಿಕೊಟ್ಟರು. 'ಡಾಕ್ಟರಿಗೆ ತೊಂದರೆ ಕೊಡಬೇಡಿ' ಅಂತ ಕೂಡ ಹೇಳಿದ್ದರು" ಎಂದು ವಿವರಣೆ ಕೊಟ್ಟಳು.

"ಅಪ್ಪ ಬಂದಿದ್ದಾರೆ ಅಂತಲೇ ನೀನು ಬಳುಕುಂತಾ ಇರೋದು! ಈಗ ಅರ್ಥವಾಯಿತು ತಾಯಿ!" ಎಂದು ತಿಪ್ಪಾಜಿಯ ಹೆಂಡತಿಗೆ ಹೇಳಿದೆ. "ಅಲ್ಲ ವೇನಯ್ಯಾ! ನೀನು ಒಪ್ಪುಲ್ಲವೇ?" ಎಂದೆ, ತಿಪ್ಪಾಜಿಯ ಕಡೆ ತಿರುಗಿ.

"ಶತಾಂಶ ನೂರರಷ್ಟು ಸತ್ಯ, ಸಾರ್! ಅವರಪ್ಪ ಬಂದ ದಿನದಿಂದ ಇವಳು ನಡೆದಿದ್ದೇ ನೋಡಲಿಲ್ಲ. ಕುಣೀತಾ ಹಾರ್‍ತಾ ಇರ್‍ತಾಳೆ. ತಂದೆ ಮಗಳು ಸೇರಿಕೊಂಡು ನನ್ನನ್ನೂ ಕುಣಿಸ್ತಾ ಇದ್ದಾರೆ. ಅದಕ್ಕೇ ಕೆಲಸಕ್ಕೆ ರಾಜೀನಾಮೇನೂ ಕೊಡೋಣ ಅಂತ ತೀರ್ಮಾನಿಸಿದೀನಿ" ಎಂದ.

"ಕಾಯಿಲೆ ಅಂತ ಅಲ್ಲವಲ್ಲ ರಾಜೀನಾಮೆ?" ಎಂದೆ. ಡಾಕ್ಟರ ಬುದ್ಧಿ ವಕ್ರವಾಗಿಯೇ ಹೋಗುತ್ತೆ.

"ಛೇ! ಛೇ! ಒಂದು ಸರ್ತಿ ಸ್ವಲ್ಪ ತಲೆ ತಿರುಗಿದ ಹಾಗಾಯ್ತು, ಡಾಕ್ಟರೇ. ಆದರೆ ಬೇಗ ವಾಸಿಯಾಯ್ತು. ಮಾವನವರ ಸಲಹೆಯ ಮೇರೆ

ಅವರ ಕಂಪನಿಯಲ್ಲಿ ಇಂಜಿನಿಯರ್ ಕೆಲಸಕ್ಕೆ ಅರ್ಜಿಹಾಕಿದ್ದೆ. ಈಗ ಬರೋ ಸಂಬಳಕ್ಕಿಂತ ನಾಲ್ಕರಷ್ಟು ಸಂಬಳ ಸಿಗುವ ಕೆಲಸಕ್ಕೆ. ಪ್ರಕ್ಕಟೆ ಮನೆ. ಮೋಟಾರು, ಜವಾನರು. ಆ ಕೆಲಸವೂ ಸಿಗುವ ಸಂಭವವಿದೆ. ಅದು ಖಂಡಿತವಾದ ಕೂಡಲೆ ಇಲ್ಲಿ ಎಲ್ಲವನ್ನೂ ವ್ಯವಸ್ಥೆಮಾಡಿ ಹೋಗೋಣ ಅಂತ ತೀರ್ಮಾನಿಸಿದ್ದೀನಿ. ಹೋಗುಕ್ಕೆ ಮುಂಚೆ ಬಂದು ನೋಡ್ತೀನಿ, ಡಾಕ್ಟರೇ !" ಎಂದ ತಿಪ್ಪಾಜಿ.

"ಮೂರು ವರ್ಷದಿಂದ ನಾನೂ ಇದನ್ನೇ ಹೇಳ್ತಾ ಇದ್ದೆ, ಡಾಕ್ಟರೇ ! ಆ ಮಾತೆತ್ತಬೇಡ ಅಂತ ರೇಗಿಬಿಡೋರು. ಈಗ ಒಳ್ಳೇ ಬುದ್ಧಿ ಬಂದಿದೆ" ಎಂದು ತಿಪ್ಪಾಜಿಯ ಹೆಂಡತಿ ಹೇಳಿದಳು.

"ತುಂಬಾ ಸಂತೋಷವಪ್ಪಾ ! ನೀನು ಆರೋಗ್ಯವಾಗಿದ್ದೀ ಅಂತ ಕೇಳಿ ಸಂತೋಷ ಆಯ್ತಪ್ಪಾ ! ದೊಡ್ಡ ಕೆಲಸ ಸಿಕ್ಕಿದ್ದು ಕೇಳಿ ಇನ್ನೂ ಸಂತೋಷ ! ಎಂದು ಅಭಿನಂದಿಸಿದೆ.

ಅರಿಶಿನ ಕುಂಕುಮವನ್ನು ಮನೆಯೊಡತಿ ತಂದು, "ಇವರ ತಂದೆ ಕಾದಿರ್ತಾರೆ ! ಇಲ್ಲಿ ಮಾತನಾಡಿಸ್ತಾ ಕೂರಿಸಿಕೊಂಡುಬಿಡಬೇಡಿ" ಎಂದು ನನಗೆ ಹುಷಾರುಕೊಡುತ್ತಾ, ತಿಪ್ಪಾಜಿಯ ಹೆಂಡತಿಯ ಹಣೆಗೆ ತಾನೇ ಕುಂಕುಮವನ್ನಿಟ್ಟಳು.

"ಎಂತಹ ಒಳ್ಳೇ ಸಂಸಾರ ಅಂದ್ರೆ !" ಅಂತ ಅವರು ಹೋಗುವುದನ್ನೇ ನೋಡುತ್ತಾ ನಿಂತ ಮನೆಯೊಡತಿ ಹೇಳಿದಳು.

## ಕಲಿತ ಪಾಠ

ತಲೇಗೇರಿಯ ಕಾರಣ ಈಗ ಸ್ಪಷ್ಟವಾಗಿ ಗೊತ್ತಾಯಿತು. ಸ್ವಲ್ಪ ಯೋಚನೆಮಾಡಿದ್ದರೆ ಮೊದಲೇ ಸುಲಭವಾಗಿ ತಿಳಿಯಬಹುದಾಗಿತ್ತು.

ತಾಯಿಲ್ಲದ ತಬ್ಬಲಿಯನ್ನು ಅಪ್ಪ ಆದರದಿಂದ ಸಾಕಿ ಬೆಳಸಿದ್ದ. ಮೇಲಧಿಕಾರಿಗಳಿಗಿಂತ ತಾನು ಜಾಣನಾಗಿದ್ದರೂ ಓವರ್ಸಿಯರ್ ಆದ ಕಾರಣ ಚಾಕರಿಯ ದಿನಗಳಲ್ಲಿ ತಲೆ ತಗ್ಗಿಸಬೇಕಾಗಿತ್ತು. ಅದಕ್ಕೇ ಮಗನು ದೊಡ್ಡ ಅಧಿಕಾರಿಯಾಗಿ ತಾವಿದ್ದ ಇಲಾಖೆಯಲ್ಲೇ ಪ್ರವರ್ಧಮಾನಕ್ಕೆ ಬರಬೇಕು ಎಂದು

ಅವನ ಆಸೆ. ತನ್ನ ಆಸೆ ಆಕಾಂಕ್ಷೆಗಳನ್ನು ಮಗನ ಮುಖಾಂತರ ಸಾಧಿಸಿಕೊಳ್ಳ ಬೇಕೆಂಬ ಒಂದೇ ಮನದಾಳದ ಹಂಬಲ, ಅಪ್ಪನಿಗೆ.

ಅಪ್ಪನ ಮಾತನ್ನು ವಿರೋಧಿಸುವ ಯೋಚನೆಯನ್ನೂ ತಿಪ್ಪಾಜಿ ಬಹಿರಂಗವಾಗಿ ಮಾಡಲೊಲ್ಲ. ಅಂತರಂಗದಲ್ಲಿ ಕೂಡ ಮಾಡುವ ಮನಸ್ಸಿಲ್ಲ. ಆದರೂ ವಿಚಾರಮಾಡಿದರೆ ಹೆಂಡತಿ ಹೇಳುವುದರಲ್ಲಿ ನ್ಯಾಯ ಇದೆ ಎಂದು ಅನ್ನಿಸದೆ ಇರಲಿಲ್ಲ.

ಹೆಂಡತಿಯಾದರೂ ಹೇಳಿದ್ದು ಏನು? "ಅಪ್ಪ ಹೇಳ್ತಾರೆ ಅಂದ್ರೆ. ಕಲ್ಕತ್ತಾದಲ್ಲಿ ಕೆಲಸಕ್ಕೆ ಸೇರಿಕೊಂಡರೆ, ಕೈತುಂಬಾ ಹಣ ಸಿಗುತ್ತೆ. ತುಂಬಾ ಪ್ರವರ್ಧಮಾನಕ್ಕೆ ಬರಬಹುದು. ಈ ಹಾಳು ಕೊಂಪೇಲಿ ಕೂತು ಕೊಳೆಯೋದ ರಲ್ಲಿ ಏನು ಸುಖ?" ಅಂತ ಹೇಳಿದ್ದಿರಬೇಕು.

ಚೂಟಿ ಹುಡುಗಿ. ಯಾವ ಮಾತಿನಲ್ಲೂ ತಲೆಹಾಕಿಕೊಂಡು ಬಂದು 'ನಾನೂ ಅದನ್ನೇ ಹೇಳಿದ್ದು' ಎನ್ನುವ ಜಾಯಮಾನ. ಅಪ್ಪನ ಸಲಹೆಯನ್ನು ಕೇಳಿದ ಮೇಲೆ ಸುಮಾರು ಸತಾಯಿಸಿರಬೇಕು, ಮೂರು ನಾಲ್ಕು ವರ್ಷಗಳಿಂದ, ಗಂಡನನ್ನ.

ಅಪ್ಪನ ಮಾತನ್ನು ಎದುರಿಸಲು ಎಳ್ಳಷ್ಟೂ ಇಷ್ಟವಿಲ್ಲ. ಹೆಂಡತಿ ಹೇಳುವುದು ನ್ಯಾಯ ಎಂದು ಅನ್ನಿಸುತ್ತಲೂ ಇತ್ತು. ಹೀಗೂ ಮಾಡಲಾರದೆ, ಹಾಗೂ ಇರಲಾರದೆ ಮನಸ್ಸು ಓಲಾಡುತ್ತಿತ್ತು. ಖಚಿತವಾದ ತೀರ್ಮಾನವನ್ನು ತೆಗೆದುಕೊಂಡು, ತನ್ನ ಕಾಲಮೇಲೆ ತಾನು ನಿಲ್ಲಲಾರದಾಗಿದ್ದ.

ಅಂಥವನಿಗೆ ತಲೆ ಸುತ್ತುವುದು ಏನು ಆಶ್ಚರ್ಯ! ಹೆಂಡತಿ ಜುಲುಂ ಮಾಡಿದಾಗಲೆಲ್ಲಾ, ಇವನಿಗೆ ತಲೆ ಗೇರಿಹೊಡೆಯುತ್ತಿದ್ದಿರಬೇಕು.

ಅಪ್ಪ ತೀರಿಕೊಂಡಮೇಲೆ ಈ ತಾಪತ್ರಯವೇ ಇದ್ದಿರಲಿಲ್ಲ. ಅದಕ್ಕೇ ಗುಣಹೊಂದಿದ್ದ.

ಇಷ್ಟಕ್ಕೆ ನಾನು ಎಷ್ಟೆಲ್ಲಾ ಒದ್ದಾಡಿದ್ದೆ! ಎಲ್ಲಿ ಇವನಿಗೆ ಮೂರ್ಛೆರೋಗ ಬರುತ್ತೋ ಎಂದೂ ಶಂಕಿಸಿದ್ದೆ!

'ಎಂಥ ಮಂಕ ನಾನು!' ಎಂದು ಅನ್ನಿಸಿತು.

ಗಂಡ ಹೆಂಡತಿ ಆಡಿದ ಮಾತುಗಳಿಂದ 'ಈ ತರಹ ಹೊಯ್ದಾಟ ಯಾವುದೋ ಇವನ ಮನಸ್ಸಿನಲ್ಲಿರಬೇಕು' ಎಂದು ಸುಲಭವಾಗಿ ಊಹಿಸ ಬಹುದಾಗಿತ್ತು.




# ೪. ಹುಳುಳುಳುಳಾಯಿ

ತೊಟ್ಟಿಲ ತೂಗುವ ಹಾಡೊಮ್ಮೆ!
ಚಟ್ಟವನತ್ತುವ ಹಾಡೊಮ್ಮೆ!!

ಆ ವರ್ಷದ ನವರಾತ್ರಿ ಹಬ್ಬವನ್ನು ಮರೆಯುವ ಹಾಗೇ ಇಲ್ಲ. ಅಮಾವಾಸ್ಯೆಯ ದಿನ ಉದ್ದಿನ ವಡೆಯನ್ನು ಯಥಾಪ್ರಕಾರ ಮಾಡಿದ್ದರು. ಆದರೆ ಮೆಂತ್ಯದ ಹಿಟ್ಟಿನ ಗೊಜ್ಜನ್ನು ಅನಿರೀಕ್ಷಿತವಾಗಿ ಬಡಿಸಿದ್ದರು. ಒಂದು ಸೌಟು ಗೊಜ್ಜನ್ನು ನಾಲ್ಕು ವಡೆಗಳ ಜತೆಯಲ್ಲಿ ನೆಂಚಿಕೊಂಡು ಬಲು ಖುಷಿಯಿಂದ ತಿಂದಿದ್ದೆ. ಅಂತಹ ಮೆಂತ್ಯದ ಹಿಟ್ಟಿನ ಗೊಜ್ಜನ್ನು ಅವರೆಗೂ ತಿಂದಿರಲಿಲ್ಲ.

ಸರಸ್ವತಿ ಪೂಜೆಯ ದಿನ ಸಾಧಾರಣವಾದ ದಿನದ ಊಟ. ಆದರೆ ಮೊಸರನ್ನವನ್ನು ತಿನ್ನುತ್ತಿದ್ದಾಗ ನೆಂಚಿಕೊಳ್ಳಲು ಗೋರಿಕಾಯಿ ಬಾಳಕವನ್ನು ಬಡಿಸಿದ್ದರು. ಒಂದು ಹಿಡಿ ಎಂದರೆ ಎಂಬತ್ತರಷ್ಟು—ಬಾಳಕವನ್ನು ಮುಗಿಸಿದ ಜ್ಞಾಪಕ. ಚೂರುಚೂರಾಗಿ ತಿನ್ನುವ ವೇಳೆಗೆ, ಬಡಿಸಿದಾಕೆ "ಇದೇನು ಹೀಗೆ ಮೆಲ್ಲಗೆ ತುತ್ತು ತುತ್ತನ್ನೂ ಅಗಿದು ಜಗಿದು ತಿಂತಾ ಇದೀರಿ? ದಿನಾಗಲೂ ಗಬಕ್ಕಂತ ಎರಡೇ ನಿಮಿಷದಲ್ಲಿ ಊಟ ಮುಗಿಸೋರು ನೀವು?" ಎಂದು ಕೇಳಿದ್ದಳು. ಅಂತಹ ರುಚಿಯಾದ ಬಾಳಕ ಸಿಕ್ಕಿದಾಗ ಅದಷ್ಟು ಹೊತ್ತು ಅದನ್ನು ಅನುಭವಿಸಬೇಡವೆ?

ಮಹಾನವಮಿಯ ದಿನ ಊಟಮಾಡಿ, ಒಂದು ತಾಸು ಮಲಗಿ, ಮೂರು ಗಂಟೆಗೆ ಎದ್ದಿದ್ದೆ. ಚಹಾ ತಂದುಕೊಟ್ಟಾಗ "ಸತ್ಯನಾರಾಯಣನ ಪ್ರಸಾದಾನ ಪಾತಕ್ಕ ಕಳಿಸಿದ್ದಾರೆ. ಸ್ವಲ್ಪ ತಂದುಕೊಡಲೆ? ಮಿಕ್ಕಿರುವ ಮಧ್ಯಾಹ್ನದ ಉಪ್ಪೇರಿಯನ್ನೂ ಸ್ವಲ್ಪ ತರ್ತೀನಿ" ಎಂದು ಮನೆಯಾಕೆ ಅಂದಳು. "ಹೂ"

ಅಂದೆ: "ಇಂತಹ ಪ್ರಸಾದಾನ ತಿನ್ನಲು ಕೊಡುತ್ತೇನೆ ಎಂದು ಸತ್ಯನಾರಾಯಣ ಭರವಸೆ ಕೊಟ್ಟರೆ ಆತನ ಪೂಜೆಯನ್ನು ದಿನಾಗಲೂ ಮಾಡುತ್ತೇನೆ" ಎನ್ನುವಷ್ಟು ರುಚಿಯಾಗಿತ್ತು. "ಇಷ್ಟೇನೇನೆ ಕಳಿಸಿದ್ದು ಪಾತಕ್ಕ?" ಎಂದು ಕೇಳಿ, ಆ ತಾಯಿ ಪಾತಕ್ಕ ಕಳಿಸಿದ್ದ ಡಬರಿಯನ್ನೆಲ್ಲ ಖಾಲಿಮಾಡಿದೆ.

"ನೋಡೇ! ಅಷ್ಟು ಚೆನ್ನಾಗಿ ಮೆಂತ್ಯದ ಹಿಟ್ಟಿನ ಗೊಜ್ಜನ್ನು ಮಾಡಲು ಕಲಿತಿದ್ದೀ? ಗೋರಿಕಾಯಿ ಬಾಳಕ ಮಾಡಿ ಹದನಾಗಿ ನೀನು ಕರಿಯುವಂತೆ ಯಾರೂ ಅದಿತಿಯ ಕಾಲದಿಂದ ಕಲಿತಿಲ್ಲ. ಆದರೆ ಪಾತಕ್ಕ ಮಾಡಿದ ಹಾಗೆ ಸತ್ಯನಾರಾಯಣನ ಪ್ರಸಾದವನ್ನು ಮಾಡಲು ಕಲಿತುಕೊಳ್ಳೇ. ಆಮೇಲೆ ನೋಡು, ಏಳು ಅಂದರೆ ಏಳ್ತೀನಿ, ಬಿದ್ದುಕೋ ಅಂದರೆ ಬಿದ್ದುಕೋತೀನಿ" ಎಂದು ಹೇಳಿದೆ.

"ಮೆಂತ್ಯದ ಹಿಟ್ಟಿನ ಗೊಜ್ಜನ್ನೂ, ಗೋರಿಕಾಯಿ ಖಾಳಕವನ್ನೂ, ಪಾತಕ್ಕನೇ ಮಾಡಿ ಕಳಿಸಿದ್ದರು, ಅಂದ್ರೆ" ಎಂದು ತಲೆ ತಗ್ಗಿಸಿ ಆಕೆ ಹೇಳಿದಳು.

"ಅವರಿಗ್ಯಾಕೆ ನಿನ್ನ ಮೇಲೆ ಇಷ್ಟು ವಿಶ್ವಾಸ! ಹಬ್ಬದ ದಿನಗಳಲ್ಲೂ ರುಚಿರುಚಿ ಕುರುಕಲು ಅಡಿಗೆಮಾಡಿ ನಿನಗೆ ಕಳಿಸಿಕೊಡಲು ಕಾರಣವಾದರೂ ಏನು?" ಎಂದು, ಸತ್ಯನಾರಾಯಣನ ಪ್ರಸಾದದ ಖಾಲಿಯಾದ ಡಬರಿಯನ್ನು ಬೆರಳ ತುದಿಯಲ್ಲಿ ಒರಸಿ, ಆ ಬೆರಳ ತುದಿಯನ್ನು ಚೀಪುತ್ತಾ ಕೇಳಿದೆ.

"ನನಗೂ ಅದೇ ಅನುಮಾನ ಬಂತು ಅಂದ್ರೆ! ಆದರೆ ಹಿರಿಯ ಮುತ್ತೈದೆ ಬಂದು ಕೊಟ್ಟಾಗ, ಏಕೆ ತಂದಿರಿ ಎಂದು ಹೇಗೆ ಕೇಳೋದು? ಆದರೆ ಈ ಮಧ್ಯಾಹ್ನ ಸತ್ಯನಾರಾಯಣನ ಪ್ರಸಾದವನ್ನು ತಂದುಕೊಟ್ಟಾಗ, ಆಕೆ "ನಿನ್ನ ಗಂಡನ್ನ ಕೇಳಿ, ನಮ್ಮ ಶಾಮುಗೆ ಒಂದು ಟಾನಿಕ್ ಬರೆಸಿಕೊಡಮ್ಮ! ಎರಡು ವಾರಗಳಿಂದ ಎಂಥೆಂಥ ಅಡಿಗೆ ಮಾಡಿ ಬಡಿಸಿದರೂ, ಆಸೆಯಿಂದ ಊಟಕ್ಕೆ ಕುಳಿತ ಶಾಮು, ಒಂದು ತುತ್ತು ಬಾಯಿಗಿಟ್ಟುಕೊಂಡು, 'ಹೇಗೋ ಆಗುತ್ತಮ್ಮಾ! ಊಟ ಸಾಕಮ್ಮ! ಬಚ್ಚಲ ಕಡೆಗೆ ಹೋಗ್ತೀನಿ' ಎಂದು ಬೇಗ ಎದ್ದು ವಾಕರಿಸುತ್ತಾ ಹೋಗುತ್ತಾನೆ. 'ಡಾಕ್ಟರಿಗೆ ತೋರಿಸೋ' ಎಂದರೆ 'ನಂಗೇನಾಗಿದೆಮ್ಮಾ! ಎಲ್ಲೋ ಸ್ವಲ್ಪ ಪಿತ್ತ ಕೆರಳಿದೆ. ಎರಡು ದಿನಗಳಲ್ಲಿ ಸರಿಹೋಗುತ್ತೆ' ಎಂದು ಹೇಳ್ತಾನೆ." ಎಂದು ಹೇಳಿದರು.

"ಪಾಪ! ಬಲು ನೊಂದಿದ್ದಾಳೆ ಅಂದ್ರೆ ಪಾತಕ್ಕ. ಅಷ್ಟು ರುಚಿಯಾಗಿ ಅಡಿಗೆ ಮಾಡುವುದನ್ನು ಕಲಿತಿದ್ದಾಳೆ. ಒಬ್ಬನೇ ಮಗ. ಅವನು ಊಟ ಮಾಡದೇ ಇದ್ದರೆ, ಈಕೆ ತಾನೆ ಏನು ಊಟಮಾಡ್ತಾಳು ಆಮೇಲೆ, ಒಬ್ಬಳೇ ಕುಳಿತು? ಅದಕ್ಕೇ ನಮ್ಮ ಮನೆಗೆ ಆ ಅಡಿಗೆಯನ್ನೆಲ್ಲಾ ತಂದುಕೊಟ್ಟು, ರೋಗಿ ಯನ್ನು ನೋಡದೆ ಇದ್ದರೂ ನಿಮ್ಮಿಂದ ಟಾನಿಕ್ ಬರೆಸಿಕೊಂಡು, ಟಾನಿಕನ್ನು ಕಳ್ಳತನದಲ್ಲಿ ಕಾಣದ ಹಾಗೆ ಮಗನಿಗೆ ಕೊಡಬೇಕು ಎಂದು ಆಕೆ ಆಸೆಪಟ್ಟ ಹಾಗೆ ಕಾಣುತ್ತೆ. ಏನಾದರೂ ಟಾನಿಕ್ ಬರೆದುಕೊಡಿ, ಅಂದ್ರೆ!"

—ಎಂದು ಮನೆಯೊಡತಿ ಅನುಕಂಪದ ಸೂಚನೆಯಿದ್ದ ದನಿಯಲ್ಲಿ ಹೇಳಿದಳು.

"ಪರೀಕ್ಷೆ ಮಾಡದೆ ಶಾಮುವಿಗೆ ಏನಾಗಿದೆ ಅಂತ ಹೇಗೆ ತಿಳಿದುಕೊಳ್ಳು ವುದು? ಬೇನೆಯ ವಿವರಗಳು ತಿಳಿಯದೆ ಇದ್ದಾಗ, ಟಾನಿಕ್ ಅನ್ನಾದರೂ ಹೇಗೆ ಸಲಹೆ ಮಾಡಲು ಸಾಧ್ಯ? ಏನಾದರೂ ಉಪಾಯ ಹೂಡಿ ಶಾಮಣ್ಣನನ್ನು ನಮ್ಮ ಮನೆಗೆ ಪಾತಕ್ಕ ಕರೆದುಕೊಂಡು ಬರಲಿ. ದವಾಖಾನೆಗೇನೂ ಬೇಡ. ಇಲ್ಲೇ ಪರೀಕ್ಷೆಮಾಡಿ ಟಾನಿಕನ್ನೋ ಚಿಕಿತ್ಸೆಯನ್ನೋ ಸೂಚಿಸುತ್ತೇನೆ" ಎಂದೆ.

"ಪಾತಕ್ಕ ಹೇಳಿದ್ದು ಕೇಳಿದರೆ ಅದೇನೂ ಅಷ್ಟು ಸುಲಭವಲ್ಲ ಅಂತ ಕಾಣುತ್ತೆ" ಎಂದಳು ಮನೆಯೊಡತಿ.

* * *

ಅಷ್ಟುಹೊತ್ತಿಗೆ ಮನೆಯ ಬಾಗಿಲ ಹೊರಗೆ ಮೋಟಾರೊಂದು ಒಂದೇ ನಿಮಿಷದಲ್ಲಿ ಹತ್ತಾರು ಬಾರಿ ಕಹಳೆಕೊಂಬನ್ನು ಬಾರಿಸಿತು. ಮನೆಯೊಡತಿಯು ಹೊರಕ್ಕೆ ಹೋಗಿ ವಿಷಯವನ್ನು ತಿಳಿದುಕೊಂಡು, ಬೇಗ ಬೇಗ ಹಿಂತಿರುಗಿ—

"ಮಂತ್ರಿಗಳ ಮನೆಯ ಕಾರ್ ಬಂದಿದೆ, ಅಂದ್ರೆ. ನಿಮ್ಮನ್ನ ತಕ್ಷಣ ಕರದುಕೊಂಡು ಬಾ ಅಂತ ಹೇಳಿದರಂತೆ, ಅಂದ್ರೆ" ಎಂದು ಗಾಬರಿಯಾಗಿಯೇ ಹೇಳಿದಳು.

"ಮಂತ್ರಿಗಳ ಮನೆಯ ಮೋಟಾರು ಬಂತು ಅಂತ ಹೆದರಬೇಕಾಗಿಲ್ಲ ಕಣೇ. ಮಂತ್ರಿಗಳ ಮನೆಯ ಜವಾನನ ಸ್ನೇಹಿತನನ್ನು ನೋಡಿಕೊಂಡು ಬರುವ ಪ್ರಮೇಯಗಳೇ ಹೆಚ್ಚು. ಮಂತ್ರಿಗಳ ಮನೆಯಲ್ಲೇ ಏನೂ ಸಾಮಾನ್ಯವಾಗಿ

ಆಗಿರುವುದಿಲ್ಲ" ಎಂದು ಹೇಳುತ್ತಾ ಚಹಾ ಮುಗಿಸಿ, ಉಡುಪನ್ನು ಹಾಕಿಕೊಂಡು, ಸಲಕರಣೆಗಳೊಂದಿಗೆ ಹೊರಟೆ.

ಮಂತ್ರಿಗಳ ಮನೆಗೇ ಮೋಟಾರು ಹೋಯಿತು. ಮಂತ್ರಿಗಳೇ ಹೇಳಿಳಿಸಿದ್ದರು. ಕೊಠಡಿಯಲ್ಲಿ ಕಾದಿದ್ದ ಅವರು "ನೀವು ವಿಶ್ರಾಂತಿ ತೆಗೆದು, ಕೊಳ್ಳುತ್ತಿದ್ದಿರೇನೋ. ಆದರೆ ತಕ್ಷಣ ಕಾಣಲೇಬೇಕಾಗಿತ್ತು. ಅದಕ್ಕೇ ತೊಂದರೆ ಕೊಡಬೇಕಾಯಿತು. ನನ್ನ ಕಚೇರೀಲಿ ಟೈಪಿಸ್ಟ್ ಒಬ್ಬಾತ ಇದ್ದಾನೆ. ಮೂರು ವರ್ಷದಿಂದ ನನ್ನೊಟ್ಟಿಗೆ ಇದಾನೆ! ಬಹಾಳ ಜಾಣ. ಎಲ್ಲರೊಂದಿಗೆ ಹೊಂದಿಕೊಂಡು ಹೋಗ್ತಾನೆ, ಅಜಾತಶತ್ರು ಅವ. ಕೆಲಸಾನ ಚುರುಕಾಗಿ ಮಾಡ್ತಾನೆ. ಕೆಲವು ದಿನಗಳಿಂದ ಈಚೆಗೆ ಹೇಗೋ ಇದಾನೆ. ಬೆಳಗ್ಗೆ ಬಂದು ಹದಿನೈದು ದಿನ ರಜ ಕೇಳಿದ. 'ಯಾತಕ್ಕೆ ರಜ?' ಎಂದು ಕೇಳಿದೆ. ಉತ್ತರ ಕೊಡದೆ ತೆಪ್ಪನೇ ಇದ್ದ. 'ನಿನಗೇನಾಗಿದೆ?' ಎಂದೆ. 'ಏನೂ ಇಲ್ಲ, ಸಾರ್. ಊಟ ಸರಿಯಾಗಿ ಸೇರುತ್ತಾ ಇಲ್ಲ. ಹುಟ್ಟೂರಿನ ಹತ್ತಿರ ಹೋಗಿ ಮದ್ದಿಡಾಗಿರಬಹುದು, ಅದನ್ನು ತೆಗೆಸಿಕೊಂಡು ಬರ್ತೀನಿ' ಎಂದ. 'ಅಯ್ಯೋ! ಹುಚ್ಚಪ್ಪ! ಈಗಿನ ಕಾಲದಲ್ಲಿ 'ಮದ್ದೀಡು' ಅಂತ ಯಾರಾದರೂ ನಂಬುತ್ತಾರೇನೋ? ನನ್ನ ಸ್ನೇಹಿತರೊಬ್ಬರು ಡಾಕ್ಟರು, ಇದ್ದಾರೆ. ಅವರ ಕೈಲಿ ಪರೀಕ್ಷೆಮಾಡಿಸಿ ಆಮೇಲೆ ಏನು ಮಾಡಬೇಕು ಅಂತ ತೀರ್ಮಾನಿಸುವಿಯಂತೆ' ಎಂದು ಹೇಳಿದೆ. 'ನಾಲ್ಕು ಗಂಟೆಗೆ ಬಾ. ಡಾಕ್ಟರನ್ನೂ ಕರೆಸಿರ್ತೀನಿ' ಎಂದು ಹೇಳಿಕಳಿಸಿದೆ. ಆಗಲೇ ನಿಮಗೂ ಹೇಳಿಕಳಿಸಬೇಕಾಗಿತ್ತು. ಆದರೆ ಯಾರ‍್ಯಾರೋ ಬಂದರು. ಮರೆತೇಹೋದೆ. ಮಧ್ಯಾಹ್ನ ಮೂರೂವರೆಗೆ ಯಾವುದೋ ಕಾಗದ ಬರೀಬೇಕು ಎಂದು ಹೊರಟಾಗ 'ಟೈಪಿಸ್ಟ್ ಬಂದಿಲ್ಲ. ಇವತ್ತು ರಜಾ, ನಾಲ್ಕಕ್ಕೆ ಬರಹೇಳಿತ್ತು' ಎಂದು ಜವಾನ ಹೇಳಿದ. ಆಗ ನೆನಪು ಬಂತು. ತಕ್ಷಣ ಗಾಡಿ ಕಳಿಸಿದೆ ನಿಮಗೆ" ಎಂದು ವಿವರಣೆಯನ್ನು ಕೊಟ್ಟರು.

"ಟೈಪಿಸ್ಟು ಬಂದಾರೆ' ಅಂತ ಬಾಗಿಲಲ್ಲಿ ಇಣಿಕಿದ ಜವಾನ ಹೇಳಿದ. "ಬರಹೇಳು" ಅಂತ ಮಂತ್ರಿಗಳಂದರು. ಟೈಪಿಸ್ಟು ಬಂದರು, ವಿನಯದಿಂದ ದೂರದಲ್ಲಿ ನಿಂತುಕೊಂಡರು.

೩೦ರ ಪ್ರಾಯದ ಆಳು. ಸಾಧಾರಣ ಮೈಕಟ್ಟು. ಹೇಳಿಕೊಳ್ಳುವಂತಹ ಕಾಯಿಲೆಗಳ ಚಿಹ್ನೆಗಳೇನೂ ಕಾಣಿಸಲಿಲ್ಲ.

"ನಿನ್ನ ಹೆಸರೇನಪ್ಪಾ! ಏನೇನಾಗುತ್ತೆ ? ಎಷ್ಟು ದಿವಸಗಳಿಂದ ?" ಎಂದು ಕೇಳಿದೆ.

"ಬೇಕಾದರೆ ನಿಮ್ಮ ದವಾಖಾನೆಗೆ ಕರೆದುಕೊಂಡು ಹೋಗಿ ಪರೀಕ್ಷೆ ಮಾಡಿ, ಡಾಕ್ಟರೇ! ೪–೩೦ರ ವೇಳೆಗೆ ಅಲ್ಲವೇ ನೀವು ಸಂಜೆ ದವಾಖಾನೇನ ತೆರೆಯೋದು" ಎಂದರು ಮಂತ್ರಿಗಳು.

ನನಗೂ ಹಾಗೇ ಅನ್ನಿಸುತ್ತಿತ್ತು. "ಇಲ್ಲಿ ಪರೀಕ್ಷೆಗೆ ಕೂತರೆ ಎಷ್ಟು ಹೊತ್ತಾಗುತ್ತೊ ? ಆಮೇಲೆ ಮಂತ್ರಿಗಳು 'ಚಹಾ ಕುಡಿದು ಹೋಗಿ' ಅಂತಾರೆ. ಚಹಾ ತರೋ ವೇಳೆಗೆ ಕತ್ತಲು ಬಿದ್ದಿರುತ್ತೆ" ಎಂದೆಲ್ಲಾ ಯೋಚಿಸುತ್ತಿದ್ದೆ. "ಹಾಗೇ ಮಾಡ್ತೀನಿ, ಅದೇ ಅನುಕೂಲ. ಪರೀಕ್ಷೆಗೆ ಬೇಕಾದ ಸಲಕರಣೆಗಳೆಲ್ಲವೂ ಅಲ್ಲಿರುತ್ತೆ" ಎಂದು ಹೇಳುತ್ತಾ ಎದ್ದು ನಿಂತೆ. "ಬಾಪ್ಪ! ..." ಎಂದು ಅವನ ಹೆಸರನ್ನು ಹೇಳಲು ಹೋಗಿ, ತಿಳಿಯದಿದ್ದ ಕಾರಣ ರಾಗ ಎಳೆದು ಸುಮ್ಮನಾದೆ.

"ಶಾಮರಾವ್ ಅಂತ ಸಾರ್ ನನ್ನ ಹೆಸರು. ಲಾಗಾಯ್ತಿನಿಂದ ನಿಮ್ಮನೇ ಬೀದೀಲೆ ಇದೇನೆ, ಸಾರ್. ಆದರೆ ನಿಮ್ಮ ತನಕ ಬರೋ ಅಂತಹ ಸ್ಥಿತಿ ಬಂದಿತ್ತಿಲ್ಲ ಸಾರ್" ಎಂದು ಹೇಳುತ್ತಾ ಅವನೇ ಮುಂದೆ ಬಾಗಿಲ ಕಡೆಗೆ ನಡೆದ.

ಮಂತ್ರಿಗಳಿಗೆ ನಮಸ್ತೇ ಹೇಳಿ, ನಾನೂ ಮೋಟಾರಿನತ್ತ ಹೋದೆ.

* * *

ದವಾಖಾನೆಗೆ ಹೋಗುತ್ತಿದ್ದಾಗ ಅವ ವರದಿಯನ್ನು ಒಪ್ಪಿಸಿದ: ಒಬ್ಬನೇ ಮಗ. ತಾಯಿಯೇ ಸಾಕಿದ್ದು. ಕಾಯಿಲೆ ಬಿದ್ದ ಜ್ಞಾಪಕವೇ ಇಲ್ಲ. ಬಿ.ಎ. ಪ್ಯಾಸು ಮಾಡಿದ ಮೇಲೆ, ಮೊದಲ ತರಗತಿ ಪಡೆದು ಮೂರು ಪದಕಗಳನ್ನು ಹೊಂದಿದ್ದರೂ, ಮುಂದೆ ಓದಲು ಸೌಲಭ್ಯವಿಲ್ಲದೆ, ಟೈಪ್ ರೈಟಿಂಗ್, ಷಾರ್ಟ್‌ಹ್ಯಾಂಡ್ ಕಲಿತು ಕೆಲಸಕ್ಕೆ ಸೇರಿಕೊಂಡಿದ್ದ. ಈಗ ಅವನು ಕೆಲಸ ಮಾಡುತ್ತಿರುವ ಕಚೇರಿಯಲ್ಲಿ ಬಹಳ ಸುಖವಾದ ಕೆಲಸ, ಮಂತ್ರಿಗಳಿಗೆ ಇವನಲ್ಲಿ ಪೂರ್ಣನಂಬಿಕೆ. ಸಣ್ಣ ತಮ್ಮನ್ನ ಕಂಡಹಾಗೆ ಆದರದಿಂದ

ಕಾಣ್ತಾರೆ. ಸಹೋದ್ಯೋಗಿಗಳೂ ಒಳ್ಳೆಯವರು. ಕಿರಿಕಿರಿಯೇನೂ ಇಲ್ಲ ಎಂದೆಲ್ಲವನ್ನೂ ಸರಳವಾಗಿ ತಿಳಿಸಿದ.

"ನಾನೇನೂ ಕೇಳಲೇ ಇಲ್ಲ ನಿಮ್ಮನ್ನ, ಶಾಮರಾವ್! ಆದರೆ ನೀವೇ ಸ್ವಯಂಪ್ರೇರಿತರಾಗಿ ರೋಗಿಗಳಿಂದ ನಾವು ತಿಳಿಯಬೇಕಾದ ಚರಿತ್ರೆಯನ್ನೆಲ್ಲಾ ಕ್ಷಣವಾಗಿ ಹೇಳಿಬಿಟ್ಟಿರಿ! ಆಶ್ಚರ್ಯವನ್ನುಂಟುಮಾಡುವ ಸಂಗತಿ ಇದು"ಲ್ಲೀ ಎಂದೆ.

"ಆಶ್ಚರ್ಯವೇನು ಬಂತು ಸಾರ್! ರೀಡರ್ಸ್ ಡೈಜೆಸ್ಟ್, ಕಸ್ತೂರಿ ಇಂತಹ ಮಾಸಪತ್ರಿಕೆಗಳನ್ನು ಓದುವ ಹವ್ಯಾಸ. ಇದೆಲ್ಲಾ ವಿಷಯಗಳನ್ನೂ ನೀವು ಕೇಳಿಯೇ ಕೇಳ್ತೀರಿ ಅಂತ ಗೊತ್ತು. ಅದಕ್ಕೇ ನಾನೇ ಹೇಳಿಬಿಟ್ಟೆ" ಎಂದ.

"ಮಂತ್ರಿಗಳಂದದ್ದು ದಿಟ, ಶಾಮರಾವ್! ಬಲು ಚೂಟಿ ನೀವು" ಎಂದೆ.

ಮೋಟಾರು ನಿಂತಿತು. ದವಾಖಾನೆಗೆ ಇಳಿದು ಹೋದೆವು. "ಚರಿತ್ರೆಯನ್ನೆಲ್ಲಾ ಹೇಳಿದೀಪ್ಪ. ಈಗ ನಿನಗೇನು ಆಗುತ್ತೆ? ಎಷ್ಟು ದಿನದಿಂದ? ಹೇಳು" ಎಂದೆ.

"ಹಸಿವೇನೋ ಆಗುತ್ತೆ, ಸಾರ್. ಕಲಸಿ ತುತ್ತನ್ನು ಬಾಯಿಗಿಟ್ಟು ಕೊಂಡರೆ, ವಾಕರಿಕೆ ಬಂದುಬಿಡುತ್ತೆ. ನುಂಗುಕ್ಕೇ ಆಗುಲ್ಲ. ಮನಸ್ಸೇ ಬೇಜಾರಾಗಿಬಿಡುತ್ತೆ. ಊಟ ಬಿಟ್ಟು ಎದ್ದುಬಿಡೋಹಾಗೆ ಆಗುತ್ತೆ. ಇದೆಲ್ಲಾ ಹದಿನೈದು ದಿನಗಳಿಂದು ಶುರುವಾಗಿದೆ. ಭಾನುವಾರವೊಂದು ಮಧ್ಯಾಹ್ನ, ನಮ್ಮ ಚಿಕ್ಕಪ್ಪನವರ ಮನೆಗೆ ಊಟಕ್ಕೆ ಹೋಗಿದ್ದೆ. ಹಿರಿಯರು ಬಂದಿದ್ದರು ಅವತ್ತು. ಅಲ್ಲಿ ಉಂಡು ಹಿಂತಿರುಗಿ ಬಂದಮೇಲೆ ರಾತ್ರಿ ಊಟ ಸೇರಲಿಲ್ಲ. 'ತಿಥಿಮನೆ ಊಟ ಮಾಡಿದ್ದೇನೆ. ಅದಕ್ಕೇ ವಾಕರಿಗೆ ಬರುತ್ತೆ' ಎಂದು ಅಮ್ಮನಿಗೆ ಹೇಳಿದೆ. 'ಅಂಥಾದ್ದೇನು ಮಾಡಿದ್ದರೋ? ವಡೆ ಶಿಕ್ಕೀನುಂಡೇ ಅಷ್ಟೇ ಅಲ್ಲವೇನೋ?' ಎಂದು ಅಮ್ಮ ಕೇಳಿದಳು. 'ಹೌದಮ್ಮಾ! ಆದರೆ ಎಂಟ್ಟಿಗೆ ಮಾಡಿ ಬಡಿಸಿದ್ದರು. ಬಲು ರುಚಿಯಾಗಿತ್ತು' ಎಂದೆ. 'ಹಾಗೇನೋ! ಅಂದರೆ ನಾಗಜ್ಜಿ ಹಳ್ಳಿಯಿಂದ ಬಂದಿದ್ದಳು ಅನ್ನು. ಅವಳೇ ಎಂಟ್ಟಿಗೇನ ಅಷ್ಟು ಚೆನ್ನಾಗಿ ಮಾಡೋಳು. ಅವಳು ಮಾಡಿದ ಅಡಿಗೇನ ತಿಂದೆಯೇನೋ!' ಎಂದು ರಾಗ ಎಳೆದಳು. 'ನಾಗಜ್ಜಿ ಮಾಡಿದ್ದರೆ ಅಡಿಗೇಗೆ ಏನು ಕೊರತೇಮ್ಮಾ!

ಎಂದೆ. 'ಏನೋಪ್ಪ! ಇವರು ಇದ್ದಾಗ,—ನಾಗಜ್ಜಿ ಮದ್ದಿಡೋದನ್ನ ಕಲಿತಿದ್ದಾಳೆ. ಯಾರೂ ಸಿಕ್ಕದೇ ಇದ್ದರೆ ಮನೆಯೋರಿಗೆ ಮದ್ದು ಇಡೋ ಹಾಗೆ ಆಗುತ್ತಂತೆ, ಅಂತಹವರಿಗೆ. ಆದ್ದರಿಂದ ಮಕ್ಕಳು ಮರೀನ ನಾಗಜ್ಜಿ ಇರೋ ಮನೆಗೆ ಕಳಿಸಬೇಡ. ನಮ್ಮನೆಗೇ ನಾಗಜ್ಜಿ ಬಂದು ತಿಂಡಿ ತೀರ್ಥ ತಂದು ಕೊಟ್ಟರೆ, ಮಕ್ಕಳಿಗೆ ಕೊಡಬೇಡ. ಯಾರೂ ತಿನ್ನೋದು ಬೇಡ. ತಿಪ್ಪೇಗೆ ಹಾಕಿಬಿಡು—ಎಂದು ಹೇಳ್ತಾ ಇದ್ದರಪ್ಪ. ಇದೆಲ್ಲಾ ೨೦–೨೫ ವರ್ಷಗಳ ಮಾತು. ಇನ್ನೂ ನಾಗಜ್ಜಿ ಆ ಚಟಾನ ಇಟ್ಟುಕೊಂಡಿದ್ದಾಳೆ ಅಂತ ಯಾರು ನಂಬ್ತಾರೆ!' ಎಂದಳು ಅಮ್ಮ. ಸ್ವಲ್ಪ ಶುಂಠಿ ತುರಿದುಹಾಕಿ, ಕರಿಬೇವಿನ ಸೊಪ್ಪು, ಕೊತ್ತುಂಬರಿ, ಇಂಗುಗಳನ್ನು ಹದನಾಗಿ ಹಾಕಿ ನೀರುಮಜ್ಜಿಗೆ ಮಾಡಿಕೊಟ್ಟಳು, ಅಮ್ಮ. ಅದನ್ನು ಕುಡಿದು ಮಲಗಿದೆ. ರಾತ್ರಿಯೆಲ್ಲಾ ಕೆಟ್ಟ ಕೆಟ್ಟ ಕನಸು ಬಿದ್ದು ಗಾಬರಿಯಿಂದ ಬೆವತು ಒಂದೆರಡು ಬಾರಿ ಎದ್ದಿದ್ದೆ. ಮಾರನೆಯ ದಿನದಿಂದಲೇ ವಾಕರಿಕೆ ಹೆಚ್ಚಾಯ್ತು. ಜುಲುಂ ಮಾಡಿಕೊಂಡು ಎರಡು ತುತ್ತು ನುಂಗಿದರೆ ಮರುಕ್ಷಣದಲ್ಲೇ ವಾಂತಿಯಾಗಿಬಿಡ್ತಿತ್ತು. 'ಎರಡು ದಿವಸ ಲಂಘನ ಹಾಕಿದರೆ ಸರಿಹೋಗುತ್ತೆ' ಎಂದು ಅದನ್ನು ಮಾಡಿದೆ. ಏನೂ ಪ್ರಯೋಜನವಾಗಲಿಲ್ಲ...ನಾಗಜ್ಜಿ ಮದ್ದು ಹಾಕಿದ್ದಾಳೆ ಕಣೋ, ಶಾಮು, ಎರಡು ದಿವಸ ರಜ ತೆಗೋ. ಹುಟ್ಟೂರಿಗೆ ಹೋಗಿ, ಹರಕೆ ತೀರಿಸಿ ಬರೋಣ, ಆಮೇಲೆ ಎಲ್ಲವೂ ಸರಿಹೋಗುತ್ತೆ' ಎಂದು ಅಮ್ಮ ಒತ್ತಾಯಪಡಿಸೋಕ್ಕೆ ಶುರು ಮಾಡಿದಳು...ನನಗಿನ್ನೇನೂ ಆಗುತ್ತಿಲ್ಲ, ಸಾರ್! ನಾಲಿಗೆ ರುಚಿಯಾಗಿದೆ. ಹೊಟ್ಟೇಲಿ ಸಂಕಟ ಗಿಂಕಟ ಏನೂ ಇಲ್ಲ. ಕಾಲಪ್ರವೃತ್ತಿ ಸರಿಯಾಗಿ ಆಗ್ತಾ ಇದೆ. ಕಾಫಿ, ಹಾಲು, ಗಂಜಿ, ಹಣ್ಣಿನ ರಸ, ಮಜ್ಜಿಗೆ ಕುಡಿದುಕೊಂಡೇ ಕಾಲ ಹಾಕ್ತಾ ಇದೀನಿ. ಡಾಕ್ಟರ ಹತ್ತಿರ ಹೋಗಿ ಹೀಗೆ ಹೀಗೆ ಅಂತ ಹೇಳಿದರೆ, 'ನಿನಗೇನಯ್ಯಾ ಧಾಡಿ ? ಏನೋ ಮನಸ್ಸಿನ ಕಳವಳ ನಿನಗೆ!' ಅಂತ ನಕ್ಕುಬಿಟ್ಟು ಕಳಿಸಿಬಿಡ್ತಾರೆ. 'ಮನೋರೋಗಕ್ಕೆ ಮದ್ದುಂಟೇನಯ್ಯ ?' ಎಂದು ಬಿಡ್ತಾರೆ. ಮದ್ದಿಟ್ಟ ರೋಗಕ್ಕೆ ಮನಸ್ಸಿಗೆ ಇಂಜಕ್ಷನ್ ಕೊಡೋಲ್ಲ ನೋಡಿ, ಸಾರ್...ಆದರೂ ನನಗೇನೂ ಮದ್ದೀಡಿನಲ್ಲಿ ನಂಬಿಕೆ ಇಲ್ಲ, ಸಾರ್. ಅಮ್ಮ ಹೇಳಿದ ಹಾಗೆ ಮಾಡೋಣ ಅಂತ ರಜೆ ಕೇಳಿದೆ ಬೆಳಗ್ಗೆ. ಮಂತ್ರಿಗಳು ನಿಮಗೆ ಹೇಳಿಕಳಿಸ್ತೀನಿ, ರಜೆ ಬೇಕಾದರೆ ಆಮೇಲೆ ತೆಗೆದುಕೊಳ್ಳುವಂತೆ, ಅಂದರು ಸಾರ್!" ಎಂದ ಶಾಮಣ್ಣ.

"ಮದ್ದೀಡಿನಲ್ಲಿ ನಾನು ನಂಬುತ್ತೀನಿ ಅಂತ ಹೇಳುಲ್ಲ, ಶಾಮರಾವ್. ಆದರೆ ಆ ವಿಷಯವನ್ನು ಅಭ್ಯಾಸಮಾಡಿ ಪ್ರಯೋಗ ನಡಸಿ, ಇದರ ಸತ್ಯ ಇಷ್ಟೇ ಎಂದು ಹೇಳಬೇಕಾದ್ದು ನಮ್ಮ ಕರ್ತವ್ಯ. ಇಂತಹ ಅಡುಂಗೂಳಜ್ಜಿ ಕತೇನ ನಂಬುಲ್ಲ ಎನ್ನುವುದು ಶಾಸ್ತ್ರೀಯ ಮಾರ್ಗವಲ್ಲ. ನನಗೆ ಏನೂ ಆ ವಿಷಯ ಗೊತ್ತಿಲ್ಲ ಅನ್ನುವುದು ನ್ಯಾಯ. ಕೆಲವು ರೋಗಿಗಳು ಸ್ವಲ್ಪ ದಿನ ಗಳು ಔಷಧಿ ತೆಗೆದುಕೊಂಡು ಗುಣಹೊಂದದೆ, ಮದ್ದೀಡು ತೆಗೆಸಿಕೊಂಡು ಬಂದ ಮೇಲೆ ಗುಣ ಹೊಂದಿದ್ದಾರೆ. ಇನ್ನೂ ಕೆಲವರಿಗೆ ಮದ್ದೀಡು ತೆಗೆದ ಮೇಲೆ ರೋಗ ಅತಿ ಉಲ್ಬಣವಾಗಿ ಪ್ರಾಣಕ್ಕೇ ಸಂಚಕಾರ ಬಂದಿದೆ. ಆದರೆ ಗುಣ ಹೊಂದಿದವರೆಲ್ಲರಿಗೂ ಮದ್ದೀಡಿನ ಚಿಹ್ನೆಗಳು ಏಕರೀತಿಯಾಗಿರುತ್ತವೆ. ನಾಲಿಗೆ ರುಚಿಯಾಗಿರುತ್ತದೆ. ಆದರೆ ಹಸಿವಿರುವುದಿಲ್ಲ. ತುತ್ತು ನುಂಗುವಾಗ ವಾಕರಿಕೆಯಾಗಲಿ, ಬೇಸರವಾಗಲಿ ಕಾಣಿಸುವುದಿಲ್ಲ. ಉಂಡ ಮೇಲೆ ಹತ್ತು ಹದಿನೈದು ನಿಮಿಷ ಎಲ್ಲವೂ ಚೆನ್ನಾಗಿರುತ್ತದೆ. ಆಮೇಲೆ ಸಂಕಟ ಪ್ರಾರಂಭ ವಾಗುತ್ತದೆ. ೩–೪ ತಾಸುಗಳು ಸಂಕಟ ಶೂಲೆ ಎಲ್ಲವೂ ಕಾಡುತ್ತದೆ. ವಾಂತಿ ಯಾಗಿಯೋ ಅಥವಾ ಎರಡು ಮೂರು ಸಾರಿ ಪ್ರವೃತ್ತಿಯಾಗಿಯೊ ಬಿಟ್ಟರೆ, ಸ್ವಲ್ಪ ಸಮಾಧಾನ ಕಾಣುತ್ತದೆ. ಆದರೆ ತಿರುಗಿ ತಿನ್ನಲು ಧೈರ್ಯವೇ ಬರುವುದಿಲ್ಲ. ತೂಕವು ಎರಡು ಮೂರು ವಾರಗಳಲ್ಲೇ ಕಡಿಮೆಯಾಗಲು ಶುರುವಾಗುತ್ತದೆ. ಆದರೆ ನಿನ್ನ ಚಿಹ್ನೆಗಳನ್ನು ಕೇಳಿದ ಮೇಲೆ, 'ಇದು ಮದ್ದೀಡಲ್ಲ. ಗಂಟಲನ್ನು ದಾಟುವುದಕ್ಕೇ ತುತ್ತಿಗೆ ಅಡಚಣೆಯಾದರೆ, ಇನ್ನೇ ನಾದರೂ ಕಾರಣ ಇರಬೇಕು' ಅನ್ನಿಸುತ್ತೆ. ಈಗ ಪರೀಕ್ಷೆ ಮಾಡೋಣ" ಎಂದು ಪ್ರಾರಂಭಿಸಿದೆ.

ನಾಲಿಗೆ ಚೆನ್ನಾಗಿತ್ತು. ಹಲ್ಲುಗಳೆಲ್ಲವೂ ಸ್ವಚ್ಛವಾಗಿದ್ದುವು. ಗಂಟಲಿ ನಲ್ಲಿ ಯಾವ ತರಹ ಬೇನೆಯೂ ಕಾಣಿಸಲಿಲ್ಲ. ಗಂಟಲಿನ ಕೆಳಗೆ ಗೆಡ್ಡೆಗಳಾವುದೂ ಇದ್ದಿಲ್ಲ. ನೀರಾಗಿರುವ ಪದಾರ್ಥಗಳನ್ನು ನುಂಗಲು ಕಷ್ಟವಿಲ್ಲ ಅಂತಾನೆ. ಗಟ್ಟಿಯಾದ ವಸ್ತುಗಳನ್ನು ನುಂಗಲು ಹೋದರೆ ವಾಕರಿಕೆ ಎನ್ನುತ್ತಾನೆ. ನುಂಗುವ ಅಂಗಗಳಲ್ಲಿ ತಪ್ಪಿಲ್ಲ. ನುಂಗುವುದು, ವಾಕರಿಕೆ, ಈ ಕಾರ್ಯಕ್ರಮ

ಗಳನ್ನು ಮೆದುಳು ಮಾಡಿಸುವಾಗ ಯಾವುದೋ ಒಂದು ನೆನಪು ಶಾಮಿಲಾಗಿ ಬಂದು ಹೀಗೆ ಮಾಡಿರಬಹುದು—ಎನ್ನಿಸಿತು.

ದೇಹದ ಇತರ ಪರೀಕ್ಷೆಗಳನ್ನು ವಿಧಿವತ್ತಾಗಿ ಮಾಡಿದೆ. ಯಾವ ಅಂಗ ದಲ್ಲಿಯೂ ಯಾವ ತರಹ ದೋಷವೂ ಕಂಡುಬರಲಿಲ್ಲ.

ರಕ್ತಕಣಗಳ ಸಂಖ್ಯೆಯಲ್ಲಾಗಲಿ, ಮೂತ್ರದಲ್ಲಿಯಾಗಲಿ ಯಾವ ಅನಾ ರೋಗ್ಯದ ಸೂಚನೆಗಳೂ ಇದ್ದಿಲ್ಲ.

"ದೇಹದ ಪರಿಸ್ಥಿತಿ ಅಚ್ಚುಕಟ್ಟಾಗಿದೆ, ಶಾಮರಾವ್. ನೀವು ಊಹಿಸಿ ದಂತೆ ಇದಕ್ಕೆ ಮಾನಸಿಕ ಕಳವಳವೋ, ನೆನಪೋ, ಏನೋ ಒಂದು ದೆವ್ವ ಅನ್ನಿ, ಅದು ಕಾರಣವಾಗಿರಲೇ ಬೇಕು. ಆ ದೆವ್ವಾನ ಅಷ್ಟು ಸುಲಭವಾಗಿ ಓಡಿಸುವು ದಕ್ಕೆ ಸಾಧ್ಯವಿಲ್ಲ. ನಿಮಗೇ ಗೊತ್ತಿದೆ ಅಲ್ಲವೇ ? ಪೂಜೆ ಹಾಕಬೇಕು. ಮಾಟ ಮಾಡಿಸಬೇಕು ; ಆಮೇಲೆ ದೆವ್ವ ಬೇರೆ ಮನೆಗೆ ಹೊರಟುಹೋಗುತ್ತೆ. ನಿಮ್ಮ ಮನಸ್ಸಿನ ಕಳವಳ ಮಾಯವಾಗುತ್ತೆ. ನಿಮ್ಮ ದೇಹಸ್ಥಿತಿ ಸುಧಾರಿಸುತ್ತೆ... ಮನೋರೋಗಕ್ಕೆ ಮದ್ದಿಲ್ಲದೆ ಇರಬಹುದು. ಆದರೆ ಮದ್ದಿಲ್ಲದೆ ಗುಣಪಡಿಸು ವುದಕ್ಕೆ ಆಗುವುದಿಲ್ಲವೇ ? ಹಿಂದಿನ ಕಾಲದಲ್ಲಿ ಕಾಯಿಲೆ ಬಿದ್ದವರಲ್ಲಿ ಕೆಲವ ರಾದರೂ ಔಷಧಿಗಳಿಲ್ಲದೆ ಉಪಚಾರದಿಂದಲೇ ಗುಣವನ್ನು ಹೊಂದುತ್ತಿರಲಿಲ್ಲವೆ? ಅದೇ ರೀತಿ ಇಂತಹ ಮನಸ್ಸಿನ ಕಳವಳವನ್ನು ಉಪಚಾರದಿಂದ ಸರಿಮಾಡ ಬಹುದು ಈ ಉಪಚಾರದಲ್ಲಿ ಅನುಕಂಪ ಮುಖ್ಯವಾದದ್ದು, ಶ್ರದ್ಧೆ ಅವಶ್ಯಕ ವಾದದ್ದು. ವೈದ್ಯನು ಈ ರೀತಿ ಉಪಚಾರ ಮಾಡಿದರೆ ಮನೋರೋಗದ ಚಿಕಿತ್ಸೆಯಾದಂತೆ ! ಅಲ್ಲವೆ ? ... ನಿಮ್ಮ ಮನಸ್ಸಿನಲ್ಲಿ ಹುದುಗಿರೋ ದೆವ್ವ ಯಾವುದು, ಅದು ಯಾವ ಗೋತ್ರದ್ದು, ಎನ್ನುವುದನ್ನು ಕಂಡುಹಿಡಿಯುವುದಕ್ಕೆ ಪ್ರಯತ್ನ ಮಾಡೋಣ" ಎಂದೆ.

ಶಾಮರಾವ್ ಬಲು ಶಹಣೆ. ಹೇಳಿದ್ದನ್ನು ಗ್ರಹಿಸಿದ್ದಾನೆ ಅಂತ ಧೈರ್ಯ.

"ಹೌದು, ಡಾಕ್ಟರೇ ! ನೀವು ಹೇಳುವುದು ಸರಿ. ಆದರೆ ಇಂತಹ ದೆವ್ವದ ಸುಳುವನ್ನು ಕಂಡುಹಿಡಿಯಲು ಯತ್ನಮಾಡಿ, ಪ್ರಯತ್ನಮಾಡಿ, ಮರಳಿ ಯತ್ನವ ಮಾಡಿ ಮುಗಿಸುವ ವೇಳೆಗೆ ತಿಂಗಳಾನುಗಟ್ಟಲೆ ಹಿಡಿಯಬಹುದು

ಅಲ್ಲವೆ ? ಅದಕ್ಕೆ ಮುಂಚೆ ಮದ್ದೀಡು ತೆಗೆಸಿಕೊಂಡೇ ಬಂದುಬಿಟ್ಟರೆ ?'' ಎಂದು ಕೇಳಿದೆ,

"ನ್ಯಾಯ, ನೀನು ಆ ರೀತಿ ಕೇಳೋದು. ಆದರೆ ಮದ್ದೀಡಿನ ಚಿಹ್ನೆಗಳೇ ಇಲ್ಲವಲ್ಲ ನಿನಗೆ ? ಮದ್ದೀಡಿನ ದೆವ್ವ ನಿನ್ನ ಮನಸ್ಸನ್ನು ಹೊಕ್ಕು ಹೀಗೆ ಮಾಡಿದೆ ಎಂದು ಸುಲಭವಾಗಿ ನಂಬುಕ್ಕೆ ಆಗುಲ್ಲ. ಮಂದಬುದ್ಧಿಯವರಿಗೆ ಅಂತಹದು ಸಾಧ್ಯವಾಗಬಹುದು. ನಿನಗಲ್ಲ...ಎರಡನೆಯದು : ಈ ಯತ್ನಗಳನ್ನು ತಿಂಗಳಾನುಗಟ್ಟಲೆ ವರ್ಷಾನುಗಟ್ಟಲೆ ನಡಸಬೇಕಾಗಬಹುದು ದಿಟ. ಆದರೆ ಎಷ್ಟೋ ವೇಳೆ, ಅನಿರೀಕ್ಷಿತವಾಗಿ, ದೆವ್ವದ ಜಾಡು ಕಂಡುಬರುವುದೂ ಉಂಟು. ದೈವಸಹಾಯದಿಂದ ಎಂದು ಬೇಕಾದರೂ ಹೇಳಬಹುದು. ಹಾಗಾದಾಗ ಕೆಲವೇ ದಿನಗಳಲ್ಲಿ 'ದೆವ್ವ'ವನ್ನು ಗುರ್ತಿಸಿ, ತಿಳಿವಿಗೆ ಅಧಿದೇವತೆಯಾದ ಗಾಯತ್ರಿಯ ಧೀಶಕ್ತಿಯನ್ನು ತೋರಿಸಿ ಓಡಿಸಬಹುದು. 'ಅಜಾತಶತ್ರು' ಎಂದು ಮಂತ್ರಿಗಳು ನಿನ್ನನ್ನು ಹೊಗಳಿದರು. ದೈವಸಹಾಯದಿಂದ ಅಜಾತಶತ್ರುವಿಗೆ ಬೇಗ ಗುಣವಾಗಬಹುದಲ್ಲವೆ ?'' ಎಂದೆ.

"ಸಾಹೇಬರಿಗೆ ನನ್ನ ಮೇಲೆ ಬಹಳ ಅಭಿಮಾನ ಸಾರ್ ! ಅವರ ಅಭಿಮಾನದಿಂದಲೇ ಬೇಗ 'ದೆವ್ವ' ಸಿಗಬೇಕು ! ಅವರ ಅಭಿಮಾನಕ್ಕೆ ಸರಿತೂಗುವ ಯೋಗ್ಯತೆಯನ್ನು ದೇವರು ನನಗೆ ಕರುಣಿಸಬೇಕು'' ಎಂದ ಶಾಮಣ್ಣ.

"ಮಗುವಿನ ಮನಸ್ಸು ನಿನಗಿದೆ : ಒಳ್ಳೆಯ ಸಂಸ್ಕೃತಿಯನ್ನೀಯುವ ವಿದ್ಯಾಭ್ಯಾಸವಾಗಿದೆ : ಚಿಕ್ಕ ವಯಸ್ಸಿನಲ್ಲೇ ಬಾಳಿನ ಕಹಿ ಸಿಹಿ ಅನುಭವಗಳನ್ನು ಕಂಡಿದ್ದೀಯೆ : ಸುಲಭವಾಗಿ 'ದೆವ್ವ'ವನ್ನು ಕಂಡುಹಿಡಿಯಬಹುದು'' ಎಂದು ಹೇಳಿ, ಆಸೆ ಹುಟ್ಟಿಸಿ, ಪರೀಕ್ಷೆಯನ್ನು ಮುಂದುವರಿಸಿದೆ. ನನ್ನ ಅನುಮಾನಗಳನ್ನು ಪರಿಹರಿಸಿಕೊಳ್ಳಲು ಕೇಳಲಾರಂಭಿಸಿದೆ—

"ನಿಮ್ಮ ಓರಿಯರಲ್ಲಿ ಯಾರಿಗಾದರೂ ಗಂಟಲಿನಲ್ಲಿ ಕಾನ್ಸರ್ ಬಂದಿತ್ತೆ ?''

"ಇಲ್ಲ ಸಾರ್ !''

"ಪರಿಚಯವಿದ್ದವರಾರಿಗಾದರೂ ಗಂಟಲು ಹುಣ್ಣು ಬಂದು, ಉಣ್ಣಲಾರದೆ, ಜೊಲ್ಲು ಸುರಿಸಿಕೊಂಡು ನರಳಿದ್ದನ್ನು ನೋಡಿದ್ದ್ಯಾ ? ಅದೂ ನೀನು ಹುಡುಗನಾಗಿದ್ದಾಗ ?''

"ಇಲ್ಲ ಸಾರ್ ?''

"ಊಟಕ್ಕೆ ಕೂತಾಗ ಯಾವುದಾದರೂ ಬೀಭತ್ಸವಾದ ನೆನಪು ಮರು ಕಳಿಸಿಕೊಂಡು ಬರುವುದುಂಟೆ ?"

"ಒಂದೂ ಇಲ್ಲ ಸಾರ್ !"

"ಕನಸಿನಲ್ಲಿ ಮೇಲೆಮೇಲೆ ಯಾವುದಾದರೂ ಘಟನೆಗಳು ಬರುತ್ತೆ ?"

"ಇಲ್ಲವಲ್ಲ ಸಾರ್ ! ತಿಥಿಊಟವನ್ನು ಮಾಡಿಕೊಂಡು ಬಂದ ರಾತ್ರಿ ಭಯ ತರಿಸುವ ಕನಸುಗಳು ಬಿದ್ದಿತ್ತು. ಆದರೆ ಎಲ್ಲಾ ಅಸ್ಪಷ್ಟ. ನನಗೆ ಸಾಮಾನ್ಯವಾಗಿ ಸುಖನಿದ್ರೆ ಬರುತ್ತೆ. ಸಾರ್ !"

ಅವನ ಮನಸ್ಸಿನಲ್ಲಿರಬಹುದು ಎಂದು ನನಗನಿಸಿದ ಅನುಮಾನಗಳೆಲ್ಲ ವನ್ನೂ ಪ್ರತ್ಯಕ್ಷವಾಗಿ ಪ್ರಶ್ನಿಸಿ ಉತ್ತರಗಳನ್ನು ಪಡೆದಿದ್ದೆ. ಆದರೆ ಸಹಾಯ ಒದಗಿಸುವ ಉತ್ತರಗಳು ಬಂದಿರಲಿಲ್ಲ.

"ಬಿದ್ದ ಕನಸುಗಳನ್ನು ಜ್ಞಾಪಿಸಿಕೊಂಡು ಬರೆದಿಡು. ಪ್ರಯೋಜನಕ್ಕೆ ಬರಬಹುದು ಮುಂದೆ" ಎಂದು ಹೇಳಿ, "ಈ ಔಷಧಿಯನ್ನು ಊಟಕ್ಕೆ ಮುಂಚೆ ತೆಗೆದುಕೊ. ಸ್ವಲ್ಪ ಸಹಾಯವಾಗಬಹುದು" ಎಂದು ಜೀರ್ಣಕಾರಿ ಔಷಧಿ ಯನ್ನು ಕೊಟ್ಟು ಕಳಿಸಿದೆ.

ಹೀಗೆ ಹದಿನೈದು ದಿನಗಳಾದುವು. ಅಷ್ಟೂ ದಿನಗಳು ಹೆಣಗಾಡಿದೆ. ಏನೇನೋ ಔಷಧಿಗಳನ್ನು ಪ್ರಯೋಗಿಸಿದೆ. ಏನೂ ಪ್ರಯೋಜನವಾಗಲಿಲ್ಲ. "ಕೆಲಸಕ್ಕೆ ಹೋಗುತ್ತಾ ಇರು. ಮನೆಯಲ್ಲಿ ಕೂತುಕೊಂಡು ಇದೇ ರೋಗದ ಚಿಂತನೆಮಾಡಿದರೆ ಒಳ್ಳೆಯದಲ್ಲ" ಎಂದು ಕೆಲಸಕ್ಕೂ ಕಳಿಸುತ್ತಿದ್ದೆ.

ಕನಸುಗಳ ವರದಿ ಮಾಡಿದಾಗ ಏನಾದರೂ ಸುಳಿವು ಸಿಕ್ಕುತ್ತದೆಯೋ ನೋಡೋಣ ಎಂದು ಆಸೆಯನ್ನು ಉಳಿಸಿಕೊಂಡಿದ್ದೆ.

* * *

ಭಾನುವಾರ ಬೆಳಗಿನ ಝಾವ ಮನೆಯ ಬಾಗಿಲಲ್ಲಿ 'ಡಾಕ್ಟರ್ ಸಾಹೇಬರೇ ! ಡಾಕ್ಟರ್ ಸಾಹೇಬರೇ !' ಎಂದು ಯಾರೋ ಕೂಗಿಕೊಳ್ಳುತ್ತಿ ದ್ದರು. ಎದ್ದು, ದೀಪ ಹಚ್ಚಿ, ಹೊರಬಾಗಿಲು ತೆಗೆದಾಗ ತೊಟ್ಟಿಯ ಗಡಿಯಾರ ಆರು ಗಂಟೆ ಹೊಡೆಯುತ್ತಿತ್ತು. ಹೊರಗೆ ಬುಡುಬುಡುಕೆಯವ ನೊಬ್ಬ ಮಗುವನ್ನೆತ್ತಿಕೊಂಡಿದ್ದ ಹೆಂಡತಿಯೊಡನೆ ನಿಂತಿದ್ದ.

"ಡಾಕ್ಟರ್ ಸಾಹೇಬರೇ ! ಮಗೂಗೆ ಮೂರು ದಿನದಿಂದ ಜ್ವರ ಬಂದಿದೆ. ಕೈಮದ್ದು ಮಾಡಿದ್ವಿ, ನಿನ್ನೆ ರಾತ್ರಿಯಿಂದ ಹೇಗೋ ಉಸಿರು ಬಿಡ್ತಾಇದೆ. 'ರಾತ್ರಿಯಾಗಿದೆ. ಯಾಕೆ ಡಾಕ್ಟರು ಸಾಹೇಬರಿಗೆ ತೊಂದರೆ ಕೊಡೋದು ? ಬೆಳಗಿನ ಝಾವ ಹೋಗೋಣ' ಅಂತ ಕಾದಿದ್ದೆವು. ಚೆಂದಾಗಿ ನೋಡಿ, ಡಾಕ್ಟರೇ, ಇನ್ಜೆಕ್ಷನ್ ಬೇಕಾದರೂ ಕೊಡಿ" ಎಂದು ಬುಡುಬುಡಿಕೆಯವ ಗೋಗರೆಯುತ್ತ ಹೇಳಿದ.

ಮಗುವನ್ನು ಪರೀಕ್ಷೆಮಾಡಿದೆ. ಎರಡೂ ಶ್ವಾಸಕೋಶಗಳಲ್ಲಿ ಕಫ ಕಟ್ಟಿಕೊಂಡಿತ್ತು. ತುಟಿ ನಾಲಿಗೆಗಳು ನೀಲಿಗಟ್ಟಿದ್ದುವು. ಇನ್ನೇನು, ಸ್ವಲ್ಪ ಹೊತ್ತಿನಲ್ಲಿ ಇದರ ಆಟ ಮುಗಿಯುತ್ತೆ, ಎನ್ನಿಸಿತು. ಸಾಯುವ ಮಗುವಿಗೆ ಇನ್ಜೆಕ್ಷನ್ನನ್ನು ಕೊಟ್ಟು ಅದೃಷ್ಟಪರೀಕ್ಷೆ ಮಾಡೋಣ ಎಂದರೆ––ಮಗುವಿನ ತಂದೆತಾಯಿಗಳು ಅನಕ್ಷರಸ್ಥರು, ಹಳ್ಳಿಯ ಮೂಢಪಂಗಡದವರು. 'ಇನ್ಜೆಕ್ಷನ್ನನ್ನು ಕೊಟ್ಟು ಕೊಂದುಬಿಟ್ಟರು' ಎದು ಮನೆಯ ಮುಂದೆ ಬಡಿದುಕೊಳ್ಳುಕ್ಕೆ ಶುರುಮಾಡುವ ಸಂಭವವೂ ಉಂಟು. ಬೆಳಗ್ಗೆ ಏಳುತ್ತಿದ್ದ ಹಾಗೇ ಈ ತಾಪತ್ರಯ ಏಕೆ ಎಂದು, ಮುಂಜಾಗ್ರತಾಕ್ರಮದ ಮನಸ್ಸಿನಿಂದ, ಅವರ ಮೇಲೆ ರೇಗಿದೆ: ಕೊನೆಗಾಲಕ್ಕೆ ಕರೆದುಕೊಂಡು ಬಂದರೆ ಏನು ಮಾಡುಕ್ಕಾಗುತ್ತೆ ? ಡಬ್ಬಲ್ ನ್ಯೂಮೋನಿಯಾ ಆಗಿಹೋಗಿದೆ. ಬೇಕಾದರೆ ಆಸ್ಪತ್ರೆಗೆ ಕರೆದುಕೊಂಡು ಹೋಗಿ. ಇಲ್ಲದಿದ್ದರೆ ಮನೆಗೆ ಕರೆದುಕೊಂಡು ಹೋಗಿ" ಎಂದೆ.

"ಬದುಕೋಕಿಲ್ವಾ ನನ್ನ ಮಗು ?" ಎಂದು, ಕರುಳು ಕುಯ್ಯುವ ದನಿಯಲ್ಲಿ ತಾಯಿ ಕೇಳಿದಳು.

ಏನುತ್ತರ ಹೇಳಲೂ ಬಾಯಿ ಬರಲಿಲ್ಲ.

"ಮಗ ಹೇಗೆ ಬದುಕತ್ತೆ ? ನಿನ್ನೆ ಸಂಜೆ ಹೇಳಲಿಲ್ವಾ, ನಿನಗೆ ?" ಎಂದು ಹೆಂಡತಿಗೆ ಹೇಳಿ, ಅನಂತರ ನನ್ನ ಕಡೆ ತಿರುಗಿ, ಬಡುಬುಡುಕೆಯವನು "ಸಾಹೇಬ್ರು ! ಒಂದು ತಿಂಗಳಿಂದ ಊರ ಬೀದಿಗಳಲ್ಲಿ ಬೆಳಗಿನ ಝಾಮ ಭಿಕ್ಷಕ್ಕೆ ಹೋಗ್ತಿದ್ದೀನಿ. ಐದು ಗಂಟೆಯ ಹೊತ್ತಿಗೆ ಒಂದು ಗೂಬೆ ಬಂದು ಒಂದಲ್ಲ ಒಂದು ಮನೆಯ ಮೇಲೆ ಕೂತು ಗುಗ್ಗೂ ಗುಗ್ಗೂ ಅಂತ ಗುಟುಕರಿಸುತ್ತಿತ್ತು. ಬೆಳಗ್ಗೆ ಎದ್ದು ಯಾವ ಬೀದೀಲಿ ಹೊರಟರೂ ಆ ಬೀದಿಯ ಮೊದಲ ಮನೆಯ ಮೇಲೇ ಗೂಬೆ ಕೂತು ಬಾ ಅಂತ ಕರೆದಹಾಗೆ ಆಗ್ತಿತ್ತು. ಎಷ್ಟೋ ಬಾರಿ

ಕವಣೆ ಬೀಸಿ ಅದನ್ನು ಹೊಡೆಯುವುದಕ್ಕೆ ಪ್ರಯತ್ನಿಸಿದ್ದೆ. ನಿನ್ನೆ ಬೆಳಗಿನ ಝಾಮು ಕವಣೆಗೆ ಸಿಕ್ಕಿ, ಹಾಳುಗೂಬೆ ಕೆಳಕ್ಕೆ ಬಿತ್ತು. ಬಡಿದು ಕೊಂದುಬಿಟ್ಟೆ. ಅದು ಸತ್ತಾಗಲೇ ಮಗೂಗೆ ಜ್ವರ ಬಂತು. ಮಗು ಬದುಕುಲ್ಲ ಅಂತ ನನಗೆ ಆಗಲೇ ತಿಳಿದುಹೋಯ್ತು" ಎಂದ.

"ಡಾಕ್ಟರ ಸಾಹೇಬ್ರ ಮನೆ ಮುಂದೆ ಯಾಕ ಮಗು ಸಾಯಬೇಕು ? ಬಾ. ಹಟ್ಟಿಗೆ ಹೋಗೋಣ" ಅಂತ ಆಕೆಯನ್ನೂ ಕರೆದುಕೊಂಡು. ಮಗು ವನ್ನು ತಾನೆತ್ತಿಕೊಂಡು ಹೊರಟುಹೋದ.

* * *

ವರಾಂಡಾದಿಂದ ಮನೆಯೊಳಕ್ಕೆ ಹೋಗುವ ಹೊತ್ತಿಗೆ, ಬಚ್ಚಲ ಮನೆ ಒಲೆ ಹಚ್ಚಿ, ಅಡಿಗೆಮನೆಯ ಸ್ಟೌವ್ ಹಚ್ಚಿ. ಕಾಫೀಗೆ ನೀರಿಟ್ಟು ತೊಟ್ಟಿಗೆ ಮನೆಯೊಡತಿಯು ಬಂದಳು.

"ಏನಂದ್ರೆ ಅದು ವರಾಂಡದಲ್ಲಿ ? ಗೊರ್ ಗೊರ್ ಶಬ್ದ ಕೇಳಿಸಿಬಂತು. ಯಾರು ಬಂದಿದ್ದರು ? ಗೂರಲು ಬಂದಿತ್ತೇ ?" ಎಂದು ಕೇಳಿದಳು.

ವಿಷಯವನ್ನೆಲ್ಲಾ ಹೇಳಿದೆ. ಮಾಡಬಹುದಾದ್ದನ್ನೂ ಮಾಡಲು ನಮ್ಮ ಸಮಾಜದಲ್ಲಿ ಹೇಗೆ ಕಷ್ಟ ಎಂದು ಬೇಸರವನ್ನು ತೋಡಿಕೊಂಡೆ.

"ಮಣೇಗಾರ್ರ ಮನೆಯೋರು ಮೊನ್ನೆ ಹೇಳಿದರು ಅಂದ್ರೆ : ಯಾವುದೋ ಗೂಬೆ ಬಂದು ಅವರ ಮನೇ ಮೇಲೆ ಗುಗ್ಗೂ ಗುಗ್ಗೂ ಅಂತ ಕೂಗಿತಂತೆ. ಅದಕ್ಕೋಸ್ಕರ ಶಾಂತಿಯನ್ನು ಮಾಡಿಸಿದೆವು, ಅಂದರು...ಎಂಟು ದಿನದ ಹಿಂದೆ ಮೇಡಂ ನಂಜಮ್ಮ 'ನಿನ್ನೆ ರಾತ್ರಿ ನಮ್ಮನೆ ಮೇಲೆ ಗೂಬೆ ಕೂತು ಗುಟುಕರಿಸಿತ್ತು. ಮೂರು ರಾತ್ರಿ ಪಕ್ಕಿಬಿಕ್ಕಿಯವರನ್ನು ಕರಸಿ, ಗೂಬೇನ ಹೊಡೀರಿ ಎಂದೆ. ಬಹುಮಾನದ ಆಸೆಗೆ ಅವರೂ ಪ್ರಯಾಸಪಟ್ಟರು. ಆದರೆ ಆ ಹಾಳುಗೂಬೆ ಸಿಗಲಿಲ್ಲ.' ಎಂದು ಸಮಾಜದಲ್ಲಿ ಹೇಳಿದ್ದರು. ಯಾವತ್ತು ನಮ್ಮನೆ ಮೇಲೆ ಬಂದು ಕೂರುತ್ತೋ ಎಂದು ಹೆದರಿದ್ದೆ ಸದ್ಯ ! ಹಾಳು ಗೂಬೆ ಸತ್ತೇ ಹೋಯಿತು. ಕೇರಿಯೋರೆಲ್ಲಾ ಇನ್ನು ಹಾಯಾಗಿರಬಹುದು" ಎಂದು ಹಾಯಸ್ ಉಸಿರೆಳೆದಳು.

ಕೂಡಲೆ "ಬೀಡುಬುಡಿಕೆಯವರ ಮಗು ವರಾಂಡದಲ್ಲೇ ಸತ್ತು ಹೋಯಿತೇ ಅಂದ್ರೆ ? ಪುರೋಹಿತರನ್ನು ಕರಸಿ ಏನು ಮಾಡಬೇಕು ಕೇಳೋಣ" ಎಂದು ಕಾತರದಿಂದ ಕೇಳಿದಳು.

"ನಮ್ಮ ವರಾಂಡದಲ್ಲಿ ಮಗು ಸಾಯಲಿಲ್ಲ ಕಣೆ. ಬದುಕಿದ್ದಾಗಲೇ ಎತ್ತಿಕೊಂಡು ಹೋದರು. ನೀರು ಕಾದಿದ್ದರೆ ಬೇಗ ಒಂದು ಬಟ್ಟಲು ಕಾಫಿ ಮಾಡಿ ತೆಗೆದುಕೊಂಡು ಬಾ. ಅದನ್ನು ಕುಡಿದು ಬೆಳಗಿನ ತಾಪತ್ರಯಾನ ಶುರು ಮಾಡ್ತೀನಿ" ಎಂದೆ.

"ಸುಳ್ಳು ಹೇಳ್ತಾ ಇಲ್ಲವಲ್ಲ ! ಮಗು ಇಲ್ಲೇ ಸತ್ತಿದ್ದರೆ. ಮಾಡಿಸ ಬೇಕಾದ್ದನ್ನು ಕಷ್ಟವಾದರೂ ಮಾಡಿಸೋಣ ಅಂದ್ರೆ. ಗೂಬೆ ಸತ್ತು ಹೋಯ್ತು ಅಂತ ಇದ್ದರೆ, ಈ ಪೀಡೆ ಎಲ್ಲಾದರೂ ಕಾಡುಕ್ಕೆ ಶುರುಮಾಡಿದರೆ ಹೇಗೆ ?" ಎಂದಳು.

"ಸುಳ್ಳಲ್ಲ ಕಣೆ ! ನನ್ನಾಣೆಗೂ ಸುಳ್ಳಲ್ಲ" ಎಂದಾಗಲೇ ಕಾಫಿ ಮಾಡುಕ್ಕೆ ಆಕೆ ಹೋಗಿದ್ದು.

ಕೊಠಡಿಗೆ ಹೋಗಿ ಕಾಫಿಗಾಗಿ ಕಾದು ಕುಳಿತೆ. ಆ ಬೆಳಗಿನ ಘಟನೆಗಳನ್ನು ಮನಸ್ಸಿನಲ್ಲಿ ಮೆಲುಕುಹಾಕುತ್ತಿದ್ದೆ. ಏನೇನೋ ಯೋಚನೆಗಳು ಮಂದೆ ಮಂದೆಯಾಗಿ ಬಂದು ಹೋಗುತ್ತಿದ್ದುವು.

'ಅರೆ !' ಅಂತ ಹಠಾತ್ತಾಗಿ ಅನ್ನುವ ಹಾಗಾಯ್ತು. ಹೊಳೆದ ಒಂದು ಆಲೋಚನೆ ಮನಸ್ಸನ್ನು ಹಿಡಿದು ನಿಲ್ಲಿಸಿತ್ತು.

ಆ ಗೂಬೆ ಏನಾದರೂ ಪಾತಕ್ಕನ ಮನೇಮೇಲೆ ತಿಥಿಊಟದ ಭಾನುವಾರ ರಾತ್ರಿ ಕೂತು ಗುಗ್ಗೂ ಅಂತ ಕೂಗಿದ್ದಿರಬಹುದೇ ? ಅರೆನಿದ್ರೆಯಲ್ಲಿದ್ದ, ಪಿತ್ತ ಕೆರಳಿದ್ದ ಶಾಮಣ್ಣನಿಗೆ ಅಸ್ಪಷ್ಟವಾಗಿ ಇದು ಕೇಳಿಸಿರಬಹುದೆ ? ಕೇಳಿಸಿ, ಮನಸ್ಸಿನ ಒಳಪದರಗಳಲ್ಲಿ ದೆವ್ವದಂತೆ ಹುದುಗಿಕೊಂಡಿರಬಹುದೇ ? ಗೂಬೆಯು ಗುಗ್ಗೂ ಗುಟುಕರಿಸುವಿಕೆಯು ಪ್ರಾಣಕ್ಕೆ ಸಂಚುತರುತ್ತದೆ ಎಂದು ಹುಡುಗ ನಾಗಿದ್ದಾಗ ಕೇಳಿದ್ದ ನೆನಪು ಹುದುಗಿಕೊಂಡ ದೆವ್ವದೊಡನೆ ಕೊಂಡಿ ಹಾಕಿ ಕೊಂಡಿದೆಯೇ ? ಕಾಣದೆ ಇರುವ ಈ ದೆವ್ವವನ್ನು ಮನಸ್ಸು ನುಂಗಲೂ ಆಗದೆ, ವಾಕರಿಸಲೂ ಆಗದೆ, ಅದಕ್ಕೆ ಬದಲಿಕ್ರಿಯೆಯಾಗಿ ದೇಹವು ಹೀಗೆ ವಾಂತಿಮಾಡಿಕೊಳ್ಳುತ್ತಿದೆಯೆ ?

ಯೋಚಿಸಿದಂತೆಲ್ಲಾ ಇದೇ ಸತ್ಯವಿರಬಹುದು ಎಂದು ಅನ್ನಿಸಿತು. ಓದಿದ ಹಲವಾರು ಪುಸ್ತಕಗಳೂ ಈ ನಿರ್ಧಾರಕ್ಕೆ ಬೆಂಬಲ ಕೊಡುತ್ತಿದ್ದುವು.

"ಇರಬೇಕು ! ಹೀಗೇ ಇರಬೇಕು" ಎಂದೆ. ಗಟ್ಟಿಯಾಗಿ ಅಂದಿದ್ದೆ. ಕಾಫಿಯನ್ನು ತಂದಿದ್ದ ಮನೆಯೊಡತಿ "ಇನ್ನೂ ಕುಡಿಯಲೇ ಇಲ್ಲ ಕಾಫೀನ ! ಕುಡಿಯಕ್ಕೆ ಮುಂಚೇನೇ 'ಹೀಗೇ ಇರಬೇಕು' ಅಂತೀರಲ್ಲ ಅಂದ್ರೆ" ಎಂದು ಕೊಂಕಿ ನುಡಿದಳು.

ಮನದ ವಿಚಾರಪರಂಪರೆಗಳನ್ನು ಮನೆಯೊಡತಿಗೆ ಹೇಳಿ ತಾನೆ ಏನು ಪ್ರಯೋಜನ ? ಮನೆಯ ಆಚಾರದ ವಿಷಯಗಳನ್ನು ಬೇಕಾದರೆ ಮನೆಯೊಡತಿಯರ ಜತೆಯಲ್ಲಿ ಚರ್ಚಿಸಿ, ಅವರು ಹೇಳಿದಂತೆ ನಡೆದುಕೊಳ್ಳುವುದು ಯಾವಾಗಲೂ ಕ್ಷೇಮ. ಹಾಗೆ ಮಾಡುವುದರಿಂದ ಸದ್ಯಕ್ಕೆ ಸಂಕಟವಾದರೂ ಮುಂದಕ್ಕೆ ಶ್ರೇಯಸ್ಕರ.

* * *

ಬೆಳಗ್ಗೆ ದವಾಖಾನೆಯ ಕೆಲಸವನ್ನು ಮುಗಿಸಿಕೊಂಡು ಆ ಭಾನುವಾರ ಹಿಂತಿರುಗುವ ವೇಳೆಗೆ "ನಮ್ಮ ತಂದೆಗೆ ತುಂಬಾ ಜ್ವರ ಬಂದಿದೆ. ವಯಸ್ಸಾದವರು. ಆದರೂ ನೀವು ಬಂದು ನೋಡಿಕೊಂಡು ಹೋದರೆ ಮನಸ್ಸಿಗೆ ಎಷ್ಟೋ ಸಮಾಧಾನ. ನಿಮ್ಮ ಮನೇ ಬೀದೀಲೇ ನಾವೂ ಇರೋದು. ನಮ್ಮ ಮನೆ ಮುಂದೇನೇ ನೀವು ಹೋಗಬೇಕು" ಎಂದೊಬ್ಬಾತ ಹೇಳುತ್ತ ಗಂಟುಬಿದ್ದ. ಆಗಲಪ್ಪಾ ಅಂತ ಅವನನ್ನು ನನ್ನ ಕಾರಿನಲ್ಲಿ ಕೂರಿಸಿಕೊಂಡು ಹೊರಟೆ. ನಮ್ಮ ಬೀದಿಯ ಪಶ್ಚಿಮದ ತುದಿಯಲ್ಲಿದ್ದ ಮನೆಯ ಮುಂದೆ ಮೋಟಾರನ್ನು ನಿಲ್ಲಿಸಹೇಳಿದ. ನಿಲ್ಲಿಸಿ ಇಳಿದು ಹೋಗಿ ರೋಗಿಯನ್ನು ನೋಡಿದೆ. ೭೦–೭೫ರ ನಿರಿನಿರಿ ಚರ್ಮದ ಮುದುಕ. ೧೦೪-೧೦೫ರಷ್ಟು ಜ್ವರ ಕಾಯುತ್ತಿದೆ. ಸನ್ನಿ ಬಡಿದಿದೆ.

"ಎಷ್ಟು ದಿನದಿಂದ ಕಾಯಿಲೆ ?" ಅಂತ ಕೇಳಿದೆ.

"ಮೂರು ತಿಂಗಳಿಂದ ಸಾಯಂಕಾಲದ ಹೊತ್ತಿಗೆ ತೋಬೆಚ್ಚಗೆ ಆಗೋದು. ಆದರೆ ಮೂರು ದಿವಸಗಳಿಂದ ಮೂತ್ರವನ್ನು ಸರಿಯಾಗಿ ವರ್ಜಿಸುತ್ತಿಲ್ಲ.

ಜ್ವರ ಹೆಚ್ಚಾಗಿಬಿಟ್ಟಿದೆ. ನಿನ್ನೆ ರಾತ್ರಿಯಿಂದ ಕಳವಳದ ಮಾತಿಗೆ ಶುರು ಮಾಡಿದರು" ಎಂದು ಮಗ ಹೇಳಿದ.

"ಮೂರು ತಿಂಗಳಿಂದ ಏನೇನ್ಮಾಡ್ತಾ ಇದ್ದಿರಿ ? ಯಾವ ಯಾವ ಚಿಕಿತ್ಸೆ ಆಯಿತು ?" ಎಂದೆ.

"ಹೋಮಿಯೋಪತೀನ ಕಲಿತಿದ್ದೀನಿ. ಸುಮಾರು ದಿನಗಳಿಂದ ಅಭ್ಯಾಸ ಮಾಡ್ತಾ ಇದ್ದೀನಿ. ನಾನೇ ಚಿಕಿತ್ಸೆ ನಡಸ್ತಾ ಇದ್ದೆ" ಎಂದ, ಸಮಾಧಾನವಾಗಿ ಮಗ.

"ಮತ್ತೆ ನನ್ನನ್ನ ಯಾಕೆ ಇವತ್ತು ಕರೆದಿರಿ ? ಅಂಥಾ ವಿಷಮುಹೂರ್ತ ಬಂದಿದೆ ಅಂತ ನಿಮಗೇ ತಿಳಿದೇ ಕರೆದರಾ ?" ಎಂದೆ.

ಹೋಮಿಯೋಪತಿಯ ಕೆಲವು ವೈದ್ಯರು ಅವರ ರೋಗಿಗಳು ಸಾಯುವುದಕ್ಕೆ ಅರ್ಧಗಂಟೆ, ಒಂದು ಗಂಟೆ ಮೊದಲು ನನ್ನ ಸಲಹೆ ಪಡೆಯಿರಿ ಎಂದು ಸಲಹೆ ಮಾಡಿ ರೋಗಿಗಳ ಕಡೆಯ ಜನರನ್ನು ನನ್ನ ಬಳಿಗೆ ಅಟ್ಟುತ್ತಿದ್ದರು. ನಾನು ಆ ರೋಗಿಗಳನ್ನು ನೋಡಿದ ಮೇಲೆ, ಅಥವಾ ಅವರೇ ನನ್ನನ್ನು ನೋಡಿದ ಮೇಲೆ, ಅತ್ಯಲ್ಪ ಕಾಲದಲ್ಲೇ ಅವರು ನಿಧನ ಹೊಂದುತ್ತಿದ್ದರು. ಅವರಿಗೆ ಏನು ಕಾಯಿಲೆಯಾಗಿತ್ತು ? ಯಾಕೆ ಸತ್ತರು ? ಒಂದೂ ನನಗೆ ತಿಳಿದಿರುತ್ತಿರಲಿಲ್ಲ. ಹೀಗಾಗಿ, ಸತ್ತವರ ಕಡೆಯವರು ವಿಮಾ ಸರ್ಟಿಫಿಕೇಟಿಗೆ ಬಂದಾಗ, ಪೇಚಿಗೆ ಸಿಕ್ಕಿಹಾಕಿಕೊಳ್ಳುತ್ತಿದ್ದೆ. ರೋಗಿ ಸತ್ತಿದ್ದು ದಿಟ. ಅಥವಾ ಸಾಯೋಹಾಗೆ ಇದ್ದಿದ್ದು ನಿಜ. ಆದರೆ ಯಾಕೆ ಎಂಬುದು ಸರಿಯಾಗಿ ಗೊತ್ತಿಲ್ಲ. ಇಷ್ಟನ್ನೇ ನಾನು ಮರಣದ ಪತ್ರದಲ್ಲಿ ಬರೆದರೆ, ವಿಮಾ ಕಂಪನಿಯವರು ಸತ್ತವನ ಮನೆಯವರನ್ನು ಗೋಳುಹುಯ್ದುಕೊಂಡುಬಿಡ್ತಾರೆ. 'ಯಾರ್ಯಾರು ಹೋಮಿಯೋಪತಿಯವರು ಚಿಕಿತ್ಸೆಮಾಡಿದರು. ಎಲ್ಲರ ಕೈಲೂ ಬರೆಸಿಕೊಂಡು ಬನ್ನಿ ! ಕಳೆದ ಐದು ವರ್ಷಗಳಿಂದ ಸತ್ತವನು ಯಾವ ಯಾವ ಆಸ್ಪತ್ರೆಗೆ ಹೋಗಿದ್ದ ?' ಎಂದೆಲ್ಲಾ ಕೇಳುತ್ತಾರೆ. ಹೀಗಾಗಿ ಅಂತಹ ಸರ್ಟಿಫಿಕೇಟುಗಳನ್ನು ಬರೆಯುವಾಗ ಬಲು ಕಷ್ಟಪಡಬೇಕಾಗುತ್ತೆ. ಅದಕ್ಕೇ ಅವನು ಹೋಮಿಯೋಪತಿ ಎಂದಾಗ, 'ಈ ದಾಂಡಿಗ ಕೂಡ ವಿಮಾ ಸರ್ಟಿಫಿಕೇಟಿಗೋಸ್ಕರ ನನ್ನ ಕರೆದ' ಅನ್ನಿಸಿತು. ಅದಕ್ಕೇ ರೇಗಿ ಹಾಗೆ ಕೇಳಿದೆ.

"ದಿಟವಾಗಲೂ ನಿಮಗೆ ತೊಂದರೆ ಕೊಡ್ತಾ ಇರಲಿಲ್ಲ. ಹಿರಿಯರು ಹೋಗ್ತಾರೆ ಅಂತ ಗೊತ್ತು. ಮನುಷ್ಯಪ್ರಯತ್ನಕ್ಕೆ ಸಾಧ್ಯವಾದ್ದನ್ನೆಲ್ಲಾ ಮಾಡಿಯಾಯಿತು ಅಂತಲೇ ಇದ್ದೆ. ಆದರೆ ಹಿತ್ತಿಲ ಮನೆಯಲ್ಲಿರುವ ಶಾಮರಾಯರೂ, ಅವರ ತಾಯಿ ಪಾತಮ್ಮನವರೂ ಈ ದಿನ ಬೆಳಗ್ಗೆ ಬಂದು, 'ಏನಾದರೂ ಆಗಲಿ. ಆ ಡಾಕ್ಟರಿಗೆ ಒಂದು ಸರ್ತಿ ತೋರಿಸಬಾರದೆ ?' ಎಂದು ಅತಿ ವಿಶ್ವಾಸದಿಂದ ಹೇಳಿದರು. ಅದಕ್ಕೇ ತಮ್ಮ ಹತ್ತಿರ ಬಂದೆ" ಎಂದು ಪಾಪ ! ಅವನು ದೈನ್ಯವಾಗಿಯೇ ಉತ್ತರ ಹೇಳಿದ.

"ಶಾಮರಾಯರು ನಿಮ್ಮ ಮನೆ ಔಟ್‌ಹೌಸ್‌ನಲ್ಲಿದ್ದಾರೆಯೇ ?" ಎಂದೆ.

"ಹಾಗನ್ನಬಹುದು. ಆದರೆ ನಾವು ಶಾಮರಾಯರ ಮನೆಯ ಮೈನ್ ಹೌಸಿನಲ್ಲಿ ಇದ್ದೇವೆ ಎಂದರೆ ಇನ್ನೂ ನಿಖರವಾಗಿ ಹೇಳಿದ ಹಾಗಾಗುತ್ತೆ" ಎಂದ ಆತ.

"ನೋಡೀಪ್ಪಾ ! ನಿಮ್ಮ ತಂದೆಗೆ ವಯಸ್ಸಾಗಿದ್ದಕ್ಕಿಂತ ಹೆಚ್ಚಾಗಿ ತೇದು ಹೋಗಿದ್ದಾರೆ. ಕ್ಷಯವೇನಾದರೂ ಕಾಲುಹಾಕಿಕೊಂಡಿದೆಯೇನೋ ಅನ್ನಿಸುತ್ತೆ. ಚರ್ಮವೆಲ್ಲಾ ಕಾಂತಿಹೀನವಾಗಿ, ಕಾಮಾಲೆ ಬಡಿದಹಾಗೆ ಕಾಣಿಸುತ್ತಿದೆ. ಅಂದರೆ ಅಮೈಲಾಯ್ಡ್ ಡಿಜನರೇಷನ್ ಕೂಡ ಶುರುವಾಗಿರಬೇಕು. ಈ ಸ್ಥಿತಿಯಲ್ಲಿ ಯಾವ ವೈದ್ಯಕೀಯ ಮಾರ್ಗದ ಚಿಕಿತ್ಸೆ ಮಾಡಿದರೂ ಒಂದೇ ! ಆದರದಿಂದ ಹೋಮಿಯೋಪತಿ ಮಾಡ್ತಾ ಇದ್ದೀರಿ. ಅದನ್ನೇ ಕೊನೆತನಕ ಮುಂದುವರಿಸಿ" ಎಂದು ಹೇಳಿ ಹೊರಕ್ಕೆ ಹೊರಟೆ.

ಮೋಟಾರನ್ನು ಹತ್ತುವ ವೇಳೆಗೆ ಶಾಮರಾವ್ ಓಡಿಬಂದ. "ಮುಂದಿನ ಮನೆಗೆ ನೀವು ಬಂದಿದ್ದೀರಿ ಅಂತ ಗೊತ್ತಾಯ್ತು. ನೋಡಿಹೋಗೋಣ ಅಂತ ಬಂದೆ, ಸಾರ್" ಅಂದ.

"ನಿನ್ನನ್ನು ನೋಡಬೇಕು ಅಂತ ನನಗೂ ಅನ್ನಿಸ್ತಾ ಇತ್ತಪ್ಪ. ಸಂಜೆ ನನಗೆ ವಿರಾಮ. ಬೇರೆ ಕೆಲಸವಿಲ್ಲದೆ ಇದ್ದರೆ ನಮ್ಮ ಮನೆಗೆ ಬಂದು ಹೋಗ್ತೀಯಪ್ಪ ?" ಎಂದು ಕೇಳಿದೆ. ಅವನೂ 'ಹ್ಞೂ' ಅಂತ ಒಪ್ಪಿ ಕೊಂಡ. "ಹಾಗಾದರೆ ಕನಸುಗಳ ವರದಿಯನ್ನು ತೆಗೆದುಕೊಂಡು ಬರ್ತೀಯಾಪ್ಪಾ" ಎಂದೆ.

ಸಾಯಂಕಾಲ ನಾಲ್ಕೂಕಾಲು ಗಂಟೆಗೆ ಶಾಮರಾವ್ ಬಂದ.

“ಇಷ್ಟು ಬೇಗ ಬರಬೇಕಾದ ಜರೂರು ಏನಿತ್ತಿಲ್ಲಪ್ಪ. ಭಾನುವಾರ ಮಧ್ಯಾಹ್ನ ನಿದ್ರೆಮಾಡಿ ಯಾವ ಹೊತ್ತಿಗೆ ಬಂದಿದ್ದರೂ ಆಗಿರ್ತಿತ್ತು. ಭಾನುವಾರ ಸಂಜೆ ನಾನು ಮನೆಬಿಟ್ಟು ಸಾಮಾನ್ಯವಾಗಿ ಹೊರಗೆ ಹೋಗುವುದಿಲ್ಲ” ಎಂದು ಹೇಳುತ್ತಾ, ಹಜಾರದಲ್ಲಿ ಕುಳ್ಳಿರಿಸಿದೆ.

“ರಾಹುಕಾಲ ಶುರುವಾಗುವುದಕ್ಕೆ ಮುಂಚೆಯೇ ನಿಮ್ಮ ಮನೆ ಸೇರಬೇಕು ಅಂತ ಬಂದೆ ಸಾರ್ ! ಭಾನುವಾರ ಸಂಜೆ ಮನೆ ಬಿಟ್ಟು ಎಲ್ಲಿಗೂ ನೀವು ಹೋಗುಲ್ಲ ಅಂತ ಗೊತ್ತಿತ್ತು” ಎಂದ ಶಾಮಣ್ಣ.

“ಇದೇನಯ್ಯಾ ಶಾಮಣ್ಣ ! ಓದಿದವನು, ಜಾಣ, ಮದ್ದೀಡು ಗಿದ್ದೀಡು ನಂಬುಲ್ಲ, ವಿಚಾರಪರ, ಅಂತೆಲ್ಲಾ ಅಂದುಕೊಂಡಿದ್ದ ನೀನೂ, ರಾಹುಕಾಲ, ಗುಳಿಕಕಾಲ ಅಂತ ನಂಬ್ತೀಯಲ್ಲಪ್ಪಾ. ಆದರೆ ಆಶ್ಚರ್ಯವೇನೂ ಇಲ್ಲ ಅನ್ನು. ನಮ್ಮ ದೇಶದಲ್ಲಿ ಕೆಲವು ಕಾಲ ಇದ್ದ ಇಂಗ್ಲಿಷಿನವರು ಕೂಡ ನಂಬ್ತಾ ಇದ್ದರಪ್ಪಾ” ಎಂದು ಹೇಳಿದೆ.

“ಮೊದಲಿಂದಲೂ ಅಮ್ಮ ಶಕುನಗಳ ವಿಚಾರದಲ್ಲಿ ತುಂಬಾ ನಂಬಿಕೆ ಇಟ್ಟುಕೊಂಡಿದ್ದರು. ಹುಡುಗತನದಿಂದಲೂ ಅದೇ ಹಾಸುಹೊದ್ದಾಗಿ ಹೋಗಿದೆ ನನಗೆ. ಕಾಕತಾಳ ನ್ಯಾಯದಂತೆ ಹಲವಾರು ಬಾರಿ ಶಕುನ ನುಡಿದಂತೆ ಆಗಿಹೋಯಿತು. ನಂಬಿಕೆ ಇರಲಿ. ಇಲ್ಲದೆ ಇರಲಿ. ಶಕುನ ನುಡಿದಂತೆ ನಡೆದುಕೊಳ್ಳೋದರಲ್ಲಿ ತೊಂದರೆಯೇನೂ ಇಲ್ಲವಲ್ಲಾ ಅಂತ ಹಾಗೇ ನಡೆದು ಕೊಳ್ಳುತ್ತಿದ್ದೇನೆ ಸಾರ್” ಎಂದ.

“ನಿನ್ನ ಕಾಯಿಲೆ ವಿಚಾರ. ಬಿದ್ದ ಕನಸುಗಳ ತಪಾಸಣೆ ಇವುಗಳಿಗಾಗಿ ನಿನ್ನನ್ನು ಬರಹೇಳಿದ್ದು. ಆದರೆ ಇನ್ನೇನೇನೋ ಮಾತಿಗೆ ಪ್ರಾರಂಭಿಸಿಬಿಟ್ಟೆ. ಈಗ ಹೇಗಿದೀಪ್ಪಾ ? ಕನಸುಗಳೇನಾದರೂ ಬಿದ್ದಿದ್ದುವೇ ? ಅವನ್ನೇನಾದರೂ ಬರೆದಿಟ್ಟೆಯಾ ? ತಂದಿದ್ದೀಯಾ ?” ಎಂದು ಕೇಳಿದೆ.

“ಕನಸುಗಳೇನೋ ಬಿದ್ದಿರುತ್ತವೆ ಸಾರ್ ! ಎಲ್ಲಾ ಅಸ್ಪಷ್ಟ. ಎದ್ದಾಗ ಒಂದರ ನೆನಪೂ ಇರುಲ್ಲ. ಬರೆದಿಡುಕ್ಕೆ ಯಾವುದೂ ಸಿಕ್ಕಿಲ್ಲ, ಸಾರ್...ನೋಡಿ ಸಾರ್ ! ನೋಟುಪುಸ್ತಕ ಸಿದ್ಧಮಾಡಿಕೊಂಡು, ಪೆನ್ಸಿಲ್ಲನ್ನು ಅದರ ಒಳಗಿರಿಸಿ. ತಲೆದಿಂಬಿನ ಹತ್ತಿರವೇ ಇಟ್ಟುಕೋತೀನಿ. ಆದರೆ ಬರೆಯುಕ್ಕೆ ಏನೊಂದೂ ಸಿಗಲಿಲ್ಲ” ಎಂದು, ಪುಸ್ತಕ ಪೆನ್ಸಿಲ್ ತೋರಿಸಿದ.

"ಹಾಗಾದರೆ ಕೆಲವು ನೇರ ಪ್ರಶ್ನೆಗಳನ್ನು ಕೇಳುತ್ತೇನೆ. ಜ್ಞಾಪಿಸಿ ಕೊಂಡು ಸರಿಯಾಗಿ ಉತ್ತರ ಹೇಳು" ಎಂದೆ. "ಯಾಕೆ ಅವುಗಳನ್ನು ಕೇಳಿದೆ, ಅವುಗಳಿಂದ ಕಲಿತದ್ದೇನು. ಎಲ್ಲವನ್ನೂ ಆಮೇಲೆ ವಿವರಿಸುತ್ತೇನೆ" ಎಂದು ಅವನ ಕಾತರಕ್ಕೆ ಉತ್ತರವನ್ನು ಮೊದಲೇ ಕೊಟ್ಟು, ಕೇಳಲಾರಂಭಿಸಿದೆ.

"ನಿನ್ನ ಕನಸಿನಲ್ಲಿ ಯಾವುದಾದರೂ ದೊಡ್ಡ ಹುಣಸೇಮರವೋ, ಹಲಸಿನ ಮರವೋ ಮೇಲಿಮೇಲೆ ಕಾಣಿಸಿಕೊಳ್ಳುತ್ತ್ಯೇ ?"

"ಹುಣಸೇಮರಾನೋ, ಹಲಸಿನದೋ, ಆಲದ್ದೋ ಹೇಳುಕ್ಕೆ ಬರುಲ್ಲ ಸಾರ್. ಆದರೆ ಅಂತಹ ಮರವೇನೋ ಚಿತ್ರವಿಚಿತ್ರವಾಗಿ, ಅಂವರೆ ನೀರಿನಲ್ಲಿ ಬೆಳೆದ ಹಾಗೆ, ಕಲ್ಲಿನ ಮೇಲೆ ಬೆಳೆದ ಹಾಗೆ, ಹೀಗೆಲ್ಲಾ ಕಾಣಿಸಿದ್ದುಂಟು. ನಾಲ್ಕೈದು ಬಾರಿ ಕಾಣಿಸಿದ್ದುಂಟು."

"ರೂಪಾಯಿ ರೂಪಾಯಿ ಭೂರಿದಕ್ಷಿಣೆ ಕೊಟ್ಟ ಹಾಗೆ, ಅಥವಾ ಸವರನ್ ಮಳೆ ಬಿದ್ದ ಹಾಗೆ, ಇಲ್ಲಾ ನಾಣ್ಯದ ಮಳೆ ಬಿದ್ದ ಹಾಗೆ ಏನಾದರೂ ಕನಸು ಬಿದ್ದದ್ದುಂಟೇ ?"

"ನೀವು ಹೇಳಿದ್ದು ಏನೂ ಕಂಡಿಲ್ಲ ಸಾರ್ ! ಆದರೆ ನಾನು ಹುಡುಗ ನಾಗಿದ್ದಾಗ ಇಂದ್ರಜಾಲ ಮಹೇಂದ್ರಜಾಲದವನೊಬ್ಬ ಒಂದು ಏಣಿ ಹಾಕಿ ರೂಪಾಯಿಗಳು ಸವರನ್‌ಗಳು ಮೆಟ್ಟಲುಮೆಟ್ಟಲಾಗಿ ತಾವೇ ಭುಂಗಿ ಹತ್ತಿ ಹೋಗೋದು. ಮತ್ತೆ ಇಳಿಯೋದರ ಪ್ರದರ್ಶನವನ್ನು ತೋರಿಸಿದ್ದ. ಆ ಏಣಿ, ಆ ನಾಣ್ಯಗಳು ಕುಣಿದಾಡ್ತಾ ಕನಸಿನಲ್ಲಿ ಮರುಕಳಿಸಿ ಮರುಕಳಿಸಿ ಬರುತ್ತಿವೆ" ಎಂದ,

"ಬೆಂಕಿ ಬಿದ್ದ ಹಾಗೆ, ಬಿದಿರುಮಳೆ ಹತ್ತಿಕೊಂಡ ಹಾಗೆ, ಕಾಡುಕಿಚ್ಚು ಬಿದ್ದ ಹಾಗೆ ಏನಾದರೂ ಕನಸುಬಿದ್ದಿತ್ತೇ ?" ಎಂದೆ.

"ಹೌದು ಸಾರ್ ! ನಮ್ಮಮ್ಮ ವಾರಕ್ಕೆ ಮೂರು ಸರ್ತಿಯಾದರೂ ನನಗೆ ಹುಡುಗುತನದಲ್ಲಿ ದೃಷ್ಟಿ ತೆಗೆಯುತ್ತಿದ್ದಳು. ಮುಖದ ಮುಂದೆ ಕಸಪರಿಕೆ ನಿವಾಳಿಸಿ, ಮೂಲೇಲಿಟ್ಟು ಬೆಂಕಿ ಹತ್ತಿಸಿ, ಚಟಪಟ ಅಂತ ಸುಡು ತ್ತಿದ್ದಳು. ಕನಸಿನಲ್ಲಿ ಪೊರಕೆ ಹತ್ತಿಕೊಂಡ ಹಾಗೆ, ಅದು ಮೂಲೆಯಿಂದ ಹರಡಿ ಓಡುತ್ತಾ ಹೋಗಿ ತೇರೊಂದನ್ನು ಸುಡೋಹಾಗೆ, ಅಷ್ಟರಲ್ಲೇ ಗರುಡ ಬಂದು ತೇರನ್ನು ಎತ್ತಿಕೊಂಡು ಹೋದಹಾಗೆ ಒಂದು ಸರ್ತಿ ಕಂಡಿದ್ದೆ ಸಾರ್" ಎಂದ

"ಮತ್ತೆ, ಇದನ್ನು ಯಾಕೆ ಬರೆದಿಡಲಿಲ್ಲ ನೀನು ?" ಎಂದೆ.

"ನೀವು ಹೇಳಿದ ಮೇಲೆ ಈಗ ಜ್ಞಾಪಕಕ್ಕೆ ಬಂತೇ ಹೊರ್ತು, ಅವುಗಳನ್ನು ಕನಸಿನಲ್ಲಿ ಕಂಡು ಬೆಳಗ್ಗೆ ಎದ್ದಾಗ ಯಾವುದೂ ನೆನಪಿಗೆ ಬರಲಿಲ್ಲ ಸಾರ್ !"

"ಅಂದರೆ, ನಾನು ಕೇಳಿದ ನೇರ ಪ್ರಶ್ನೆಯಿಂದ ನಿನ್ನ ನೆನಪನ್ನು ಉದ್ರೇಕಿಸಿದಂತಾಯ್ತು. ನೀನೇ ಅದನ್ನು ಮಾಡಿಕೊಳ್ಳಲಾಗಲಿಲ್ಲ ; ಅಲ್ಲವೇ ?" ಎಂದೆ.

"ಹೌದು ಸಾರ್ ! ಆ ಕನಸುಗಳು ಪ್ರಾಯಶಃ ಮನಸ್ಸಿನ ಅವ್ಯಕ್ತಪದರಗಳಲ್ಲಿ ತೇಲುತ್ತಿದ್ದಿರಬೇಕು. ಯಾರಾದರೂ ಬಲೆ ಹಾಕಿ ಸೆಳೆದರೆ ವ್ಯಕ್ತವಾಗಿದ್ದಿರಬಹುದು. ಮನಸ್ಸಿನ ಅವ್ಯಕ್ತವಾದ, ಆದರೆ ಆಳವಾದ ಪದರಗಳಲ್ಲಿ ಹುದುಗಿದ್ದರೆ, ಅಷ್ಟು ಬೇಗ ವ್ಯಕ್ತಮಾಡಲು ಸಾಧ್ಯವಲ್ಲ ಎಂದು ಒಂದು ಇಂಗ್ಲಿಷ್ ಮಾಸಪತ್ರಿಕೆಯಲ್ಲಿ ಓದಿದ ನೆನಪು ಸಾರ್" ಎಂದ.

"ನೀನು ಹೇಳಿದ್ದು ಸ್ಥೂಲವಾಗಿ ದಿಟ. ಅಂದರೆ ಕೆರೆ, ನೀರು, ಅಲೆಗಳು ತೇಲುವ ಕಸಕಡ್ಡಿಗಳು, ಇವುಗಳ ಸಾಮ್ಯತಿ ಕೊಟ್ಟು, ಮನಸ್ಸು, ಮನಸ್ಸಿನ ವ್ಯಕ್ತವಾದ ಭಾಗ, ಅವ್ಯಕ್ತವಾದ ಭಾಗ, ಅವ್ಯಕ್ತವಾದ ಪದರಗಳು, ಕಸಕಡ್ಡಿಗಳಂತಿರುವ ನೆನಪುಗಳು, ಎಂದು ಸುಲಭವಾಗಿ ತಿಳಿದುಕೊಳ್ಳಲು ವರ್ಣಿಸುತ್ತೇವೆ. ಆದರೆ ಮೆದುಳಿನಲ್ಲಿ ಒಂದು ಹಂತದಲ್ಲಿ ವ್ಯಕ್ತ, ಆಳದಲ್ಲಿ ಅವ್ಯಕ್ತ ಎಂದು ಏನೂ ಇರುವುದಿಲ್ಲ. ಅಷ್ಟು ತಿಳಿದುಕೊಂಡಿರಬೇಕು. ಇರಲಿ...ನಿನ್ನ ಕನಸುಗಳಲ್ಲಿ ಹಣದ ಕುಣಿದಾಟ ಕಂಡಿದ್ದೆ. ಕನಸಿನಲ್ಲಿ ಹಣ ಕಂಡರೆ ಏನಾಗಂತ್ತೆ ಅಂತಿದ್ದರು ಹಿರಿಯರು ?"

"ಕನಸಿನಲ್ಲಿ ಹಣ ಕಂಡರೆ, ಮಾರನೇ ದಿನ ಹೆಣ ಕಾಣ್ತಾನೆ ಅಂತ ಅಂತಿದ್ದರು."

"ಅಂದರೆ, ಹಣ, ನಾಣ್ಯ, ಸವರನ್, ರೂಪಾಯಿ, ಈ ತರಹ ಕನಸು ಬಿದ್ದರೆ ಕನಸಿಗೆ ಕಾರಣವಾದ ನೆನಪು ಹೆಣಕ್ಕೆ, ಸಾವಿಗೆ, ಸಂಬಂಧ ಹೊಂದಿಕೊಂಡಿದ್ದಿರಬೇಕು ಎಂದು ಊಹಿಸಬಹುದಲ್ಲವೇನಪ್ಪಾ ?" ಎಂದೆ.

"ಅನುಮಾನ ಯಾಕೆ ಸಾರ್ ! ಹಾಗೆ ಆಗೇ ಇದ್ದಿರಬೇಕು. ಅವ್ಯಕ್ತಮನಸ್ಸಿನಲ್ಲಿ ಹುದುಗಿದ್ದ ಎರಡೋ ಮೂರೋ ನೆನಪುಗಳು ದೂರಸಂಬಂಧವನ್ನು ಹೊಂದಿದ್ದರೂ, ಕೂಡಿಕೊಂಡು, ಬಾಲ್ಯದ ನೆನಪುಗಳೊಂದಿಗೆ ಕೊಂಡಿ ಹಾಕಿಕೊಂಡು ವಿಚಿತ್ರವಾಗಿ ಕನಸುಗಳು ಬೀಳುತ್ತವೆ ಎಂದು ಹೇಳಿಯೇ ಇದ್ದಾರಲ್ಲ ಸಾರ್ !"

"ಜೋಟಿ ಹುಡುಗ ಕಣಯ್ಯ, ನೀನು ! ಈಗ ನೀನೇ ವಿಚಾರಮಾಡಿ ಹೇಳು. ತೇರಿಗೆ ಬೆಂಕಿ ಬಿದ್ದಿತ್ತು, ಗರುಡ ಬಂದು ಹೊತ್ತುಕೊಂಡುಹೋಯಿತು ಅಂತಲ್ಲವೇ ಕನಸು ?" ಎಂದು ಅವನನ್ನು ಉತ್ತಾಪಿಸಿದೆ.

"1. ತೇರಿಗೆ ಬೆಂಕಿ ಬಿದ್ದರೆ ಊರಿಗೆ ಬೂದಿ ಹಾಕಿದ ಹಾಗೆ ಅಂತ ಹಿರಿಯರು ಹೇಳ್ತಿದ್ದರು ಸಾರ್ ! 2. ಅಮ್ಮ ದೃಷ್ಟಿ ತೆಗೆಯುಕ್ಕೆ ಕಸಪರಿಕೆ ಹಚ್ಚಿ ಇಡ್ತಿದ್ದಳು 3. ಗರುಡ ಬಂದು ತೇರನ್ನು ಎತ್ತಿಕೊಂಡು ಹೋಗಿ ಬೆಂಕಿಯಿಂದ ತಪ್ಪಿಸಿದ. ಊರನ್ನು ಉಳಿಸಿದ. ...ಅಂದರೆ ಸಾರ್ ! ಅವ್ಯಕ್ತ ಮನಸ್ಸಿನಲ್ಲಿ ನನಗೇನೋ ಕೇಡಾಗುತ್ತೆ ಎಂಬ ಭಯವಿದ್ದಿರಬೇಕು. ಹುಡುಗ ತನದಲ್ಲಿ ಅಮ್ಮ ದೃಷ್ಟಿಹಾಕಿ ಕೇಡನ್ನು ಪರಿಹಾರ ಮಾಡ್ತಿದ್ದಳು. ಆ ನೆನಪು ಈ ಭಯದ ನಿವಾರಣೆಗೆ ಕಸಪರಿಕೇನ ಸುಡಿಸಿರಬೇಕು. ಕೇಡು ನನಗಾದರೆ ನಮ್ಮ ಮನೆಯೇ ಮುರಿದುಬಿದ್ದ ಹಾಗೆ. ಅದಕ್ಕೇ ಗಾದೆಯ ನೆನಪು ಕೊಂಡಿ ಹಾಕಿಕೊಂಡು ತೇರನ್ನು ಕಾಣಿಸಿರಬೇಕು. ವಿಷ್ಣುಪರಮಾತ್ಮನ ತೇರಲ್ಲವೇ ಗರುಡ ! ಅವನೇ ಕಾಪಾಡಿರಬೇಕು— ಅಂತ ಅನ್ನಿಸುತ್ತೆ ಸಾರ್ !"

"ಆಯ್ತಾಪ್ಪಾ ! ಹುಣಿಸೆಮರ, ದೊಡ್ಡ ಹೆಮ್ಮರ, ಇದು ಯಾಕೆ ಕನಸಿನಲ್ಲಿ ಕಾಣಿಸಿಕೊಂಡಿತು ಅನ್ನುತ್ತೀ ?" ಎಂದೆ.

ಈಗ ಅವನೇ ತನ್ನ ವೈದ್ಯನಾಗುವ ಮಟ್ಟಕ್ಕೆ ಬಂದಿದ್ದ. ಸಂತೋಷ ದಿಂದ ಅವನಿಗೇ ಚಿಕಿತ್ಸೆಯನ್ನು ವಹಿಸಿ, ಗಾಡಿ ಹೊಡೆಯುವವ ಲೊಟ್ಟೆ ಹೊಡೆಯುವಂತೆ ಆಯ್ತು : ಹ್ಞೂಗುಟ್ಟುತ್ತಿದ್ದೆ.

"ನಮ್ಮನೆ ಹಿತ್ತಲಲ್ಲಿ ಹಲಸಿನ ಮರವೊಂದಿದೆ ಸಾರ್ ! ಹುಡುಗನಾಗಿ ದ್ದಾಗ ಕಕ್ಕಸ್ಸಿಗೆ ಹೋಗಬೇಕಾದರೆ ಅದರ ಹತ್ತಿರಲೇ ಹೋಗಬೇಕಾಗಿತ್ತು ಸಾರ್. ರಾತ್ರಿ ಹೊತ್ತು ಹೋಗಬೇಕಾದರೆ ಬಲು ಭಯ ಆಗ್ತಿತ್ತು ಸಾರ್ ! ಭಯ, ಕೇಡು ಇವೆಲ್ಲವೂ ಹೆಮ್ಮರದ ಜತೆಯಲ್ಲೇ ನೆನಪುಗಟ್ಟಿಕೊಂಡಿರಬೇಕು ಸಾರ್ ! ಅದಕ್ಕೇ ಆ ಮರಗಳ ಕನಸು ಬಿದ್ದಿರಬೇಕು" ಎಂದ.

ಆರಾಮವಾಗಿ ಕೂತಿದ್ದ ಶಾಮರಾಯ ಪಠಾತ್ತಾಗಿ ಸೆಟೆದು ಕೂತು ಕೊಂಡ.

"ಅದಿರಲಿ ಸಾರ್ ! ಈ ಮೂರು ನೇರ ಪ್ರಶ್ನೆಗಳನ್ನು ಕೇಳಿ ನನ್ನ ನೆನಪನ್ನು ಕೆರಳಿಸಿ, ಇಷ್ಟೆಲ್ಲವನ್ನೂ ಹೇಳಿಸಿದಿರಿ. ಈ ನೇರ ಪ್ರಶ್ನೆಗಳನ್ನು ನೀವು

ಕೇಳಲು ಏನು ಕಾರಣ ಸಾರ್ ? ಏನೋ ಅನುಮಾನ ಇಟ್ಟುಕೊಂಡೇ ನೀವು ಕೇಳಿ ಖಚಿತಪಡಿಸಿಕೊಳ್ಳಲು ಪ್ರಯತ್ನಿಸಿದ್ದಿರಬೇಕು. ಆ ಅನುಮಾನವಾದರೂ ಹೇಗೆ ಬಂತು ? ಏಕೆ ಬಂತು ?" ಎಂದು ಕೇಳಿದ.

ಆಗ ಬುಡುಬುಡುಕೆಯವನು ಬಂದದ್ದು, ಅವನ ಮಗು ಸತ್ತುಹೋಗಿದ್ದು, ಗೂಬೆಯು ಗುಗ್ಗುಟುರಿದ್ದು, ಅದನ್ನು ಕೊಂದಿದ್ದು, ಮಗು ಸಾಯದೆ ಉಳಿಯಲು ಸಾಧ್ಯವಿಲ್ಲವೆಂದು ಅವನು ಹೇಳಿದ್ದು, ಅನಂತರ ನಾನು ಯೋಚನೆ ಮಾಡುತ್ತಿದ್ದಾಗ ನನಗೆ ಹೊಳೆದ ಅನುಮಾನ, ಇವುಗಳನ್ನು ಹೇಳಿದೆ. "ಮನೆ ಮೇಲೆ ಗೂಬೆ ಕೂಗಿತು ಎಂಬ ಶಕುನ ನಿನ್ನ ಅರಿವಿಲ್ಲದೆಯೇ ನಿನ್ನ ಅವ್ಯಕ್ತ ಮನಸ್ಸಿನಲ್ಲಿ ಹುದುಗಿಕೊಂಡು, ಬಾಲ್ಯದಲ್ಲಿ ಕೇಳಿದ್ದ ವಿಷಯಗಳೊಡನೆ ಕೊಂಡಿ ಹಾಕಿಕೊಂಡು, ಮಾನಸಿಕವಾಗಿ ಪರಿಹಾರಮಾಡಿಕೊಳ್ಳಲಾಗದೆ, ತಿಥಿಊಟದಿಂದ ಭಾರವಾದ ಹೊಟ್ಟೆಯನ್ನು ಸಂಕೇತವಾಗಿ ಆರಿಸಿಕೊಂಡಿರಬಹುದು. ಮನಸ್ಸಿನಲ್ಲಿ ಅವ್ಯಕ್ತವಾಗಿರುವ ಶಕುನವನ್ನು ವ್ಯಕ್ತಪಡಿಸುವ ತನಕ ಸಾಂಕೇತಿಕವಾಗಿ ಅದು ನುಂಗಲಾರದ ತುತ್ತಾಗಿ ದೆವ್ವದಂತೆ ಕಾಡುತ್ತದೆ. ಶಕುನದ ನಂಬಿಕೆಯ ಜತೆಗೇ ಕೊಂಡಿಹಾಕಿಕೊಂಡ ಬಾಲ್ಯದ ನೆನಪುಗಳನ್ನು ಮನಸ್ಸಿನ ಅವ್ಯಕ್ತ ಭಾಗದಿಂದ ವ್ಯಕ್ತಭಾಗಕ್ಕೆ ಹರಡುವ ತನಕ, ದೇಹದಲ್ಲಿ ಸಾಂಕೇತಿಕವಾಗಿ ವಾಕರಿಕೆ ಇದ್ದೇ ಇರುತ್ತದೆ—ಎಂದು ವಿಚಾರಸರಣಿಯನ್ನು ಮಾಡಿದೆ. ಆ ಅನುಮಾನದಿಂದಲೇ ನಿನಗೆ ಬಿದ್ದ ಕನಸುಗಳಲ್ಲಿ ಈ ಅನುಮಾನವನ್ನು ದೃಢೀಕರಿಸುವ ವಿಷಯಗಳಿವೆಯೇ ಎಂದು ನೇರ ಪ್ರಶ್ನೆಗಳನ್ನು ಕೇಳಿದೆ. ಮಾರ್ಗವನ್ನು ಸೂಚಿಸಿದೆ. ಮಿಕ್ಕಿದ್ದೆಲ್ಲವನ್ನೂ ನೀನೇ ಮಾಡಿಕೊಂಡೆ" ಎಂದೆ.

"ಇದೆಲ್ಲಾ ನಿನಗೆ ತಿಳಿದ ಮೇಲೆ ಕೂಡ, ನೀನು ಸ್ವಲ್ಪ ಕಷ್ಟಪಟ್ಟು ದೇಹದಲ್ಲಿ ಅಭ್ಯಾಸವಾಗಿ ಬಂದಿರುವ ಈ ಮುಶ್ಪಟವನ್ನು ತಪ್ಪಿಸಿಕೊಳ್ಳಲು ಪ್ರಯತ್ನಮಾಡಬೇಕು. ಗೂಬೆ ಶಕುನ ನುಡಿದಿದ್ದಕ್ಕೆ ಮಗು ಸತ್ತಿತ್ತು ; ನಿಮ್ಮ ಮುಂದಿನ ಮನೆಯ ಮುದುಕರೂ ಬಲಿಯಾಗಬಹುದು. ಗೂಬೆಯೂ ಸತ್ತಿತು. ಪೀಡೆ ಕಳೆಯಿತು. ಆದರೆ ಎಷ್ಟೋ ಸರ್ತಿ ಗೂಬೆಯು ಹುಳುಳುಳುಳಾಯಿ ಅಂತಲೂ ಕೂಗುತ್ತೆ. ಆಗ ಶುಭವಾರ್ತೆಯ ಕುರುಹಾಗಿ ಆ ಮನೆಯಲ್ಲಿ ತೊಟ್ಟಿಲು ಕಟ್ಟುವ ಹಾಗಾಗುತ್ತೆ" ಎಂದೆ.

"ಹೌದಾ ಸಾರ್ ! ಇದು ಕೇಳಿಯೇ ಇತ್ತಿಲ್ಲ !"

ಹಜಾರದ ಒಳಬಾಗಿಲಿನಿಂದ ಮನೆಯೊಡತಿಯ ಧ್ವನಿ ಕೇಳಿಸಿತು : "ನಿಮ್ಮ ಮಾತು ಹರಟೆ ಮುಗಿದಿದ್ದರೆ, ತಿಂಡಿ ತಂದುಕೊಡಲ ಅಂದ್ರೆ ?" ಎಂದು.

"ಪಾತಮ್ಮನೋರ ಮಗ ಶ್ಯಾಮರಾಯ ಬಂದಿದ್ದಾನೆ, ಕಣೇ ! ಮಾತ್ತೇನು ಬಂತು ? ಹರಟೆ ಹೇಗೆ ತಾನೆ ಮುಗಿದೀತು ? ಏನ್ಮಾಡಿದಿಯೋ ತಂದು ಕೊಡು" ಎಂದೆ.

ಬಳುಕುತ್ತಾ ಮುದುಕಿ ಬಂದು ಒಂದು ತಟ್ಟೆ ಮಧ್ಯಾಹ್ನ ಮಾಡಿಟ್ಟಿದ್ದ ಹುಳಿಯನ್ನವನ್ನೂ ಇನ್ನೊಂದು ತಟ್ಟೆಯಲ್ಲಿ ಮೊಸರನ್ನವನ್ನೂ ತಂದು, ಶಾಮ ರಾಯನೆದುರಿಗೆ ಇಟ್ಟಳು.

"ಇದೇನೇ ತಿಂಡಿ ನೀ ಮಾಡಿರೋದು !" ಎಂದು ಸ್ವಲ್ಪ ಬೇಸರದಿಂದಲೇ ಹೇಳಿದೆ.

"ಪಾತಕ್ಕ ನಾಲ್ಕು ಕೋಡುಬಳೆ ಕಳಿಸಿದ್ದರು, ಅಂದ್ರೆ. ಅವರ ಮನೇ ತಿಂಡೀನ ಶಾಮಣ್ಣನಿಗೆ ಹೇಗೆ ಕೊಡೋದು ಅಂತ ನಮ್ಮನೇಲಿ ಮಾಡಿದ್ದನ್ನೇ ಕೊಟ್ಟೆ. ನಿಮಗೆ ನೆರೆಮನೆ ಕೋಡುಬಳೇನ ತಂದುಕೊಡ್ತೀನಿ ಅಂದ್ರೆ" ಎಂದು ನನಗೆ ಹೇಳಿ, "ಶಾಮಣ್ಣ ! ಹುಳಿಯನ್ನ ಚೆನ್ನಾಗಿ ಕಲಸಿದ್ದೇನೆ, ಒಗ್ಗರಣೆ ಹಾಕಿದ ಮೊಸರನ್ನವನ್ನೂ ನಾನೇ ಸ್ವತಃ ಮಾಡಿದೆ. ಮಧ್ಯಾಹ್ನ ಮಾಡಿದ್ದು. ಬೇಸರವಿಲ್ಲ ಅಂತ ಅನ್ನಿಸಿದರೆ ತಿಂದು ನೋಡಪ್ಪಾ ! ಇಲ್ಲದೆ ಇದ್ದರೆ ಕೋಡುಬಳೆ ತಂದುಕೊಡ್ತೀನಿ" ಎಂದು ಶಾಮಣ್ಣನ ಕಡೆಗೆ ತಿರುಗಿ ಹೇಳಿದಳು.

"ಹುಳಿಯನ್ನ ಅಂದರೆ ಪಂಚಪ್ರಾಣಾಮ್ಮಾ ನನಗೆ ! ಎಂಥಾ ಹುಳಿಯನ್ನ ವಾಗಲಿ ಚೆನ್ನ. ಆದರೆ ಕೆಲವು ಇನ್ನೂ ಚೆನ್ನು ಎಂದು ಆಗಾಗ ಹೇಳುತ್ತಿರುತ್ತೇನೆ. ತಂಗಳಾದ ಹುಳಿಯನ್ನದ ರುಚಿ, ಬಿಸಿಯಾಗಿರುವಾಗ ಹೇಗೆ ಸಾಧ್ಯಾಮ್ಮ ?" ಎಂದು ಶಾಮರಾಯ ಹೇಳುತ್ತಾ ತಿನ್ನಲು ಶುರುಮಾಡಿದ.

ಎಷ್ಟು ಹಸಿವಾಗಿತ್ತೋ ದೇವರೇ ಬಲ್ಲ ! ಕೋಡುಬಳೇನ ನನಗೆ ತಂದು ಕೊಡೋ ಹೊತ್ತಿಗೆ ಮೊಸರನ್ನ ಅರ್ಧ ಮುಗಿದಿತ್ತು. ಆದಕ್ಕೆ ಅವನು ನೆಂಚಿಕೊಂಡ ಹುಳಿಯನ್ನ ಮುಕ್ಕಾಲು ಮುಗಿದಿತ್ತು. ಕೋಡುಬಳೆಯನ್ನ ಹಗೂರಾಗಿ ಮುರಿದು ನಾನು ಮುಗಿಸುವ ವೇಳೆಗೆ ದೊಡ್ಡ ತಟ್ಟೆಯೊಂದರಲ್ಲಿ ಎರಡು ಬಟ್ಟಲು ಕಾಫಿ, ಒಂದು ತಟ್ಟೆ ಹುಳಿಯನ್ನವನ್ನು ಇರಿಸಿಕೊಂಡು ಮನೆಯೊಡತಿ ಬಂದು, ನನಗೆ ಕಾಫಿ ಕೊಟ್ಟು, ಶಾಮರಾಯನ ಎದುರಿಗೆ

ಕಾಫಿಯನ್ನಿರಿಸಿ, ತಟ್ಟೆಯಲ್ಲಿದ್ದ ಹುಳಿಯನ್ನವನ್ನು ಖಾಲಿಯಾಗುತ್ತಿದ್ದ ಅವನ ತಟ್ಟೆಗೆ ಬಡಿಸಲು ಶುರುಮಾಡುತ್ತಾ "ಮೊಸರನ್ನ ಹೆಚ್ಚಾಗಿ ಉಳಿದುಕೊಂಡಿದೆ, ಶಾಮಣ್ಣ. ಇನ್ನೂ ಸ್ವಲ್ಪ ಹುಳಿಯನ್ನ ಬಡಿಸ್ತೀನಿ, ಸರಿತೂಗುತ್ತೆ" ಎಂದು ಹೇಳಿದಳು.

ಕಕವನ ಹಾಗೆ ಬಾಯಿಬಿಡುತ್ತ, ಬಡಿಸಿದ್ದನ್ನೆಲ್ಲಾ ಬಡಿಸಿಸಿಕೊಂಡು ಶಾಮಣ್ಣ ಎರಡನ್ನೂ ತಿಂದು ಮುಗಿಸಿ, ಕಾಫಿಯನ್ನೂ ಹೀರಿ ಮುಗಿಸಿದ. ಸ್ವಲ್ಪ ಒದ್ದಾಡಿದ. ಕಡೆಗೆ ತೇಗಿದ. "ಕ್ಷಮಿಸಿ ಸಾರ್ ! ತೇಗಬಾರದಾಗಿತ್ತು. ಎಷ್ಟೋ ಒದ್ದ್ಯಾಡಿದೆ. ಸಾಧ್ಯವಾಗಲಿಲ್ಲ" ಎಂದು ಕ್ಷಮೆ ಬೇಡಿದ.

"ಇದೇನು ಶಾಮಣ್ಣ ! ಕ್ಷಮಾಪಣೆ ಬೇಡೋದಾದರೂ ಏಕೆ ? ನುಂಗುಕ್ಕೆ ಆಗದೆ ಇದ್ದ ರೋಗಿ ಎರಡು ತಟ್ಟೆ ಹುಳಿಯನ್ನವನ್ನು ಮುಕ್ಕಿದ್ದಾನೆ, ಒಂದು ತಟ್ಟೆ ಮೊಸರನ್ನವನ್ನು ಮುಗಿಸಿದ್ದಾನೆ. ಕೊಟ್ಟ ಕಾಫಿಯನ್ನೂ ವಾಕರಿಸದೆ ಕುಡಿದಿದ್ದಾನೆ. ಅಂತಹವನು ತೇಗಿದರೆ, ಆ ರೋಗಿಯ ಡಾಕ್ಟರ ಹೊಟ್ಟೆಗೆ ಅಮೃತ ಹುಯ್ದಂತೆ ಆಗುಲ್ಲವೇ !" ಎಂದು ಹೇಳಿ, ನಕ್ಕೆ.

"ಹೌದಲ್ಲಾ ಸಾರ್ ! ಸುಲಭವಾಗಿ ಇವತ್ತೇ ನುಂಗಿದ್ದು. ತಿಂಗಳಿಂದ ಉಣ್ಣಲು ಪ್ರಯತ್ನಿಸಿದಾಗ ಇವತ್ತೇ ವಾಕರಿಕೆ ಬರದೆ ಇದ್ದದ್ದು ! ... ಆದರೆ, ಸಾರ್ ! ನಿಮ್ಮ ವಿಜ್ಞಾನದ ವಿಚಾರ, ಅನುಭವದ ಅನುಕಂಪ, ಇವೆಲ್ಲಾ ನನ್ನ ಮನಸ್ಸಿನ ಒಳ ಪದರಗಳಲ್ಲಿ ಹುದುಗಿಕೊಂಡಿದ್ದ 'ದೆವ್ವ'ದ ಜಾಡನ್ನು ತೋರಿಸಿತು, ದಿಟ...ಆದರೆ ಸಾರ್ ! ಅದಕ್ಕಿಂತ ಮುಖ್ಯವಾಗಿ 'ಶಾಮಣ್ಣ' ಅಂತ ವಿಶ್ವಾಸದಿಂದ ಕರೆದು ಅಮ್ಮಾವರು ಬಡಿಸಿದಾಗ ಆ ಆದರದ ಅಮಲಿನಲ್ಲಿ ಎಲ್ಲವನ್ನೂ ತಿಂದುಬಿಟ್ಟೆ. ಜೀರ್ಣಿಸಿಕೊಂಡು ತೇಗಿದೆ, ಎಂದು ನನಗನ್ನಿಸುತ್ತಿದೆ" ಎಂದು ನಗುತ್ತಲೇ ಹೇಳಿದ.

ಹಿತವಾದ ಯುವಕನಗುವಿನ ಕಿಲಕಿಲವನ್ನು ಕೇಳಿ, ಜಾದೂ ಮಾಡಿದಂತೆ ಅಷ್ಟು ಬೇಗ ಶಾಮರಾಯನಿಗೆ ಗುಣವಾದುದನ್ನು ಕಂಡು, ನನಗೂ ಹೇಗೋ ಆಗಿಬಿಟ್ಟಿತ್ತು.

"ಶಾಮಣ್ಣ ! ಹತ್ತು ನಿಮಿಷಗಳ ಹಿಂದೆ ನಿನಗೆ ಹೇಳಿದೆ : ಶ್ರಮಪಟ್ಟು, ಪ್ರಯಾಸದಿಂದ, ಈ ತನಕ ಬೆಳೆದು ಬಂದಿರುವ ದುಶ್ಚಟವನ್ನು ತಪ್ಪಿಸಿಕೊಳ್ಳ

ಬೇಕು ಎಂದು. ಜ್ಞಾಪಕವಿದೆಯೇ ?...ಆದರೆ ವಿಶ್ವಾಸದಿಂದ, ಪ್ರಯಾಸವಿಲ್ಲದೆ ಗುಣಹೊಂದಬಹುದು ಎಂದು ಈಗ ಸಾಕ್ಷಾತ್ತಾಗಿ ಕಂಡೆ. ನೀನು ಹೇಳಿದ್ದರಲ್ಲಿ ಶತಾಂಶ ಸತ್ಯವಿದೆ" ಎಂದು ಹೇಳಿ ತಡೆಯಲಾರದೆ ಹೋಗಿ ಅವನ ಬೆನ್ನನ್ನು ತಟ್ಟಿ, "ನಿಮ್ಮ ಮಂತ್ರಿಗಳು 'ಅಜಾತಶತ್ರು' ಎಂದು ನಿನ್ನನ್ನು ಕರೆದರು. ಅದನ್ನು ಸಾರ್ಥಕಗೊಳಿಸುವ ಯೋಗ್ಯತೆ ನಿನಗಿದೆ. ಹಾಗೆ ಬಾಳಪ್ಪ" ಎಂದೆ.

ಯಾಕೋ ? ಏನೋ ? ಅವನು ಉತ್ತರ ಹೇಳಲಿಲ್ಲ. ಅವನ ಉತ್ತರವನ್ನು ನಾನು ನಿರೀಕ್ಷಿಸುತ್ತಲೂ ಇರಲಿಲ್ಲ.

ನಮ್ಮ ಪುಣ್ಯ ! ಮನೆಯೊಡತಿ ಅಡಿಕೆಬಟ್ಟಲು ಹಿಡಿದುಕೊಂಡು ಬಂದು, ನನ್ನೆದುರಿಗೆ ವಾಡಿಕೆಯಾಗಿ ಹಿಡಿದು, "ಎಲಡಿಕೆ ತಂದುಕೊಡಲೇ ಅಂದ್ರೆ ?" ಎಂದು ಕೇಳಿದಳು. ಅಡಿಕೆಪುಡಿ ಬಾಯಿಗೆ ಹಾಕಿಕೊಂಡು—

"ಶಾಮಣ್ಣ, ಎಲಡಿಕೆ ಹಾಕಿಕೊಳ್ಳುತ್ತೀಯಾಪ್ಪಾ ? ಮೈಸೂರು ಕಡೆ ರೋಗಿಯೊಬ್ಬ ವಿಳ್ಯೇದೆಲೆ ತಂದುಕೊಟ್ಟಿದ್ದಾನೆ" ಎಂದೆ.

"ಎಲಡಿಕೆ ಅಭ್ಯಾಸವಿಲ್ಲ ಸಾರ್ ! ಕ್ಷಮಿಸೀಮ್ಮ !!" ಅಂತ ಹೇಳಿದ ಶಾಮಣ್ಣ. ಭಾನುವಾರದ ರಜಾಸಂಜೆಯುಂದು ನನಗಾಗಿ ನೀವು ದುಡಿದಿರಿ ಸಾರ್ ! ಊಟಮಾಡುವ ಶಕ್ತಿ ನನಗಿದೆ ಎಂದು ಅಮ್ಮಾವರು ನಿದರ್ಶನ ಮಾಡಿಸಿದರು ಸಾರ್ ! ನಿಮ್ಮನೆಯ ಋಣವನ್ನು ಹೇಗಾದರೂ ತೀರಿಸಲು ಸಾಧ್ಯ ಸಾರ್ ! ... ಈಗ ಹೋಗಿಬರ್‍ತೀನಿ ಸಾರ್ !" ಅಂತ ಹೇಳಿ, ಮಂದಸ್ಮಿತನಾಗಿ ಶಾಮಣ್ಣ, ಮನೆಯೊಡತಿಗೆ ನಮಸ್ಕಾರ ಹಾಕಿ, ನನಗೂ ಸಾಷ್ಟಾಂಗ ಮಾಡಿ 'ಹೋಗಿಬರ್‍ತೇನೆ' ಅಂತ ಹೇಳುತ್ತಾ ಶಾಮಣ್ಣ ಸಂಜೆ ಏಳರ ಹೊತ್ತಿಗೆ ತನ್ನ ಮನೆಗೆ ಹೋದ.

* * *

ಮುಂದಿನ ಭಾನುವಾರದ ತನಕ, ತಲೆ ತೆಗೆಸೋ ಅಷ್ಟು ಕೆಲಸ ಇತ್ತು ನನಗೆ. ವೈದ್ಯಕೀಯ ಕೆಲಸ ಅಲ್ಲ, ಅನ್ನಿ. ಬೇರೆಯವರ ಬೇವಾರ್ಸಿ ಕೆಲಸ. ಅಂದರೆ ಕೇರಿಯವರನ್ನು ಉದ್ಧಾರ ಮಾಡ್ತೀನಿ, ಊರಿನವರಿಗೆ ಸಹಾಯ ಮಾಡ್ತೀನಿ, ದೇಶವನ್ನೇ ಕಟ್ತೀನಿ, ರಾಷ್ಟ್ರವನ್ನೇ ನಿರ್ಮಿಸ್ತೀನಿ. ಅಂತರ್‍ರಾಷ್ಟ್ರಗಳ ಮೈತ್ರಿ ತರ್‍ತೀನಿ ಅಂತೆಲ್ಲಾ ಮಾಡ್ತಾರಲ್ಲಾ–'ತಮ್ಮ'ತನದ ಅರಿವೇ ಇಲ್ಲದೆ–

ಅಂತಹ ಕೆಲಸದ ಸಲುವಾಗಿ ಒದ್ದಾಡುತ್ತ, ತಲೆ ತುರಿಸಿಕೊಳ್ಳುಕ್ಕೆ ವ್ಯವಧಾನವಿಲ್ಲದೆ ದುಡಿದಿದ್ದೆ, ವಾರದ ಶುಕ್ಲಾರ್ಧದಲ್ಲಿ. ಆದರೆ ಭಾನುವಾರ ಮಧ್ಯಾಹ್ನ ನನಗೇ ವಿಾಸಲು.

ಮಧ್ಯಾಹ್ನದ ಊಟಕ್ಕೆ ಕುಳಿತಾಗ, ಖಾಲಿ ತಟ್ಟೆಯು ಎದುರಿಗೆ ಕುಳಿತು "ಏನಡಿಗೆ ಇವತ್ತು ?" ಎಂದೆ.

"ಮೈ ಚೆನ್ನಾಗಿತ್ತಲ್ಲ ಅಂದ್ರೆ ! ಮೂರು ದಿನದಿಂದ ಜ್ವರ ಬರ್ತಾ ಇತ್ತು. ನೀವು ತುಂಬಾ ಆಯಾಸ ಪಟ್ಟುಕೊಂಡು ಬರುತ್ತಿದ್ದೀರಿ. ಸುಸ್ತು ಬಡಿದು ಮನೆಗೆ ಬಂದಾಗ ನಾನೂ ರೋಗದ ವರದಿ ಶುರುಮಾಡಿದರೆ ಸರಿಯಲ್ಲ ಎಂದು, ಅದಕ್ಕೇ ನಿಮಗೆ ಹೇಳಲೇ ಇಲ್ಲ. ಇವತ್ತು ಬೆಳಗ್ಗೆ ಮೈ ಬೆವರಿತ್ತು. ಆದರೆ ತುಂಬಾ ಸುಸ್ತುಬಡಿದುಹೋಯಿತು ಅಂದ್ರೆ... ಜ್ವರ ಇದ್ದಾಗಲೇ ವಾಸಿ. ಮನಸ್ಸನ್ನು ಗಟ್ಟಿಮಾಡಿದರೆ, ನಗುತ್ತಾ ಕೆಲಸ ಮಾಡಬಹುದಾಗಿತ್ತು. ಆದರೆ ಜ್ವರ ಬಿಟ್ಟು, ಬೆವತ ಮೇಲೆ, ಮೈ ಹಗೂರಾಯಿತು. ಆದರೆ ಮನಸ್ಸನ್ನು ಗಟ್ಟಿ ಮಾಡಲು ಸಾಧ್ಯವೇ ಇಲ್ಲ ಅಂದ್ರೆ. ಬೆಳಗ್ಗೆ ಎಂಟಕ್ಕೆ ನೀವು ಹೊರಗೆ ಹೋದಿರಿ. ಆ ಕಡೆ ನೀವು ಹೋದಿರಿ, ಈ ಕಡೆ ಬಿದ್ದುಕೊಂಡೆ. ಎದ್ದಾಗ ಹನ್ನೆರಡಾಗಿತ್ತು. ಆಗ ಒಲೆ ಹಚ್ಚಿದೆ. 'ಬಂದುಬಿಡ್ತಾರಲ್ಲಪ್ಪಾ ! ಒಂದು ಗಂಟೆಗೆ !' ಅಂತ ಹೆದರಿದೆ. ಆದರೆ ಸುಸ್ತು ಆವರಿಸಿತ್ತು. 'ಬಂದರೆ ಬರಲಿ, ಮಾಡಿದ್ದನ್ನು ತಿನ್ನಲಿ ಒಂದು ದಿನ' ಅಂತ ಗೊಡ್ಡುಸಾರು ಅನ್ನ ಮಾಡಿದೆ ; ಮೆಂತ್ಯದ ಹಿಟ್ಟಿನ ಗೊಜ್ಜು ಕಲಸಿದೆ ; ಬಾಳಕವನ್ನು ಸೌಟಿನಲ್ಲಿ ಕರಿದೆ ; ನಿನ್ನೆ ರಾತ್ರಿ ಎಲ್ಲೋ ಹೋಗಿ ಊಟಮಾಡಿಕೊಂಡು ಬಂದಿದ್ರಿ. ನಿಮ್ಮ ಭಾಗದ ಹಾಲು ಉಳಿದಿತ್ತು. ಹೆಪ್ಪು ಹಾಕಿಟ್ಟೆ. ಗಟ್ಟಿ ಮೊಸರಿದೆ ಅಂದ್ರೆ" ಎಂದು ಹೇಳುತ್ತಾ ಮನೆಯೊಡತಿ ತಟ್ಟೆಯ ಮುಂದೆ ಟಿಫನ್‌ಕ್ಯಾರಿಯರೊಂದನ್ನು ಇಟ್ಟಳು. ಸಣ್ಣ ತಟ್ಟೆಯಲ್ಲಿ ಎಂಟು ಹತ್ತು ಬಾಳಕವನ್ನು ತಂದಿಟ್ಟು, "ನೀವೇ ಬಡಿಸಿಕೊಳ್ಳಿ ಅಂದ್ರೆ. ಎದುರಿಗೆ ಕೂತಿರ್ತೀನಿ, ಏನಾದರೂ ಬೇಕಾದರೆ ತಂದು ಕೊಡ್ತೀನಿ" ಎಂದು ಹೇಳಿ ಎದುರಿನಲ್ಲಿ, ಹಿಂದಿದ್ದ ಗೋಡೆಗೆ ಬೆನ್ನು ಹಚ್ಚಿ, ಕುಳಿತುಕೊಂಡಳು.

ಗೊಡ್ಡು ಸಾರು ಅನ್ನ ಕಲಸಿ, ಬಾಳಕ ನೆಂಚಿಕೊಂಡು ಚೊಚ್ಚಲು ತುತ್ತು ಊಟಮಾಡಿದೆ. ಮೆಂತ್ಯದ ಹಿಟ್ಟನ್ನು ಅನ್ನದ ಜತೆಗೆ ಕಲಸಿ, ಬಾಳಕಗಳನ್ನು ನೆಂಚಿಕೊಂಡು, ಸಾವಧಾನವಾಗಿ ಅಗಿದು ಜಗಿದು, ನುಂಗಲು ಅವಸರಪಡದೆ,

ನುಂಗಿದೆ. ಮರುಂಚಲು ತುಂತ್ತು ಮೊಸರಿಗೆ ಅನ್ನವನ್ನು ಕಲಸಿ, ಉಳಿದ ಮೆಂತ್ಯದ ಹಿಟ್ಟನ್ನು ನೆಂಚಿಕೊಂಡೂ, ಕಲ್ಲಿನ ಹರಳೊಂದನ್ನೂ ಅಗಿಯದೆ, ಹೊಟ್ಟೆ ತುಂಬಾ ಉಂಡೆ. ಮಿಕ್ಕಿದ್ದ ಬಾಳಕದ ಎರಡು ಚೂರುಗಳನ್ನು ನೆಂಚಿಕೊಂಡು ತಂಪಾಗಿ ತೇಗಿದೆ.

"ಪಾತಕ್ಕ ಕಳಿಸಿದ್ದೇನೆ ಈ ಊಟಾನ ?" ಎಂದೆ.

"ಇಲ್ಲ ಅಂದ್ರೆ ನಾನೇ ಮಾಡಿಟ್ಟಿದ್ದು. ರುಚಿಯಾಗಿದ್ದಿರಬೇಕು, ಎಲ್ಲ ವನ್ನೂ ಮುಗಿಸಿದ್ದೀರಿ" ಎಂದಳು.

"ನಿನ್ನ ಊಟಕ್ಕೆ ಏನಾದರೂ ಮಿಕ್ಕಿದೆಯೇನೆ ?" ಎಂದೆ, ನನ್ನ ಹೊಟ್ಟೆ ತಂಪಾದ ಮೇಲೆ.

"ಹಸಿವೇ ಇಲ್ಲ ಅಂದ್ರೆ. ಬಾಯೆಲ್ಲ ಕಾರ್ಕೋಟಕ ವಿಷವಾಗಿದೆ. ಊಟ ವೇನೂ ಬೇಡ ನನಗೆ. ನಿಮ್ಮೂಟ ಆದ ಮೇಲೆ ಪಾತ್ರೆ ತೊಳೆದು ಬಿದ್ದುಗೊಂಡರೆ ಸಾಕು ಎನ್ನಿಸಿದೆ" ಎಂದಳು ಮನೆಯೊಡತಿ.

"ಬೆಳಗಿನಿಂದ ಏನನ್ನೂ ತಿನ್ನಲಿಲ್ಲವೇನೇ ?" ಎಂದು ಕಾತರದಿಂದ ಕೇಳಿದೆ.

"ಪಾತಕ್ಕ ಗೊಜ್ಜವಲಕ್ಕಿ ಕಳಿಸಿದ್ದರು ಬೆಳಗ್ಗೆ. ನಿಮಗೆ ತೆಗೆದಿಡೋಣ ಅಂತ ಇದ್ದೆ. ಆದರೆ ಸ್ವಲ್ಪ ಬಾಯಿಗೆ ಹಾಕಿಕೊಂಡೆ : ಆಮೇಲೆ ತಿನ್ನುತ್ತಾ ತಿನ್ನುತ್ತಾ, ಡಬರಿ ಖಾಲಿ ಆಯ್ತು. ಎದ್ದಮೇಲೆ ಆದ ಅಡಿಗೆ ಮಾಡಿದರಾ ಯಿತು ಅಂತ ಮಲಗಿಕೊಂಡುಬಿಟ್ಟೆ ಅಂದ್ರೆ" ಎಂದಳು.

"ಈಗ ಹೋಗಿ ಮಲಗಿಕೋ. ಪಾತ್ರೆಗಳನ್ನು ನಾನು ತೊಳೆದಿಡುತ್ತೇನೆ" ಎಂದು ಆಕೆಗೆ ಜುಲುಮಿನಿಂದ ಹೇಳಿ, ಹಾಸಿಗೆಗೆ ದಬ್ಬಿ, ಕಂಬಳಿ ಹೊದಿಸಿ ಮಲಗಿಸಿ, ಊಟದ ಮನೆ, ಅಡಿಗೆ ಮನೆ ವ್ಯವಸ್ಥೆಯನ್ನು ಸರಿಮಾಡಿದೆ.

ಬಂದು ಮಲಗಿದರೆ ನಿದ್ರೆ ಹತ್ತಲೇ ಇಲ್ಲ.

## ಕಲಿತ ಪಾಠ

ಕಲಿತ ಪಾಠಗಳೇನು ಎಂದು ಅಭ್ಯಾಸಕ್ಕೆ ತೊಡಗಿದೆ. ನನ್ನ ಮೇಲೆ ಆದ ಪರಿಣಾಮಗಳನ್ನು ಲೆಕ್ಕ ಹಾಕಿದೆ.

ಶಾಮರಾಯನಿಗೆ ವಾಸಿಯಾಗಬೇಕು ಎಂದು ಆದರದಿಂದ ಮಂತ್ರಿಗಳು

ಶ್ರಮ ತೆಗೆದುಕೊಂಡಿದ್ದರು. ಶ್ರದ್ಧೆಯನ್ನು ವಹಿಸಿ ನಾನೂ ಕಷ್ಟಪಟ್ಟಿದ್ದೆ. ಆದರೆ ಏನೊಂದೂ ಪ್ರಯೋಜನವಾಗಿದ್ದಿರಲಿಲ್ಲ.

ಸಾಯುವ ಮಗುವನ್ನು ಹೊತ್ತುತಂದು, ನಾಡ ಮೂಢನಂಬಿಕೆಗಳನ್ನು ನನಗೆ ತಿಳಿಸಿ, ಅಳುವಂತೆ ಸನ್ನಿವೇಶಗಳು ಒದಗಿದರೂ, ಸಮಾಧಾನದಿಂದ ಇರುವ ಚಿತ್ತಶಕ್ತಿಯನ್ನು ಆ ನಂಬಿಕೆಗಳಿಂದ ರೂಢಿಸಿಕೊಳ್ಳಬಹುದು ಎಂದು ಪ್ರತ್ಯಕ್ಷವಾಗಿ ನಿದರ್ಶನವನ್ನಿತ್ತಿದ್ದ, ಆ ಬುಡುಬುಡುಕೆಯುವನು.

ಬುಡುಬುಡುಕೆಯುವನ ವೇಷ ಧರಿಸಿ ಬಂದ ದೇವರೇ ನನ್ನ ಮನಸ್ಸಿನಲ್ಲಿ ವಿಚಾರಧಾರೆಯನ್ನು ಅನಂತರ ಹರಿಸಿ, ಶಾಮರಾಯನ ಮನಸ್ಸಿನಲ್ಲಿದ್ದಿರಬಹುದಾದ 'ದೆವ್ವ'ದ ಜಾಡನ್ನು ಕಂಡುಹಿಡಿಯಲು ಸಹಾಯ ಮಾಡಿದ್ದ.

ಎಷ್ಟೋ ರೀತಿ ನೀತಿಗಳಿಂದ ಗಂಡಸರು ವಿಚಾರಮಾಡಿ ಒಪ್ಪಿಸಿ ಚಿಕಿತ್ಸೆಗೆ ಪ್ರಯತ್ನಿಸಿದರೂ ಫಲವು ವಿಸ್ಮಯಂಕಾರಿಯಾಗಲಾರದು. ಆದರೆ ವಿಶ್ವಾಸದಿಂದ ಮನೆಯ ಒಡತಿಯರಾದ ಹೆಂಗಸರ ಉಪಚಾರದಿಂದ ವಿಚಿತ್ರವಾದ ರೀತಿಯಲ್ಲಿ ಅನಿರೀಕ್ಷಿತವಾದ ಗುಣವನ್ನು ಕಾಣಬಹುದು-ಎಂಬುದನ್ನು ಅರಿತೆ.

## ೫. "ಸಿಡಿರ್ಭೋವಮು ತಲೆಯನ್ನು ಬಿಗಿದಿದೆ"

ಹುತ್ತವ ಬಡಿದರೆ ಹಾವು ಸಾಯಬಲ್ಲದೇ ಅಯ್ಯಾ !
ಹುತ್ತದೊಳಿಪ ಹಾವಾವುದು ತಿಳಿಯುವುದು ಎಂತಯ್ಯಾ !

ಗಣೇಶನ ಹಬ್ಬ ಬಂದಿತು ಅಂದರೆ ದವಾಖಾನೆಗಳಲ್ಲಿ ಒಂದು ವಾರ ದೊಂಬಿ ಕೂಡುತ್ತೆ ಅಂತಲೇ ಹೇಳಬಹುದು. ಕಡುಬಿನ ಜತೆಗೆ ಚೇಪೇಕಾಯಿ ತಿಂದು ಅಜೀರ್ಣದಿಂದ ನರಳುವ ಹುಡುಗರು, ಮಕ್ಕಳು ; ಚಪಲದಿಂದ ಹಬ್ಬದ ದಿನ ಯೌವನದಲ್ಲಿ ತಿಂದಂತೆ ತಿಂದು ನರಳುವ ದೋರೆಗಾಯಿಮಂದುಕರು, ಹಣ್ಣುಹಣ್ಣು ಮುದುಕರು : ಇವರುಗಳನ್ನು ಕರೆತರುವ ಸಿಬ್ಬಂದಿ; ಎಲ್ಲವೂ ಸೇರಿ ಸುಮಾರು ದೊಂಬಿ ದವಾಖಾನೆಗಳಲ್ಲಿ ಒಂದು ವಾರ ನಡೆಯುತ್ತೆ. ಸಮಾಧಾನ ವಾಗಿ ರೋಗಿಯ ಹತ್ತಿರ ಮಾತನಾಡಲು ಅವಕಾಶವಿರುವುದಿಲ್ಲ, ಬಂದವರಿಗೆಲ್ಲ ಅಸಂತೃಪ್ತಿ. ಡಾಕ್ಟರಿಗಂತೂ ಅಪರಿಮಿತ ಅಸಂತೃಪ್ತಿ, ತಾನು ಮಾಡುವ ಕೆಲಸಕ್ಕೆ ಸಾಕಷ್ಟು ವೇಳೆಯಿಲ್ಲವಲ್ಲಾ ಎಂದು. ಅಂತಹ ಗಲಾಟೆಯ ಸಮಯ ದಲ್ಲಿ ರೋಗಿಗಳ ಕಡೆಯವರಾರಾದರೂ ಎಳ್ಳಂಬಳಸೆ ಮಾತನಾಡುವುದಕ್ಕೆ ಪ್ರಾರಂಭಿಸಿದರೆ ಡಾಕ್ಟರು ತಾಳ್ಮೆತಪ್ಪುವುದು ಸ್ವಾಭಾವಿಕ.

ವಿನಾಯಕನ ಚತುರ್ಥಿಯಾದ ಮಾರನೆಯ ದಿನ ಬೆಳಗ್ಗೆ ಹತ್ತು ಹನ್ನೊಂದು ಗಂಟೆಗೆ ನನಗೆ ಹಾಗಾಗಿತ್ತು. ಆ ಸಮಯದಲ್ಲಿ ಗರಿಗರಿ ಸೂಟು

ಧರಿಸಿ, ಕೈಲಿ ಹ್ಯಾಟ್ ಹಿಡಿದಿದ್ದ ೨೫–೨೬ರ ಪ್ರಾಯದ ಯುವಕನೊಬ್ಬನು ಟಿಕಟಿಕ ಶಬ್ದಮಾಡುತ್ತ ದವಾಖಾನೆಗೆ ಬಂದ.

"ನನ್ನ ಗುರುತು ಸಿಕ್ಕಿತೇ, ಡಾಕ್ಟರೇ ?" ಎಂದ.

ಈ ಪ್ರಶ್ನೆಯನ್ನು ಕೇಳಿದಾಗಲೆಲ್ಲಾ ಡಾಕ್ಟರಿಗೆ ತಾಪತ್ರಯ. 'ಗುರುತು ಸಿಗಲಿಲ್ಲ' ಅಂತ ದಿಟ ಹೇಳಿದರೆ—"ನಿನ್ನೆ ಮೊನ್ನೆ ಪರೀಕ್ಷೆ ಮಾಡಿ ಔಷಧಿ ಕೊಟ್ಟಿದ್ದೀರಿ. ಅಷ್ಟರಲ್ಲೇ ಮರೆತುಹೋದಿರಾ ? ಇಷ್ಟು ಬೇಗ ಮರೆಯುವ ನೀವು ೨೦–೩೦ ವರ್ಷಗಳ ಹಿಂದೆ ಓದಿದ ವೈದ್ಯವಿಷಯಗಳಲ್ಲಿ ಜ್ಞಾಪಕದಲ್ಲಿಟ್ಟಿದ್ದೀರಿ ಅಂತ ಹೇಗೆ ನಂಬುವುದು' ಎಂದು ಆತನಿಗೆ ನಮ್ಮಲ್ಲಿ ನಂಬಿಕೆಯೇ ಕಡಮೆಯಾಗಬಹುದು. ಅಥವಾ "ಗುರ್ತಿಲ್ಲದೇ ಏನಯ್ಯಾ ! ಅಷ್ಟು ಅರುಳು ಮರುಳೇ ನನಗೆ ?" ಎಂದು ತೇಲಿಸಿ ನುಡಿದರೆ, ಮುಂದಿನ ಮಾತುಗಳಲ್ಲಿ ಎಲ್ಲಿ ಗುಟ್ಟು ರಟ್ಟಾಗುತ್ತೋ ಎಂಬ ಭಯ. ಹೀಗಾಗಿ ಇಂತಹ ಪ್ರಶ್ನೆಗಳನ್ನು ಉತ್ತರಿಸುವಾಗ, ಎಲ್ಲ ಚಾಣಾಕ್ಷತೆಯನ್ನೂ ಬಳಸಿಕೊಳ್ಳಬೇಕು. ತಲೆಗೆಲ್ಲಾ ಒಂದೇ ಮಂತ್ರ ಹೇಳುವಂತಿಲ್ಲ.

"ಗುರ್ತಿಲ್ಲದೆ ಏನಯ್ಯಾ ! ಆದರೆ ಪಸಂದ್ ಮೀಸೆಯನ್ನು ದೊಡ್ಡದಾಗಿ ಬೆಳೆಸಿಬಿಟ್ಟಿದ್ದೀ. ಒಂದು ಕ್ಷಣ ಪೆಚ್ಚಾದೆ" ಎಂದು ಹೇಳಿದೆ. ಒಂದೆರಡು ತಿಂಗಳುಗಳಲ್ಲಿ ಈತ ಬಂದಿರಲಿಲ್ಲ ಅಂತ ಖಾತರಿಯಾಗಿತ್ತು. ಬಹಳ ಉಪಚಾರ ಮಾಡಿ ಮೀಸೆಯನ್ನು ಬೆಳಸಿ ಬಾಚಿ ಹುರಿಹಾಕಿದ್ದಾನೆ ಅಂದ ಮೇಲೆ, ಮೀಸೆಯ ಮೇಲಿನ ಜಂಭ ತುಂಬಾ ಇರಬೇಕು ; ಈ ಮೀಸೆಯನ್ನು ಮಾತಿಗೆ ಬಳಸಿಕೊಂಡರೆ ಅವನಿಗೂ ಸಂತೋಷವಾಗಬಹುದು–ಎಂದು ಅನ್ನಿಸಿತ್ತು.

"ಹೌದು ಡಾಕ್ಟರೇ ! ನಿಮಗೆ ಅಸಾಧ್ಯ ಜ್ಞಾಪಕಶಕ್ತಿ. ಇಷ್ಟು ಜನ ಬರ್ತಾರೆ, ಎಲ್ಲರ ಹೆಸರನ್ನೂ ನೆನಪಿನಲ್ಲಿಟ್ಟುಕೊಂಡು ಮಾತನಾಡಿಸ್ತೀರಲ್ಲ ! ನನ್ನ ಕೆಲಸದಲ್ಲಿ ಜಬರ್ದಸ್ತಿ. ಜೋರು, ಹೊರಗೆ ಕಾಣಿಸದೇ ಇದ್ದರೆ ಕೆಲಸವೇ ನಡೆಯುಲ್ಲ. ಅಬ್ಕಾರಿ ಇಲಾಖೆಯಲ್ಲಿ ಆಫೀಸರ್ ಆಗಿದ್ದೇನೆ" ಎಂದು ತನ್ನ ಪ್ರವರವನ್ನು ಶುರುಮಾಡುವ ಲಕ್ಷಣಗಳನ್ನು ತೋರಿಸಿದ.

ಬಂದ ಕೆಲಸ ಹೇಳಿ ಹೋಗಬಾರದೇ, ಎಂದು ನನಗೆ ಕಾತರ. ಹೀಗೇ ಬಿಟ್ಟರೆ ಇವನೇನೂ ಬೇಗ ಮುಗಿಸುಲ್ಲ ಎಂದುಕೊಂಡು "ಏನು ಬೇಕಾಗಿತ್ತು ? ನೀವೇನೋ ಚೆನ್ನಾಗಿ ಕಾಣ್ತೀರಿ. ಕಾಯಿಲೆ ಯಾರಿಗೆ ?" ಎಂದು ಕೇಳಿದೆ.

"ಅಮ್ಮನಿಗೆ ಕಾಯಿಲೆ ಆಗಿದೆ. ಡಾ॥ ನವರೋಜ್ ಅವರು ಎರಡು ತಿಂಗಳಿಂದಲೂ ಚಿಕಿತ್ಸೆ ಮಾಡುತ್ತಿದ್ದಾರೆ. ರಕ್ತದ ಒತ್ತಡ ತುಸು ಹೆಚ್ಚಾಗಿದೆ. ೧೮೦-೧೧೦ ಇದೆ. ಆದರೆ ಮೂತ್ರ ಶುದ್ಧವಾಗಿದೆ. ಕಣ್ಣಿನ ಪರೀಕ್ಷೆ ಮಾಡಿದಾಗ ರಕ್ತನಾಳಗಳು ಸ್ವಚ್ಛ ಕಂಡುಬಂದಿತು ಎಂದು ಡಾಕ್ಟರು ಹೇಳಿದರು. ಆದರೆ ಎರಡು ವಾರಗಳಿಂದ ಹಗಲೂ ರಾತ್ರಿ ಸಿಡಿಶೂಲೆಯು ತಲೆಯನ್ನು ಬಿಗಿದಿದೆ, ತುಂಬಾ ಕಷ್ಟವಾಗಿದೆ, ಎಂದು ರಾತ್ರೀಹಗಲು ನರಳುತ್ತಿದ್ದಾರೆ. ಏನೇನೋ ಚಿಕಿತ್ಸೆಗಳನ್ನು ಡಾ॥ ನವರೋಜ್ ಮಾಡಿದರು. ಆದರೂ ಗುಣ ಕಂಡುಬಂದಿಲ್ಲ. "ನಿನಗೆ ವರ್ಗವಾಗಿದೆ, ಊರು ಬಿಟ್ಟು ಹೋಗ್ತಿ, ಎಂದು ನಿಮ್ಮ ತಾಯಿಗೆ ತಲೆಶೂಲೆಯು ಹಿಡಿದಿದೆ. ಮನೋರೋಗಕ್ಕೆ ಮದ್ದುಂಟೆ?" ಎಂದು ಡಾಕ್ಟರು ಹೇಳಿದರು. 'ಜೀವಕ್ಕೇನೂ ಅಪಾಯವಿಲ್ಲ ಎಂದು ಹೇಳಿದರು. ನಿಮ್ಮನ್ನು ಒಂದು ಸರ್ತಿ ಕರೆದುಕೊಂಡು ಬಾ ಅಂತ ಅಮ್ಮ ಹೇಳಿದಳು. 'ಅವರು ಬಂದಾಗ ನಾನೂ ಬರುತ್ತೇನೆ, ಅವರು ಬರುವ ವೇಳೆಯನ್ನು ತಿಳಿಸಿದರೆ' ಎಂದು ಡಾಕ್ಟರ್ ನವರೋಜ್ ಕೂಡ ಹೇಳಿದ್ದಾರೆ" ಎಂದು ಹೇಳಿದ.

"ಸಂಜೆ ಐದು ಗಂಟೆಗೆ ಬರುತ್ತೇನೆ, ಡಾ॥ ನವರೋಜ್ ಅವರು ಬರುಕ್ಕಾದರೆ ಬರಲಿ, ಇಲ್ಲದಿದ್ದರೆ ನನಗೆ ತೋಚಿದ್ದನ್ನು ಬರೆದುಕೊಡುತ್ತೇನೆ ; ಅವರಿಗೆ ನಂತರ ಕೊಟ್ಟರಾಯಿತು" ಎಂದು ಹೇಳಿ, ಅವನನ್ನು ಕಳಿಸಿಕೊಟ್ಟೆ.

ಅವರ ಮನೆಯ ವಿಳಾಸವಿದ್ದ ಪರಿಚಯಕಾರ್ಡನ್ನು ಅವನು ಕೊಟ್ಟಾಗ ಡೈರಿಯಲ್ಲಿರಿಸಿ ಜೇಬಿನೊಳಗಿಟ್ಟೆ. ಇತರ ರೋಗಿಗಳ ಸಂಖ್ಯೆ ಹೆಚ್ಚಾಗಿದ್ದುದರಿಂದ ಆ ಕಾರ್ಡನ್ನು ನೋಡಲೇ ಇಲ್ಲ.

* * *

ಸಾಯಂಕಾಲ ನಾಲ್ಕು ಗಂಟೆಗೆ ಮನೆಬಿಟ್ಟು, ಸಂಜೆಯ ನಿತ್ಯಯಾತ್ರೆಗೆ ಹೊರಡುವಾಗ ಡೈರಿ ತೆಗೆದೆ. ಪರಿಚಯದ ಕಾರ್ಡು ಸಿಕ್ಕಿತು. ಐದು ಗಂಟೆಯ ಭೇಟಿಯ ನೆನಪಾಯ್ತು. ಬೇಗ ಇದ್ದ ಕೆಲಸ ಮುಗಿಸಿ ಐದರ ಹೊತ್ತಿಗೆ ಅವರ ಮನೆಗೆ ಹೋದೆ. ಪರಿಚಯದ ಕಾರ್ಡಿನಲ್ಲಿ 'ಅ. ಬ. ಕ. ಅಬ್ಕಾರಿ ಅಸಿಸ್ಟೆಂಟ್ ಕಮಿಷನರ್' ಅಂತಿತ್ತು. 'ಅ.ಬ.ಕ. ಯಾರು ? ಅವರ ತಾಯಿ ನನ್ನನ್ನು

ಕರಸಂ ಅನ್ನಬೇಕಾದರೆ, ನನ್ನ ಪರಿಚಯವಿದ್ದಿರಬೇಕು. ಯಾರಿರಬಹುದು ? ಎಂದೆಲ್ಲಾ ಅವರ ಮನೆಯನ್ನು ಸೇರುವ ತನಕ ಯೋಚಿಸಿದೆ. ಬಗೆಹರಿಯಲಿಲ್ಲ.

ಅವರ ಮನೆಯನ್ನು ಸೇರಿದಾಗ ಡಾ॥ ನವರೋಜ್ ಅವರು ಆಗಲೇ ಬಂದಿದ್ದರು. ನಮ್ಮೂರಿಗೆ ಹೊಸದಾಗಿ ಬಂದಿದ್ದ ಡಾಕ್ಟರವರು. ವಿಲಾಯಿತಿ ಯಲ್ಲಿ ವ್ಯಾಸಂಗ ನಡೆಸಿ ಯಶಸ್ವೀ ಪ್ಯಾಸುಮಾಡಿ ಬಂದ ಶಹಣೆಯವರು ಎಂದು ಕೇಳಿದ್ದೆ. ಆದರೆ ಪರಿಚಯವಿರಲಿಲ್ಲ. ಬಹಳ ಆದರದಿಂದ ಅವರನ್ನು ಮಾತ ನಾಡಿಸಿದೆ. ಆತನೂ ವಿನಯಾದರಗಳಿಂದ ಮಾತನಾಡಿಸಿದ. "ರೋಗಿಯನ್ನು ತಾವು ಪರೀಕ್ಷೆಮಾಡಿ, ಡಾಕ್ಟರ್. ಆಮೇಲೆ ನನ್ನ ಪರೀಕ್ಷಾಫಲಿತಾಂಶಗಳನ್ನೂ ಈ ತನಕ ಮಾಡಿರುವ ಚಿಕಿತ್ಸೆಯನ್ನೂ ಹೇಳುತ್ತೇನೆ. ಅನಂತರ ನಿಮ್ಮ ಸಲಹೆಯನ್ನು ತೆಗೆದುಕೊಂಡು, ಮುಂದೇನುಮಾಡುವುದಂ ಎಂದು ನಿರ್ಧರಿ ಸೋಣ" ಎಂದು ಡಾ॥ ನವರೋಜ್ ಅವರು ವಿಚಕ್ಷಣೆಯಿಂದ ಹೇಳಿದರು.

ರೋಗಿಯು ಮಲಗಿದ್ದ ಕೊಠಡಿಗೆ ಹೋದೆ. ೪೦-೪೫ರ ಪ್ರಾಯದ ಮುದುಕಿ ಮಲಗಿದ್ದಾಳೆ. ತಲೆಗೆ ಬಿಗಿಯಾಗಿ ಹಣೆಯ ಮೇಲಕ್ಕೆ ಲಪ್ಪಟ್ಟೆ ಕಟ್ಟಿದೆ. ಹತ್ತಿರ ಹೋಗಿ ಮಂಚದ ಬಳಿ ಹಾಕಿದ್ದ ಕುರ್ಚಿಯಲ್ಲಿ ಕುಳಿತೆ.

"ಅಮ್ಮಾ ! ನಿಮ್ಮ ಡಾಕ್ಟರು ಬಂದಿದ್ದಾರೆ" ಅಂತ ಮಗ ಕೂಗಿಹೇಳಿದ. ಈ ಕಡೆಗೆ ರೋಗಿಯು ಹೊರಳಿದರು. ಮುಖ ಕಂಡಿತು.

ರೋಗಿ ಯಾರು ಅಂತ ? ಅಂಬುಜಮ್ಮ !!

ಅಚ್ಚಳಿಯದೆ ಇದ್ದ ೮-೧೦ ವರ್ಷಗಳ ಹಿಂದಿನ ನೆನಪು ಒದ್ದುಕೊಂಡು ಬಂದು, ಆಗ ನಡೆದದ್ದಲ್ಲಾ ಕ್ಷಣದಲ್ಲಿ ತಿರುಗಿ ಕಂಡು ಮಾಯವಾಯಿತು.

"ಏನಮ್ಮಾ ! ಹೇಗಿದ್ದೀರಿ ?" ಅಂದೆ.

"ನೀವೇ ನೋಡ್ತೀರಲ್ಲ ! ಏನಾದರೂ ಮಾಡಿ ತಲೇನ ಬಿಗಿಯುತ್ತಿರುವ ಈ ರ್ಷೋಮನ್ನು ಬಿಡಿಸಿ, ಡಾಕ್ಟರೇ !" ಎಂದರು.

ಪರೀಕ್ಷೆ ಮಾಡಿದೆ. ನಾಡಿಯು ನಿಮಿಷಕ್ಕೆ ೯೦-೧೦೦ ಬಡಿಯುತ್ತಿತ್ತು. ರಕ್ತದ ಒತ್ತಡವು ೧೭೦-೧೧೦ ಇತ್ತು. ಹೃದಯದಲ್ಲಾಗಲಿ ಶ್ವಾಸಕೋಶ ಗಳಲ್ಲಾಗಲಿ ಇನ್ಯಾವ ಅವ್ಯವಸ್ಥೆಯೂ ಇರಲಿಲ್ಲ. ಹೊಟ್ಟೆಯಲ್ಲಿ ಲಿವರ್ ಏನೂ ದೊಡ್ಡದಾಗಿರಲಿಲ್ಲ. ಸಾವಧಾನವಾಗಿ ನರಗಳ ಪರೀಕ್ಷೆ ಮಾಡಿದೆ. ಎಲ್ಲವೂ ಸರಿಕಂಡಿತು.

"ನೋಡೀಮ್ಮಾ ! ರಕ್ತದ ಒತ್ತಡವು ಸ್ವಲ್ಪ ಹೆಚ್ಚಾಗಿದೆ. ಆದರೆ ನಿಮ್ಮ ವಯಸ್ಸಿಗೆ ಸರಿಯಾಗಿದೆ. ಇದನ್ನು ಕಾಯಿಲೆ ಅಂತ ಕೂಡ ಹೇಳಬರುವುದಿಲ್ಲ. ಕೂದಲು ನರೆತ ಹಾಗೇ ರಕ್ತನಾಳಗಳೂ ನರೆತು ಬಿರುಸಾಗುತ್ತವೆ. ಅದಕ್ಕೇ ರಕ್ತದ ಒತ್ತಡವೂ ಹೆಚ್ಚಾಗುತ್ತದೆ. ಕೂದಲು ನರೆತಿದೆ ಎಂದು ಯಾರಾದರೂ ಹೆದರಿಕೊಳ್ಳುತ್ತಾರೆಯೇ ?" ಎಂದು ಧೈರ್ಯಹೇಳಲು ಶುರುಮಾಡಿದೆ.

"ಹೆದರಿಕೆ ಏನು ಬಂತು, ಡಾಕ್ಟರೇ ? ಬದುಕಿರಬೇಕು ಅಂತ ನನಗೇನು ಆಸೆ ? ಈ ತಲೆಶ್ನೋವು ಬಿಟ್ಟರೆ ಸಾಕು. ತೊಗೊಂಡು ಹೋದರೂ ಆಯಿತು. ಎರಡರಲ್ಲಿ ಒಂದು ಮಾಡಿಸಿ" ಎಂದರು, ಅಂಬುಜಮ್ಮ.

"ಅಂಥಾದ್ದೇನಮ್ಮ ಜೀವನಲ್ಲಿ ಬೇಜಾರುಪಡಿಸಿರೋದು ನಿಮ್ಮನ್ನ ? ಚೆನ್ನಾಗಿ ಬಾಳಿದ್ದೀರಿ. ಮುತ್ತಿನ ಮಣಿಯಾಗಿ ಎರಡು ಗಂಡುಮಕ್ಕಳು. ಮೊಮ್ಮಗುವನ್ನು ಬಿಟ್ಟು ಹೋಗಬೇಕು ಅಂತ ಏಕೆ ಅಂತೀರಿ ? ಎಂದೆ.

"ನೀವೂ ಇದನ್ನು ಕೇಳ್ತೀರಾ, ಡಾಕ್ಟರೇ ?" ಎಂದರು.

ಇದಕ್ಕೆ ಉತ್ತರವನ್ನು ಎಲ್ಲರೆದುರಿಗೂ ಹೇಳುವಂತಿರಲಿಲ್ಲ. ಮಾತು ಬದಲಾಯಿಸಿದೆ.

"ಎಷ್ಟು ದಿವಸದಿಂದ ಈ ಶ್ನೋವು ಹೆಚ್ಚಾಗಿದೆ ?" ಎಂದು ಕೇಳಿದೆ.

"ಎರಡು ಮೂರು ವಾರದಿಂದ ಹೆಚ್ಚಾಗಿದೆ" ಎಂದರು.

"ನಿಮ್ಮ ಎರಡನೇ ಮಗ ಎಲ್ಲಿದ್ದಾನೆ ಈಗ ? ಏನು ಮಾಡ್ತಾಇದಾನೆ ?" ಎಂದೆ.

"ಹಿಮಾಲಯದ ತಪ್ಪಲಿನಲ್ಲಿ ಘೂಂಟಾಕ್ ಹತ್ತಿರ ಅಂಚೆ ಇಲಾಖೇಲಿ ದೊಡ್ಡ ಕೆಲಸದಲ್ಲಿದ್ದಾನೆ" ಎಂದು ಹಿರಿಯ ಮಗ-ಅ.ಬ.ಕ. ತುಸು ಹೆಮ್ಮೆಯ ದನಿಯಲ್ಲೇ ಹೇಳಿದ.

ಅಷ್ಟು ಹೊತ್ತಿಗೆ ಹೊರಗಿನಿಂದ ಅಂಬುಜಮ್ಮನವರ ಯಜಮಾನರು ಬಂದರು. "ಐದು ಗಂಟೆಯ ಹೊತ್ತಿಗೆ ಬರಬೇಕೆಂದು ಎಷ್ಟೋ ಕಷ್ಟಪಟ್ಟೆ, ಡಾಕ್ಟರೇ ; ನೀವು ಬರೋವಾಗ ಇರಬೇಕು ಅಂತ. ಆದರೆ ಬಸ್ಸು ಚಕ್ಕರ್ ಕೊಟ್ಟುಬಿಡ್ತು, ಬರೋದು ಹೊತ್ತಾಯ್ತು. ನೀವು ಚೆನ್ನಾಗಿದ್ದೀರಾ ?" ಎಂದು ನನ್ನನ್ನು ವಿಶ್ವಾಸದಿಂದ ಮಾತನಾಡಿಸಿದರು.

ಅಂಬುಜಮ್ಮನವರ ಯಜಮಾನರು ಸಂಸ್ಕೃತದಲ್ಲಿ ಉದ್ದಾಮ ಪಂಡಿತ ರೆಂದೂ ಕಾರ್ಖಾನೆಯೊಂದರಲ್ಲಿ ಹಾಜರಾತಿ ಬರೆದುಕೊಳ್ಳುವ ಕೆಲಸದಲ್ಲಿದ್ದ ರೆಂದೂ ಗೊತ್ತಿತ್ತು.

"ಅಷ್ಟು ಯಾಕೆ ತೊಂದರೆ ತೆಗೆದುಕೊಂಡಿರಿ? ಕಾರ್ಖಾನೆ ಮುಗಿದ ಮೇಲೆ ಆರಾಮವಾಗಿ ಬರಬಹುದಿತ್ತಲ್ಲ? ನಿಮ್ಮ ಹುಡುಗ ಹೇಗೂ ಇಲ್ಲಿದ್ದಾನೆ" ಎಂದು ಹೇಳಿದೆ.

"ಕಾರ್ಖಾನೆ ಕೆಲಸದಿಂದ ರಿಟೈರ್ ಆಗಿ ಮೂರು ವರ್ಷ ಆಯಿತು, ಡಾಕ್ಟರೇ! ಮಾರುಕಟ್ಟೆಗೆ ಹೋಗಿದ್ದೆ, ಒಂದಿಷ್ಟು ಹಣ್ಣು ತರೋಣ ಅಂತ. ಹೊತ್ತಾಯಿತು" ಎಂದು ಹೇಳಿದರು.

ಆ ವೇಳೆಗೆ ಎರಡನೆಯ ಮಗನೂ ಬಂದ.

"ಕ.ಬ ಡ. ಅಲ್ಲವೇನಯ್ಯಾ ನೀನು? ಎಷ್ಟು ಎತ್ತರ ಬೆಳೆದಿದ್ದೀಯಯ್ಯಾ! ಅಂಚೆ ಇಲಾಖೇಲಿ ಫ್ಯಾಂಟೋಕ್‌ನಲ್ಲಿದೀಯಂತೆ. ಅಂಚೆ ಕಂಭಗಳ ಹಾಗೆ ಕೆಂಚಾಗಿ ಬಿಟ್ಟಿದೀಯಲ್ಲಾ! ಹಿಮಾಲಯದ ಹವಾಗುಣ ಅಂತೀನಿ. ಅಂದ ಹಾಗೆ ಯಾವಾಗ ಬಂದೆ? ಅಮ್ಮನಿಗೆ ಸಖತ್ ಖಾಯಿಲೆ ಎಂದು ತಂತಿ ಕಳಿಸಿ ದರು ಅಂತ ಕಾಣುತ್ತೆ!" ಎಂದೆ.

"ಹೌದು ಡಾಕ್ಟರೇ. ತಂತಿ ಬರುತ್ತಿದ್ದ ಹಾಗೆ ತುಂಬಾ ಪ್ರಯತ್ನ ಮಾಡಿ ರಜ ತೊಗೊಂಡು ಇಲ್ಲಿಗೆ ಬರೋಹೊತ್ತಿಗೆ ೫ ದಿನಗಳಾಯ್ತು. ಅಮ್ಮನ ಮುಖ ಸಿಗುತ್ತೋ ಇಲ್ಲವೋ ಎಂದು ಹೆದರಿಕೊಂಡೇ ಬಂದೆ. ಬಂದು ನೋಡಿದ ಮೇಲೆ, ಡಾ॥ ನವರೋಜ್ ಅವರು ಧೈರ್ಯ ಹೇಳಿದ ಮೇಲೆ, ಸ್ವಲ್ಪ ಸಮಾಧಾನವಾಯಿತು" ಎಂದು ಅವ ಹೇಳಿದ.

"ತಂತಿ ಯಾಕೆ ಕೊಟ್ಟು ಹೆದರಿಸಿದಿರಿ?" ಎಂದೆ.

ಮೊದಲ ಮಗ ಉತ್ತರ ಹೇಳಿದ: "ನಾಲ್ಕು ವಾರಗಳ ಹಿಂದೆ, ಹಠಾ ತ್ತಾಗಿ ಒಂದೆರಡು ನಿಮಿಷ ಅಮ್ಮ ಮಾತು ನಿಲ್ಲಿಸಿಬಿಟ್ಟರು. ಡಾ॥ ನವರೋಜ್ ಅವರು ಬಂದು ಪರೀಕ್ಷೆ ಮಾಡುವ ಹೊತ್ತಿಗೆ ಎಲ್ಲವೂ ಸರಿಯಾಗಿತ್ತು. ಆದರೂ ಅಪ್ಪ ಹೋಗಿ ತಂತಿ ಕೊಟ್ಟುಬಂದುಬಿಟ್ಟರು" ಎಂದು ಕಾರಣವನ್ನು ತಿಳಿಸಿದ.

"ಒಳ್ಳೆಯದೇ ಆಯ್ತು ಬಿಡು. ಎಷ್ಟು ದಿವಸ ಆಗಿತ್ತೋ ಅಮ್ಮನನ್ನು ನೋಡಿ! ಈ ನೆವದಲ್ಲಾದರೂ ನೋಡೋ ಹಾಗೆ ಆಯಿತಲ್ಲಾ!" ಎಂದೆ.

"ಏಳು ವರ್ಷ ಆಗಿತ್ತು ಡಾಕ್ಟರೇ, ಅವನು ನಮ್ಮೂರು ಬಿಟ್ಟುಹೋಗಿ. ಒಂದು ಸಲ ಬಂದು ನೋಡಿಕೊಂಡು ಹೋಗಲಿ ಅಂತ ನನಗೂ ಅನ್ನಿಸಿತು. ಮನಸ್ಸು ಏಕೋ ಅಳುಕುತ್ತಲೇ ಇತ್ತು. ಯಾರೇನು ಹೇಳಿದರೂ ಅಳುಕುತ್ತಲೇ ಇದೆ. ಅದಕ್ಕೇ ನಾನು ಕಡೆಗೆ ಒಂದು ತಿಂಗಳಾದರೂ ರಜಾ ತೆಗೆದುಕೊಂಡು ಬಾ ಎಂದು ತಂತಿಕೊಟ್ಟೆ" ಎಂದು ಅಂಬುಜಮ್ಮನವರ ಯಜಮಾನರು ಹೇಳಿದರು.

ರೋಗಿಯನ್ನು ಪರೀಕ್ಷೆಮಾಡಿದ್ದಕ್ಕಿಂತ, ಈ ಮಾತುಗಳು ನನ್ನ ಮೇಲೆ ಹೆಚ್ಚು ಪರಿಣಾಮವನ್ನುಂಟುಮಾಡಿತು.

"ಡಾ॥ ನವರೋಜ್ ಹತ್ತಿರ ಮಾತನಾಡಿ ಬರುತ್ತೇನೆ. ಎಲ್ಲಾ ಸರಿ ಹೋಗುತ್ತೆ. ಏನೂ ಮನಸ್ಸಿಗೆ ಹಚ್ಚಿಕೊಳ್ಳಬೇಡಿ" ಎಂದು ಅಂಬುಜಮ್ಮನವರಿಗೆ ಹೇಳಿ, ಗೋಪ್ಯವಾಗಿ ಡಾ॥ ನವರೋಜ್ ಹತ್ತಿರ ಮಾತನಾಡಲು ಬೇರೊಂದು ಕೊಠಡಿಗೆ ಹೊರಟೆ.

"ಹೋಗುಂಕ್ಕೆ ಮುಂಚೆ ತಿರುಗಿ ನನ್ನನ್ನು ನೋಡುಂಕ್ಕೆ ಬರ್ತೀರಲ್ಲಾ ?" ಎಂದರು ಅಂಬುಜಮ್ಮನವರು.

"ನಿಮ್ಮ ಅನುಮತಿ ಪಡೆಯದೆ ನಿಮ್ಮ ಮನೆಯನ್ನು ಬಿಟ್ಟು ಹೋಗುತ್ತೇನೇನಮ್ಮಾ ?" ಎಂದು ಹೇಳಿ ನಡೆದೆ.

* * *

ಡಾ॥ ನವರೋಜ್ ಅವರು ತಮ್ಮ ಪರೀಕ್ಷಾಫಲಿತಾಂಶಗಳನ್ನೂ ನಡಸಿದ ಚಿಕಿತ್ಸಾವರದಿಯನ್ನು ವಿವರಿಸಿದರು :

"ನಾಡಿಯ ಬಡಿತವು ನಿಮಿಷಕ್ಕೆ ೯೮ರ ಮೇಲೆ ಹೋಗಿದ್ದಿಲ್ಲ. ರಕ್ತದ ಒತ್ತಡವು ೧೮೦ ರಿಂದ ೧೬೦ ವರೆಗೂ ಸಿಸ್ಟಾಲಿಕ್, ೧೧೦–೧೦೦ರ ವರೆಗೂ ಡಯಾಸ್ಟಾಲಿಕ್, ಇದೆ. ಹೃದಯದ ಶಕ್ತಿಯು ಸಾಕಷ್ಟಿದೆ. ಎಲೆಕ್ಟ್ರೋ ಕಾರ್ಡಿಯೋಗ್ರಾಂ ಅನ್ನು ಹದಿನೈದು ದಿನದ ಅಂತರಗಳಲ್ಲಿ ಎರಡು ಸಾರಿ ತೆಗೆದುಕೊಂಡೆ. ಯಾವ ರೀತಿಯ ಅವಲಕ್ಷಣವೂ ಕಂಡುಬರಲಿಲ್ಲ. ಜೀರ್ಣಾಂಗಗಳೆಲ್ಲಾ ಚೆನ್ನಾಗಿವೆ. ಲಿವರ್ ಉಬ್ಬಿಕೊಂಡಿಲ್ಲ. ಮಲವಿಸರ್ಜನೆ ಸಮರ್ಪಕವಾಗಿದೆ. ಐದಾರು ಬಾರಿ ಮೂತ್ರ ಪರೀಕ್ಷೆಮಾಡಿದೆ; ಯಾವ

ದೋಷವು, ಎಂದೂ, ಕಂಡುಬರಲಿಲ್ಲ. ದಿನಕ್ಕೆ ೫೦ ಔನ್ಸುಗಳಷ್ಟು ಮಾತ್ರ ವಿಸರ್ಜನೆಯಾಗುತ್ತಿದೆ. ನರಮಂಡಲವೂ ಸಮರ್ಪಕವಾಗಿದೆ. ಮೊಣಕಾಲು ಕುಟ್ಟಿದಾಗ ಸರಿಯಾಗಿ ರ್ಶೋಕು ಹೊಡೆಯಿತು. ಅಂಗಾಲು, ಕೆರೆದಾಗ ಹೆಬ್ಬೆರಳು ತಗ್ಗಿತು. ಕಣ್ಣಿನ ಪಾಪೆಗಳು ದುಂಡಾಗಿ, ಬೆಳಕಿಗೆ ಪ್ರತಿಕ್ರಿಯೆಯನ್ನು ಲಕ್ಷಣವಾಗಿ ಮಾಡಿದುವು.

"ದೇಹದಲ್ಲಿರುವ ಒಂದೇ ದೋಷ ಎಂದರೆ ತುಸು ಹೆಚ್ಚಾದ ರಕ್ತದ ಒತ್ತಡ. ಆದರಿಂದಾಗಿ ಸಿಡಿರ್ಶೋಮು ತಲೆಗೆ ಬಡಿದಿದ್ದರೆ, ಸರ್ಪಗಂಧಿ ಪ್ರಯೋಗ ಮಾಡಿದಾಗ ಗುಣ ಕಂಡುಬರಲೇಬೇಕು. ಹಾಗಾಗಲಿಲ್ಲ. ಪರೀಕ್ಷಾರ್ಥವಾಗಿ ಒಂದು ವಾರ 'ಉಪ್ಪು' ಇಲ್ಲದ ಪಥ್ಯವನ್ನು ಇರಿಸಿದೆ. ಯಾವ ಗುಣವೂ ಕಂಡುಬರಲಿಲ್ಲ.

"ಅಂದಮೇಲೆ ಮಾನಸಿಕ ಅಸಮಾಧಾನದಿಂದಲೇ ಹೀಗಾಗಿರಬೇಕು, ಎಂದು ದೃಢಮಾಡಿಕೊಂಡೆ. ಹಿರಿಯ ಮಗನಿಗೆ ವರ್ಗವಾಗಿದೆ. ಅವನು ಹೊರಟುಹೋದರೆ, ಮುದುಕ ಗಂಡ ಹೆಂಡತಿ ಇಬ್ಬರೇ ಇಲ್ಲಿ ಉಳಿದುಕೊಳ್ಳುತ್ತಾರೆ. ಮಗನ ವರ್ಗಾವಣೆಯನ್ನು ತಪ್ಪಿಸುವ ಹಾಗಿಲ್ಲ. ಸಿಡಿರ್ಶೋಮು ಇವರ ತಲೆಯನ್ನು ಬಿಡುವುದಿಲ್ಲ."

——ಎಂದು ಆತ ಎಲ್ಲವನ್ನು ಹೇಳಿದ.

ಎಷ್ಟು ಲಕ್ಷಣವಾಗಿ, ಶಾಸ್ತ್ರೀಯವಾಗಿ ವಿಚಾರಮಾಡಿ, ಶ್ರದ್ಧೆಯಿಂದ ಪ್ರಯೋಗ ನಡೆಸಿದ್ದರು ಅಂತ, ಡಾ॥ ನವರೋಜ್ ಅವರು ! ವಿಲಾಯಿತಿಯ ವೈದ್ಯವಿದ್ಯಾಭ್ಯಾಸದಲ್ಲಿ ಈ ರೀತಿಯ ಶಿಸ್ತು, ವಿಚಾರಮಾಡುವ ರೀತಿ, ಮನನ ಮಾಡಿ ಇದೇ ನೀತಿ ಇರಬಹುದು ಎಂದು ತಿಳಿಯುವುದು, ಇವೆಲ್ಲವನ್ನು ಪರಿಣಾಮಕಾರಿಯಾಗಿ ಕಲಿಸುತ್ತಾರೆ.

"ನೀವು ಹೇಳಿದ್ದನ್ನೆಲ್ಲಾ ಒಪ್ಪಿದೆ, ಡಾ॥ ನವರೋಜ್. ಆದರೆ ಎರಡು ಮೂರು ವಾರದ ಹಿಂದೆ ಒಂದೆರಡು ನಿಮಿಷ ಒಮ್ಮೆ ಮಾತು ನಿಂತುಹೋಗಿತ್ತು, ಅಂತ ಹೇಳಿದರು. ಅದಕ್ಕೆ ಏನು ಕಾರಣ ಇರಬಹುದು ಎನ್ನುತ್ತೀರಿ ? ಮಿದುಳಿನ ಮಾತಿನ ಭಾಗದಲ್ಲಿರುವ ರಕ್ತನಾಳಗಳೇನಾದರೂ ತಾತ್ಕಾಲಿಕವಾಗಿ ಸಂಕುಚಿತವಾಗಿ ಹಾಗಾಗಿರಬಹುದು ಎಂದು ಹೇಳುವಿರಾ ?" ಎಂದೆ.

"ಹೌದು, ಡಾಕ್ಟರೇ. ಹಾಗೇ ಇರಬೇಕು ಎಂದು ನಾನೂ ಊಹಿಸಿದೆ" ಎಂದರು.

"ಮುಂದೆ ಏನು ಮಾಡಬೇಕು ಅಂತ ನಿಮ್ಮ ಯೋಚನೆ ?" ಎಂದೆ.

"ಮನೋರೋಗಕ್ಕೆ ಮದ್ದುಂಟೆ ? ವರ್ಗವಾಗಿ ಮಗ ಹೋದಮೇಲೆ ಎರಡು ಮೂರು ವರ್ಷಗಳಾದರೂ ಆಗಬಹುದು. ಆದರೆ, ಮನಸ್ಸು ಇದ್ದುದ ರಲ್ಲೇ ಸಮಾಧಾನ ಹೊಂದಿಕೊಂಡು, ಸಿಡಿರೋಗವು ಕಡಿಮೆಯಾಗುತ್ತೆ. ಆತನಕ ಮೇಲ್ಮೇಲೆ ಚಿಕಿತ್ಸೆ ನಡಸುತ್ತಿರಬೇಕು" ಎಂದರು, ಡಾ|| ನವರೋಜ್.

"ಆಗೊಮ್ಮೆ ಆದಹಾಗೆ ತಿರುಗಿ ಮೆದುಳಿನಲ್ಲಿ ರಕ್ತನಾಳಗಳು ತಾತ್ಕಾಲಿಕವಾಗಿ ಸಂಕುಚಿತವಾಗಬಹುದಲ್ಲವೇ ?" ಎಂದೆ.

"ಆಗಬಹುದು. ಆದರೆ ವರ್ಗವಾಗಿ ಮಗ ಹೊರಟುಹೋದ ಎಂದು ಖಂಡಿತವಾದಾಗ, ಮನಸ್ಸನ್ನು ಗಟ್ಟಿಮಾಡಿಕೊಳ್ಳಬಹುದು. ಹಾಗಾದರೆ ತಿರುಗಿ ಆತರಹ ಆಗದೆಯೂ ಇರಬಹುದು" ಎಂದರು.

"ಮನಸ್ಸನ್ನು ಗಟ್ಟಿಮಾಡಿಕೊಳ್ಳುವ ಆಸೆಯೇ ಇಲ್ಲದಿದ್ದರೆ ?" ಎಂದೆ.

"ಹುಟ್ಟಿದ ಪ್ರಾಣಿಗಳಿಗೆಲ್ಲ ಆದಷ್ಟು ದಿವಸ ಹೇಗಾದರೂ ಬದುಕಲೇ ಬೇಕು ಎಂಬ ಮೂಲಭೂತ ಹಂಬಲವು ಆಜನ್ಮವಾಗಿ ಇದ್ದೇ ಇರುತ್ತಲ್ಲವೇ ?" ಎಂದರು.

"ದಿಟ, ಡಾಕ್ಟರೇ ! ಆದರೆ ಆ ಹಂಬಲವನ್ನು ಬಿಟ್ಟುಬಿಡುವಷ್ಟು ಕೆಲವು ವೇಳೆ ಮನಸ್ಸು ಬೇಸರಪಟ್ಟುಕೊಳ್ಳಬಹುದು ಅಲ್ಲವೇ ?" ಎಂದೆ.

"ಹೌದು, ಡಾಕ್ಟರೇ ! ನೀವನ್ನೋದು ನಿಜ. ಆದರೆ ಈಕೆಗೆ ಅಂತಹ ಬೇಸರವೇನಾಗಿದೆ ? ಯಾವುದೋ ಅಲ್ಪವಾದ ಕಾರಣ, ಮಗನ ವರ್ಗಾವಣೆಗೆ ಬೇಸರಪಟ್ಟುಕೊಂಡಿದ್ದಾರೆ. ಅದು ಮನಸ್ಸಿನಲ್ಲಿ ಗೂಢವಾಗಿರುವಷ್ಟು ಹಿರಿಯ ಕಾರಣವಲ್ಲ" ಎಂದರು ಡಾ|| ನವರೋಜ್.

ನನ್ನ ಮನಸ್ಸಿನಲ್ಲಿದ್ದುದನ್ನು ಹೇಳಿಯೇಬಿಡೋಣ ಎನ್ನಿಸಿತು. "ಛೇ ! ಛೇ ! ಹಾಗೆ ಮಾಡುವುದರಿಂದ ಇತರರಿಗೆ ಬರಬಾರದ ಸಂಕಟ ಬರಬಹುದು. ಬೇಡ" ಎಂದು ತೀರ್ಮಾನಿಸಿದೆ.

"ಆದರೂ ಡಾಕ್ಟರೇ ! ಅಂಬುಜಮ್ಮನವರನ್ನು ಎಂಟು ಹತ್ತು ವರ್ಷಗಳ ಹಿಂದೆ ಕೆಲವು ವರ್ಷಗಳು ನೋಡಿದ್ದೆ. ಈಕೆಯ ಮನಸ್ಸು, ಸಂಪ್ರದಾಯ

ಬದ್ಧವಾದ ನಡವಳಿಕೆ, ಇವೆಲ್ಲದರ ಪರಿಚಯು ನನಗುಂಟು. ಈಕೆಗೆ ಇಷ್ಟರಲ್ಲೇ ಲಕ್ವ ಹೊಡೆದರೂ ಹೊಡೆಯಬಹುದು ಎಂದು ನನಗೆ ಸಂಶಯ ಬರುತ್ತಿದೆ" ಎಂದೆ.

"ಹಾಗೆ ಸಂಶಯು ಬರಲು ಏನೂ ಕಾರಣವಿಲ್ಲವಲ್ಲ ?" ಎಂದರು ಡಾ॥ ನವರೋಜ್.

"ಅನುಭವದಿಂದ ಹೇಳುತ್ತೇನೆ. ಮಿಕ್ಕೆಲ್ಲ ವಿವರಣೆಯನ್ನು ಹೇಗೆ ಕೊಡಲು ಸಾಧ್ಯ ?" ಎಂದು ತೇಲಿಸಿ ಹೇಳಿದೆ.

"ಆದರೆ ಈ ಮಾತನ್ನು ಅವರಿಗೆ ಹೇಳುಲ್ಲ. ನಿಮ್ಮ ಹತ್ತಿರ ಮಾತ್ರ ಹೇಳುತ್ತಿದ್ದೀನಿ. ಒಳಗೆ ಹೋದಾಗ, ಯಥಾಪ್ರಕಾರ, ಧೈರ್ಯ ತುಂಬುವ ಮಾತುಗಳನ್ನಾಡುತ್ತೇನೆ. 'ನಾವಿಬ್ಬರೂ ಮಾತನಾಡಿಕೊಂಡಿದ್ದೇವೆ. ಡಾ॥ ನವರ್ಶೋಜ್ ಅವರೂ ಒಪ್ಪಿದ್ದಾರೆ. ಆ ರೀತಿ ಚಿಕಿತ್ಸೆಯನ್ನು ಮಾಡುತ್ತಾರೆ' ಎಂದು ಹೇಳುತ್ತೇನೆ. ಬನ್ನಿ" ಎಂದು ಅವರನ್ನೂ ಕರೆದುಕೊಂಡು ಕೊಠಡಿ ಬಾಗಿಲು ತೆಗೆದು ಅಂಬುಜಮ್ಮನವರಿದ್ದಲ್ಲಿಗೆ ಹೋದೆ.

"ಹೋಗಿಬರ್ತೀನಿ, ಅಮ್ಮಾ. ಡಾ॥ ನವರೋಜ್ ಅವರು ಮಾಡ ಬೇಕಾದ್ದನ್ನೆಲ್ಲ ಸರಿಯಾಗಿ ಮಾಡಿದ್ದಾರೆ. ಮುಂದೆ ಮಾಡಬೇಕಾದ ಚಿಕಿತ್ಸೆ ಯನ್ನು ಇಬ್ಬರೂ ಕುರಿತು ಯೋಚಿಸಿದ್ದೇವೆ. ಹಾಗೆ ಅವರು ನಡೆಸುತ್ತಾರೆ. ಖಂಡಿತ ನಿಮ್ಮ ಸಿಡಿರ್ಷೋಮು ಹೋಗುತ್ತೆ" ಎಂದು ಹೇಳಿದೆ.

"ಅದರ ಜತೆಯಲ್ಲೇ ಎಲ್ಲವೂ ಮುಗಿದುಹೋಗಲಿ. ಎಲ್ಲವೂ ಮರೆತು ಹೋಗಲಿ" ಎಂದರು ಅಂಬುಜಮ್ಮನವರು.

"ಖಂಡಿತವಾಗಿ ಮರೆತುಹೋಗುತ್ತಮ್ಮಾ ! ಖಂಡಿತವಾಗಿ ಮುಗಿದು ಹೋಗುತ್ತೆ !" ಎಂದು ನಾನೂ ಭರವಸೆ ಕೊಟ್ಟೆ.

* * *

ಇದಾದಮೇಲೆ ಎಂಟು ದಿನಗಳಾಗಿರಬಹುದು. ದಿನಪತ್ರಿಕೆಯನ್ನು ಬೆಳಗ್ಗೆ ತೆಗೆದಾಗ "ಇಂಥ ಅಧಿಕಾರಿಗಳ ಮಾತೃಶ್ರೀಯರಾದ ಅಂಬುಜಮ್ಮ ನವರು ತಮ್ಮ ೪೪ನೇ ವಯಸ್ಸಿನಲ್ಲಿ ಹಠಾತ್ತಾಗಿ ಲಕ್ವ ಬಡಿದು ನಿಧನರಾದರು.

ಅವರ ಆತ್ಮಕ್ಕೆ ಶಾಂತಿ ಇರಲಿ" ಎಂಬ ಸುದ್ದಿಯು 'ಮರಣ ಜನನ' ಶಿರೋನಾಮೆಯಲ್ಲಿ ಪ್ರಕಟವಾಗಿತ್ತು.

ಅದೇ ತಿಂಗಳು ವೈದ್ಯರ ಮಾಸಿಕ ಸಭೆಯಲ್ಲಿ ಡಾ|| ನವರೋಜ್ ಅವರು "ಅಂಬುಜಮ್ಮನವರು ಲಕ್ವ ಬಡಿದು ಸತ್ತುಹೋದರು. ನಿಮಗೆ ಹಾಗಾಗಬಹುದೆಂಬ ಸಂಶಯವಿತ್ತು. ಹಾಗೆ ಸಂಶಯ ಬರಲು ಕಾರಣವೇನು ?" ಎಂದು ಕೇಳಿದರು.

"ಯಾವಾಗಲಾದರೂ ಹೇಳ್ತೀನಿ, ಡಾಕ್ಟರ್. ಅದಕ್ಕೆ ಈಗಲೇ ಕಾಲ ಬಂದಿಲ್ಲ. ಹೇಳಿದ ಮೇಲೆ ನಿಮಗೇ ಗೊತ್ತಾಗುತ್ತೆ. ಯಾಕೆ ಆತನಕ ಹೇಳಲಿಲ್ಲ ಅಂತ" ಎಂದು ಹೇಳಿದೆ,

"ಮರೆಯುವುದಿಲ್ಲ, ಡಾಕ್ಟರ್. ಎಂದಾದರೂ ಹೇಳಿಯೇಹೇಳುತ್ತೇನೆ. ಜ್ಞಾಪಕವಿಟ್ಟುಕೊಂಡು ಹೇಳ್ತೀನಿ" ಎಂದು ಭರವಸೆಕೊಟ್ಟೆ.

"ವಿಚಾರಸರಣಿಯಲ್ಲೆ ಆಗಲಿ, ಶ್ರದ್ಧೆಯಲ್ಲಾಗಲೀ ಸ್ವಲ್ಪವೂ ಕಡಮೆ ಮಾಡಲಿಲ್ಲ ಡಾಕ್ಟರೇ ! ಆದರೆ ನಿಮಗೆ ಬಂದ ಅನುಮಾನವು ನನಗೇ ಬರಲೇ ಇಲ್ಲ. ಆಕೆ ಇನ್ನೂ ಹತ್ತಾರು ವರ್ಷಗಳು ಬದುಕಿರುತ್ತಾಳೆ ಎಂದೇ ನಂಬಿದ್ದೆ. ಇದನ್ನು ನಾನು ಮರೆಯೋಹಾಗಿಲ್ಲ. ಏಕೆ ಎಡವಿದೆ ? ಹೇಗೆ ತಪ್ಪಿದೆ ? ಎಂದು ತಿಳಿಯೋತನಕ ಸಮಾಧಾನವಿಲ್ಲ" ಎಂದು ಡಾ|| ನವರೋಜ್ ಕಾತರವನ್ನು ತೋರಿಸಿದರು.

"ಇಷ್ಟು ಮಾತ್ರ ನನ್ನ ಮಾತು ನಂಬಿ, ಡಾಕ್ಟರ್ ! ನಿಮ್ಮ ವಿಚಾರ ಸರಣಿಯಲ್ಲಿ ನೀವು ತಪ್ಪಲಿಲ್ಲ. ನಿಮ್ಮ ಪರೀಕ್ಷಾವಿಧಾನದಲ್ಲೂ ಎಡವಲಿಲ್ಲ. ಆ ವಿಷಯದಲ್ಲಿ ನೀವು ಕಾಳಜಿ ಮಾಡಬೇಡಿ" ಎಂದು ಸಮಾಧಾನ ಹೇಳಿದೆ.

* * * *

ಹತ್ತಾರು ವರ್ಷಗಳಾಯಿತು. ಕೇಳಿದ ಕೆಲವು ವರ್ತಮಾನಗಳಿಂದ, ಈಗ ಡಾ|| ನವರೋಜ್ ಅವರ ಸಂಶಯನಿವಾರಣೆ ಮಾಡಬಹುದು ಎಂದು ಅನ್ನಿಸಿತು. ಭಾನುವಾರ ಸಂಜೆ ನಮ್ಮನೆಗೆ ದಯವಿಟ್ಟು ಭೋಜನಕ್ಕೆ ಬರಬೇಕೆಂದು ಡಾ|| ನವರೋಜ್ ಅವರಿಗೆ ಆಹ್ವಾನವನ್ನು ಕಳಿಸಿದೆ. 'ಸಂಜೆ ಮುಂದೆಯೇ ಬಂದರೆ ಆ ಮಾತು ಈ ಮಾತು ಆಡುತ್ತಾ ಸ್ವಲ್ಪ ಕಾಲವನ್ನು

ಪ್ರಯೋಜನವಾಗುವ ರೀತಿಯಲ್ಲಿ ಕಳೆಯಬಹುದು. ಹಾಗೂ ನಮ್ಮನೆಯಲ್ಲಿ ತೆಂಗಿನಕಾಯಿ ಚಟ್ನಿ, ಅಕ್ಕಿರೊಟ್ಟಿಯನ್ನು, ಬೆಣ್ಣೆ ಸವರಿ ತಿಂದರೆ, ಸ್ವರ್ಗ ಸುಖವು ದೊರಕಬಹುದು' ಎಂದೂ ಸೂಚಿಸಿದೆ. ಆತನೂ ಆಹ್ವಾನವನ್ನು ಮನ್ನಿಸಿ ಸಂಜೆಗೆ ಮುಂಚೆಯೇ ಕಣ್ಬೆಳಕಿನಲ್ಲಿ ಬಂದರು.

ಆರಾಮಕುರ್ಚಿಯಲ್ಲಿ ಡಾ॥ ನವರೋಜ್ ಅವರನ್ನು ಕೂರಿಸಿ, ಉಪ್ಪೇರಿಯ ತಟ್ಟೆಯನ್ನು ಎದುರಿನಲ್ಲಿರಿಸಿ, 'ಸೊಂಟ ಹಿಡಿದುಕೊಳ್ಳುತ್ತೆ, ಡಾಕ್ಟರ್. ಮುಪ್ಪು ತುಂಬಿದೆ ಸೊಂಟಕ್ಕೆ. ಅದಕ್ಕೇ ಈ ನಿಲುಗುರ್ಚಿಯಲ್ಲಿ ಕುಳಿತು ಕೊಳ್ಳುತ್ತೇನೆ' ಎಂದು ಸಮಾಧಾನ ಹೇಳಿ, ಗಡುಸಿನ ಬೆತ್ತದ ಕುರ್ಚಿಯಲ್ಲಿ ಕುಳಿತೆ. ಅವರ ಮನೆಯವರ ಯೋಗಕ್ಷೇಮವನ್ನು ವಿಚಾರಿಸಿ, ಅನಂತರ ಮುಂದುವರಿಸಿದೆ.

"ನೋಡಿ, ಡಾಕ್ಟರ್ ನವರೋಜ್ ! ನನಗೀಗ ಅರವತ್ತು ವಯಸ್ಸು. ಕೂದಲು ಹಲ್ಲು ಉಗುರು ಎಲ್ಲಕ್ಕೂ ಸರಿಯಾಗಿ ಮುಪ್ಪು ಬಂದಿದೆ. ಆದರೆ ಸೊಂಟಕ್ಕೆ ಎಪ್ಪತ್ತರ ಮುಪ್ಪು ಬಂದಿದೆ. ಹೊಟ್ಟೆಗೆ ಐವತ್ತರ ಪ್ರಾಯವಿದೆ. ಮನಸ್ಸಿನ್ನೂ ನಲವತ್ತರ ಚಪಲದಿಂದ ತುಂಬಿದೆ. ಹೀಗೆ ಒಂದೇ ಕ್ಷಣದಲ್ಲಿ ಅಂಕುರಗೊಂಡ ನನ್ನ ದೇಹದ ವಿವಿಧ ಅಂಗಗಳು ಒಂದೇ ಕಾಲದ ಪ್ರಮಾಣ ದಲ್ಲಿ ಒಂದೊಂದು ತೆರನಾಗಿ ಮುಪ್ಪನ್ನು ಹೊಂದಿವೆ ... ಅದೇ ರೀತಿ ನೋಡಿ, ಡಾಕ್ಟರ್ ರಕ್ತನಾಳಗಳಲ್ಲಿಯೂ ಕೂಡ. ಮೂತ್ರಕೋಶಗಳಲ್ಲಿ ಶೋಧಿಸುವ ಕಾರ್ಯಕ್ಕೆ ಅಡಚಣೆಯುಂಟಾದರೆ, ಮೂತ್ರಕೋಶಗಳಿಗೆ ರಕ್ತವನ್ನು ಸರಬ ರಾಜಿಸುವ ರಕ್ತನಾಳಗಳು ಹೆಚ್ಚು ಒತ್ತಡದಿಂದ ರಕ್ತವನ್ನು ಹರಿಸಬೇಕಾಗು ತ್ತದೆ. ಹಾಗಾಗಿ ಮೂತ್ರಕೋಶದ ರಕ್ತನಾಳಗಳಲ್ಲಿ ಒತ್ತಡ ಹೆಚ್ಚಾಗ ಬೇಕಾಗುತ್ತದೆ. ಆದರೂ ಈ ಒತ್ತಡವು ಹೃದಯಕ್ಕೂ ಮಿಕ್ಕ ರಕ್ತನಾಳ ಗಳಿಗೂ ಹರಡಲು ಸ್ವಲ್ಪ ಕಾಲ ಬೇಕಾಗುತ್ತದೆ. ಆ ಅಂತರದಲ್ಲಿ ಮಿಕ್ಕ ರಕ್ತನಾಳಗಳನ್ನು ಪರೀಕ್ಷಿಸಿದರೆ, ಒತ್ತಡದ ಸುಳಿವೇ ಗೊತ್ತಾಗುವುದಿಲ್ಲ. ಅದೇ ರೀತಿ ಮೆದುಳಿನಲ್ಲಿ ಕೂಡ ಏನಾದರೂ ತ್ರಾಸು ಆದರೆ, ರಕ್ತನಾಳಗಳು ಸ್ಥಳೀಯ ವಾಗಿ ಒತ್ತಡವನ್ನು ಬೆಳೆಸಿಕೊಳ್ಳುತ್ತವೆ. ಮೊದಲು ಮೊದಲು ಆ ಒತ್ತಡ ವನ್ನು ಕಂಡುಹಿಡಿಯಲು ಅಸಾಧ್ಯ. ಆಗ ಕಣ್ಣಿನಲ್ಲಿ ಕಾಣಬಹುದಾದ ರಕ್ತ

ನಾಳಗಳು ಸ್ವಚ್ಛವಾಗಿಯೇ ಕಾಣುತ್ತವೆ. ತೋಳಿನ ಹಿರಿಯ ರಕ್ತನಾಳದಲ್ಲಿ ಒತ್ತಡವನ್ನು ಪರೀಕ್ಷಿಸಿದರೆ, ಅದೂ ಸರಿ ಕಾಣಬರುತ್ತದೆ ... ಅಂದಮೇಲೆ ನಮಗೆ ಈ ತನಕ ಸಾಧ್ಯವಾಗಿರುವ ಪ್ರಯೋಗಮಾರ್ಗಗಳಿಂದ ಮೆದುಳಿನ ಕೆಲವು ರಕ್ತನಾಳಗಳಲ್ಲಿ ಆಗಿರುವ ಬಿರುಸನ್ನು ಕಂಡುಹಿಡಿಯಲು ಸಾಧ್ಯವಿಲ್ಲ. ಹೀಗಾಗಬೇಕಾದಲ್ಲಿ ಮೆದುಳಿನ ಕೆಲಭಾಗದಲ್ಲಿ ಯಾವುದೋ ಕೊರಗು ಇರಲೇ ಬೇಕು. ಆ ಕೊರಗು ಆಳವಾಗಿ ಹುದುಗಿರಬೇಕು. ಹಾಗೂ ಮರೆಯಲಾಗ ದಂತೆ ತೀಕ್ಷ್ಣವಾಗಿರಬೇಕು. ಕೊರಗಿನ ನಿವಾರಣೆಗೆ ಯಾವುದೊಂದು ಮಾರ್ಗವೂ ಏನಾದರೊಂದು ಉಪಾಯವೂ ಕಾಣಬರದೇ ಇರಬೇಕು ... ಹಾಗಾದರೆ ಮೆದುಳಿನ ಆ ಭಾಗದ ರಕ್ತನಾಳಗಳು ಎಂದಾದರೂ ಒಮ್ಮೆ ಅನಿರೀಕ್ಷಿತವಾಗಿ ಒಡೆದು ರಕ್ತಸ್ರಾವವಾಗಿ, ಲಕ್ವ ಹೊಡೆದು ಪ್ರಾಣ ಹೋಗಬಹುದು. ಅಥವಾ ಅಂತಹ ನಾಳಗಳಲ್ಲಿ ರಕ್ತವು ಹೆಪ್ಪುಗಟ್ಟಿ, ಲಕ್ವ ಹೊಡೆಯಬಹುದು. ಇಂತಹ ಸಂದರ್ಭದಲ್ಲಿ ಪ್ರಾಣ ಉಳಿದರೂ ಉಳಿಯಬಹುದು. ಆದರೆ ನಷ್ಟ ಹೊಂದಿದ ಮೆದುಳಿನ ಭಾಗದಿಂದ ಚೇತನವನ್ನು ಪಡೆಯುವ ದೇಹದ ಅಂಗಗಳು ನಿಸ್ತೇಜವಾಗಿ, ನಿರುಪಯೋಗವಾಗಬಹುದು. ಇದನ್ನು ನೀವು ಒಪ್ಪುತ್ತೀ ರಲ್ಲವೇ ?" ಎಂದೆ.

"ದಿಟ, ಡಾಕ್ಟರೇ ! ಅಮೆರಿಕಾದ ಹಾರ್ವರ್ಡ್‌ನಲ್ಲಿ, ಇಂಗ್ಲೆಂಡಿನಲ್ಲಿ, ಜರ್ಮನಿಯಲ್ಲಿ, ಹೃದಯದ ಪ್ರವೀಣರು ಈ ವಿಷಯವನ್ನು ಕುರಿತು ಪ್ರಾಣಿಗಳ ಮೇಲೆ ಪ್ರಯೋಗಕ್ಷೇತ್ರಗಳಲ್ಲಿ ಪ್ರಯೋಗಗಳನ್ನು ನಡಸಿ, ಸಿದ್ಧಾಂತಪಡಿಸಿದ್ದಾರೆ. ಈಗೀಗ ಈ ತೆರನಾದ ಸ್ಥಳೀಕವಾದ ರಕ್ತದ ಒತ್ತಡದ ವಿಷಯದಲ್ಲಿ ಹಲವಾರು ನೂತನ ವಿಧಾನದ ಪ್ರಯೋಗಗಳು ಬಳಕೆಗೆ ಬಂದಿವೆ . . . ಇದು ನಿಮಗೆ ಹೇಗೆ ತಿಳಿಯಿತು ಡಾಕ್ಟರೇ ? ಕಳೆದ ಎರಡು ಮೂರು ವರ್ಷಗಳಿಂದ ಈ ಪ್ರಯೋಗಗಳು ನಡೆದಿವೆ. ವೈದ್ಯವೃತ್ತಿಯ ಪತ್ರಿಕೆಗಳಲ್ಲಿ ಕೂಡ ಇದು ಇನ್ನೂ ಬಂದಿಲ್ಲ. ಪ್ರಯೋಗಾರ್ಥ ಪತ್ರಿಕೆಗಳಲ್ಲಿ ಮಾತ್ರ ಸೂಚನೆಗಳು ಬಂದಿವೆ. ಅವುಗಳನ್ನೆಲ್ಲಾ ಓದಲು ವ್ಯವಧಾನವಾದರೂ ನಿಮಗೆಲ್ಲಿ ?" ಎಂದರು ಡಾಕ್ಟರ್ ನವರೋಜ್.

"ನೀವು ಓದಿದ ಪತ್ರಿಕೆಗಳನ್ನು ನಾನೂ ಒಮ್ಮೊಮ್ಮೆ ಸ್ಥೂಲವಾಗಿ ನೋಡುತ್ತೇನೆ. ವಯಸ್ಸಾಯಿತು, ನಿದ್ರೆ ಬರುವುದಿಲ್ಲ. ಬೇಕಾದಷ್ಟು ಹೊತ್ತು

ರಾತ್ರಿಯೆಲ್ಲಾ ಸಿಗುತ್ತದೆ. ಅದನ್ನ ಇದನ್ನ ಓದುತ್ತೇನೆ. ನನಗೆ ಎಂದೋ ಹೊಳೆದಿದ್ದ ವಿಷಯಗಳನ್ನು ಇವರು ವೈಜ್ಞಾನಿಕವಾಗಿ ವಿಮರ್ಶಿಸಿ, ವಿಚಕ್ಷಣೆಯಿಂದ ಪ್ರಯೋಗ ನಡಸಿ. ಎಲ್ಲರಿಗೂ ತಿಳಿಯುವಂತೆ ಬರೆದಿರುತ್ತಾರೆ. ಅವುಗಳ ಬೆಂಬಲದ ಮೇಲೆಯೇ ನಂಬಿಕೆಯನ್ನಿಟ್ಟು, ನಿಮಗಿದನ್ನು ಹೇಳಿದ್ದು. ಆ ಧೈರ್ಯವಿಲ್ಲದೆ ಇದ್ದರೆ, ನಿಮಗಿದನ್ನು ಹೇಳಲು ಸಂಕೋಚಪಡುತ್ತಿದ್ದೆ" ಎಂದು ಹೇಳಿದೆ.

"ಇನ್ನಿಷ್ಟು ಉಪ್ಪೇರಿ ಕಳಿಸಿಕೊಡಿ. ನಾನೇ ತಿಂದು ಮುಗಿಸಿಬಿಟ್ಟಿದ್ದೀನಿ. ಡಾ॥ ನವರೋಜ್ ಅವರು ತಟ್ಟೆಯ ಹತ್ತಿರ ಕೂಡ ಬರಲಿಲ್ಲ!" ಎಂದು ಅಡಿಗೆಯ ಮನೆಯ ಬಾಗಿಲ ಕಡೆಗೆ ಮುಖಮಾಡಿ ಕೂಗಿದೆ.

ಇನ್ನೊಂದು ಉಪ್ಪೇರಿತಟ್ಟೆ ಬಂದಿತು. "ಈಗಲಾದರೂ ನೀವು ತಿನ್ನೋಕ್ಕೆ ಶುರುಮಾಡಿ, ನವರೋಜ್! ಇಲ್ಲದಿದ್ದರೆ ಮಾತಿನ ಭರದಲ್ಲಿ ನಾನೇ ಮುಗಿಸ ಬೇಕಾಗುತ್ತೆ. ಆಲೂಗಡ್ಡೆ ಉಪ್ಪೇರಿ ನನಗೆ ಬಲು ಪ್ರಿಯ, ತಿಂದ ಮೇಲೆ ಉಪ್ಪೇರಿಯ ಆಲೂಗಡ್ಡೆಯೆಲ್ಲಾ ಸೊಂಟಕ್ಕೆ ಸೇರಿಕೊಂಡು ತಿರುಗಿ ಆಲೂ ಗಡ್ಡೆಯಾಗಿ ಗಟ್ಟಿಯಾಗಿ ಬಿಗಿಯುತ್ತೆ. ಎದ್ದು ಕೂತುಕೊಳ್ಳಲು ಬಲು ತ್ರಾಸು ಆಗುತ್ತೆ" ಎಂದು ಹೇಳಿ ತಟ್ಟೆಯನ್ನು ಅವರ ಮುಂದೆ ಸರಿಸಿದೆ.

"ಅಂಬುಜಮ್ಮನವರ ಮರಣದ ವಿಷಯದಲ್ಲಿ ತುಂಬಾ ಯೋಚನೆ ಮಾಡಿದ್ದೆ. ಆಗ ಬಾಯಿಗೆ ಬೀಗ ಹಾಕಿತ್ತು ನನಗೆ. ತಿಳಿದಿದ್ದನ್ನು ಹೇಳ ಲಾಗಲಿಲ್ಲ. ಈಗ ಹೇಳಲು ಅಭ್ಯಂತರವಿಲ್ಲ. ಮಾತು ಕೊಟ್ಟಿದ್ದಂತೆ ಸಂಶಯವು ಬಂದುದೇಕೆ ಎಂಬುದನ್ನು ಹೇಳುತ್ತೇನೆ" ಎಂದು ಶುರುಮಾಡಿದೆ.

* * *

"ಕೇಳಿ, ನವರೋಜ್. ಬಾಳಿನಲ್ಲಿ ನಡೆಯುವ ಸಂಗತಿಗಳ ಎದುರಿಗೆ ಕತೆಯಲ್ಲಿ ಬಣ್ಣಿಸಲ್ಪಡುವ ವಿಷಯಗಳು ಕೇವಲ ಸಪ್ಪೆ!!

"ಇಪ್ಪತ್ತು ಇಪ್ಪತ್ತೈದು ವರ್ಷಗಳ ಹಿಂದಿನ ಮಾತು. ಮನೆಯ ಬಾಗಿಲ ಬಳಿಗೆ ಮುತ್ತೈದೆಯೊಬ್ಬಳು ಬೆಳಗಿನ ಝಾಮದಲ್ಲೇ ಬಂದು ವರಾಂಡದಲ್ಲಿ ಕಾದಿದ್ದಾಳೆ. ಜರೂರಾಗಿ ನೋಡಬೇಕು ಅಂತ ಹೇಳಲಿಲ್ಲ. ಆದರೂ ತುಂಬಾ ನೊಂದಿದ್ದಾಳೆ. ಅಂತ ಕಾಣಿಸಿತು. ಸ್ನಾನ ಮಾಡುವುದಕ್ಕೆ

11605

ಮುಂಚೆಯೇ ನೋಡಿ ಅಂದ್ರೆ' ಎಂದು ಬಚ್ಚಲ ಮನೆಯ ಕಡೆ ಹೋಗುತ್ತಿದ್ದ ನನಗೆ ಮನೆಯೊಡತಿ ಕೇಳಿದಳು. ವರಾಂಡಕ್ಕೆ ಹೋದೆ. 'ಏನು ಬೇಕಮ್ಮಾ?'" ಎಂದು ಆ ಮುತ್ತೈದೆಯನ್ನು ಕೇಳಿದೆ.

"ಆಕೆಗೆ ತಮ್ಮನೊಬ್ಬನೇ ಒಡಹುಟ್ಟಿದವನಂತೆ. ಹೆಂಡತಿಯೊಡನೆ ಅವನು ಪ್ಲೇಗಿನಲ್ಲಿ ತೀರಿಕೊಂಡಾಗ, ಆ ಸಂಸಾರದಲ್ಲಿ ಉಳಿದುಕೊಂಡಿದ್ದ ಮೂರು ತಿಂಗಳ ತಬ್ಬಲಿ ಹೆಣ್ಣುಮಗುವನ್ನು ಈಕೆಯೇ ತೆಗೆದುಕೊಂಡು ಬಂದು ಮಗಳಂತೆಯೇ ಪೋಷಿಸಿ ಬೆಳೆಸಿದಳಂತೆ. ಆಗ ಈಕೆಗೂ ಎರಡು ಗಂಡುಮಕ್ಕಳಿತ್ತಂತೆ. ಮೊದಲನೆಯದಕ್ಕೆ ಆರು, ಎರಡನೆಯದಕ್ಕೆ ಮೂರು ವಯಸ್ಸು. ಅನಂತರ ಮಕ್ಕಳಾಗಲಿಲ್ಲವಂತೆ.

"ಮೊದಲನೆಯ ಮಗನಿಗೆ ೧೮ರ ಪ್ರಾಯ ಬಂದಾಗ, ಹನ್ನೆರಡು ವರ್ಷದ ಆ ಹೆಣ್ಣನ್ನು ಕೊಟ್ಟು ಮದುವೆಮಾಡಿದರಂತೆ. ವ್ಯಾಸಂಗವನ್ನು ಮುಂದುವರಿಸಲು ಚೊಚ್ಚಲಿನವನು ದಿಳ್ಳಿಗೆ ಹೋದನಂತೆ. ಅಲ್ಲಿ ಯಶಸ್ವಿಯಾಗಿ ತೇರ್ಗಡೆಯಾದಾಗ ಅಲ್ಲೇ ಪ್ರೊಬೇಷನರಾಗಿ ನೇಮಿಸಲ್ಪಟ್ಟನಂತೆ. ಅಲ್ಲೇ ಮೂರು ವರ್ಷದಿಂದ ಇದ್ದನಂತೆ.

"ಎರಡನೆಯ ಮಗ ಅಪ್ಪನಂತೆ ಬೆಳ್ಳಗಿದ್ದನಂತೆ. ಬಲು ಚೂಟಿ ಹುಡುಗನಂತೆ. ೧೪ರ ಪ್ರಾಯದಲ್ಲಿ ಮೆಟ್ರಿಕ್‌ನಲ್ಲಿ ರ್‍ಯಾಂಕ್ ಪಡೆದನಂತೆ ೧೬ಕ್ಕೆ ಕಾಲೇಜಿನ ವಾರ್ಷಿಕೋತ್ಸವದ ನಾಟಕದಲ್ಲಿ ಬಹುಮಾನ ಪಡೆದನಂತೆ. ೧೭ರಲ್ಲಿ ಆಶುಭಾಷಣ ಸ್ಪರ್ಧೆಯಲ್ಲಿ ಚಿನ್ನದ ಪದಕವನ್ನು ಪಡೆದು ಮನೆಯಲ್ಲಿ ಒಂದು ದಿನ ತೋರಿಸಿದನಂತೆ.

ಮಾರನೆಯ ದಿನ ಈ ಮುತ್ತೈದೆಯು ಬಂಧುಗಳೊಬ್ಬರ ಮನೆಗೆ ಊಟಕ್ಕೆ ಹೋಗಿದ್ದಳಂತೆ. ಸಂಜೆ ಮನೆಗೆ ಬಂದಾಗ, ಸೊಸೆಯ ಕೊರಳಿನಲ್ಲಿ ಆ ಪದಕವನ್ನು ಕಂಡಳಂತೆ.

"ಇದಾಗಿ ಎರಡು ತಿಂಗಳಾಗಿತ್ತಂತೆ. ಬಚ್ಚಲಮನೆಯ ಒಲೆಯನ್ನು ಬೆಳಗಿನ ಝಾಮು ಐದು ಗಂಟೆಗೆ ಹಚ್ಚುತ್ತಿದ್ದಾಗ, ಸೊಸೆಯು ಬಂದು ಈಕೆಯ ಕಾಲಿಗೆ ಬಿದ್ದು, 'ಅಮ್ಮಾ! ಕೆರೆಗೆ ಬಿದ್ದು ಪ್ರಾಣ ಕಳೆದುಕೊಳ್ಳುತೀನಿ. ತಿಂಗಳ ಸರದಿ ತಪ್ಪಿ ಎರಡು ತಿಂಗಳಾಯ್ತು. ತಬ್ಬಲಿಯನ್ನು ಆದರದಿಂದ ತಂದು ಮಗಳಂತೆ ಸಾಕಿದಿರಿ. ಮೊದಲ ಮಗನಿಗೆ ಕೊಟ್ಟು ಮದುವೆ ಮಾಡಿದಿರಿ.

ಜಾಣನಾದ ಅವ ಊರು ಬಿಟ್ಟುಹೋಗಿ ಮೂರು ವರ್ಷಗಳಾಯ್ತು. ಎರಡ ನೆಯ ಸುಂದರ ಮಗನೇ ತಿಂಗಳ ಸರದಿಯನ್ನು ತಪ್ಪಿಸಿದ.' ಎಂದು ಹೇಳಿದಳಂತೆ.

"ಈಕೆ 'ಅತ್ತೆಯಲ್ಲಾ ನಿನಗೆ, ತಾಯಿ ನಾನು. ಇಷ್ಟಕ್ಕೇ ಯಾಕೆ ಕೆರೆಗೆ ಬೀಳಬೇಕು ? ವಯಸ್ಸಿನ ಕುರುಡಿನಿಂದ ನೀವಿಬ್ಬರೂ ಗೊಂದಲಕ್ಕೆ ಸಿಕ್ಕಿದ್ದೀರಿ. ನಾನಿರೋತನಕ ನಿಮಗ್ಯಾತಕೆ ಚಿಂತೆ ?' ಎಂದು ಹೇಳಿ ಸೊಸೆಯನ್ನು ಅಪ್ಪಿ ಕರೆದುಕೊಂಡು ಹಾಸಿಗೆಯಲ್ಲಿ ಮಲಗಿಸಿದಳಂತೆ.

"ಸೊಸೆಯು ಗೊರಕೆ ನುಡಿದಾಗ, ಈಕೆಯು ಬಚ್ಚಲಮನೆಗೆ ಹೋಗಿ ಅಲ್ಲಿನ ಕೆಲಸವನ್ನು ಮುಗಿಸಿ, ಅಡಿಗೆಮನೆಗೆ ಹೋಗಿ ಅಲ್ಲಿನ ಕೆಲಸವನ್ನೂ ಮುಗಿಸಿ. ಪ್ರತಿನಿತ್ಯವೂ ತಾನು ಗುಡಿಯ ಕಡೆಗೆ ಹೋಗುವ ಪ್ರಾತಃಕಾಲದ ಕರ್ತವ್ಯವನ್ನು ಮುಗಿಸಿ, ಗಂಡನು ಎಂಟು ಗಂಟೆಗೆ ಬರುವುದಕ್ಕೆ ಮೊದಲೇ ನನ್ನನ್ನು ಕಂಡು 'ಮಂಗಳ ಹೊರೆಯನ್ನು ಇಳಿಸುವಿರಾ?' ಎಂದು ಕೇಳಲು ಬಂದಿದ್ದಳಂತೆ.

"ಆರೂ ಕಾಲು ಗಂಟೆಯಾಗಿತ್ತು. ಆ ಬೆಳಗ್ಗೆ. ಇದನ್ನು ಮುತ್ತೈದೆಯು ಹೇಳಿ ಮುಗಿಸಿದಾಗ ಆರೂವರೆ ಗಂಟೆಯಾಗಿತ್ತು.

"ಈಗ ಯಾವ ಕಣ್ಣು ಚುಚ್ಚಿಕೊಳ್ಳಲಿ ?' ಎಂದಳು ಮುತ್ತೈದೆ.

"ಜೀವ ಕೊಡಕ್ಕೆ ಯೋಗ್ಯತೆ ಪಡೆದವರು ಜೀವ ತೆಗೆಯುವ ಹಕ್ಕನ್ನು ಪಡೆಯಬಹುದು. ನನ್ನಿಂದ ಸಾಧ್ಯವಿಲ್ಲ ಎಂದೆ," ಮರುಯೋಚನೆ ಮಾಡದೆ.

" 'ದೇವರು ನೀವು. ಕಷ್ಟಕ್ಕಾಗುತ್ತೀರಿ ಎಂದು ಬಂದೆ' ಎಂದು ಗುಳು ಗುಳು ಅಳುವಿನ ಮಧ್ಯೆ ಆಕೆ ನುಡಿದಳು.

"ಏನಾದರೂ ಉಪಾಯ ಹೂಡೋಣ. ಭೂಮಿಗೆ ಇನ್ನೂ ಬೀಳದೆ ಇರುವ ಜೀವಕ್ಕೆ ಅನ್ಯಾಯವಾಗದಂತೆ. ಭೂಮಿಯ ಮೇಲಿರುವ ಜೀವಿಗಳಿಗೂ ಅಪಾಯವಾಗದಂತೆ ಏನಾದರೂ ಮಾಡೋಣ" ಎಂದೆ.

"ಹಾಗೆ ಮಾಡಕ್ಕಾಗುತ್ತ್ಯೇ?" ಎಂದು ಆಸೆಯಿಂದ ಆ ಮುತ್ತೈದೆ ತಾಯಿ ಕೇಳಿದಳು.

"'ದಿಲ್ಲಿಯಲ್ಲಿ ನನ್ನ ನೆಂಟನಿದಾನೆ. ಅಧಿಕಾರದಲ್ಲಿರುವ ಅವನಿಗೆ ನನ್ನ ಮಾತಿನಲ್ಲಿ ತುಂಬಾ ವಿಶ್ವಾಸ. ಅವನಿಗೆ ತಾರು ಹೊಡೆದು, ನಿಮ್ಮ ಮೊದಲ

ನೆಯ ಮಗನನ್ನ, ತಾಯಿಯ ಸಖತ್ ಖಾಯಿಲೆಯ ಪ್ರಯುಕ್ತ ತಕ್ಷಣ ಕಳಿಸು ವಂತೆ ಏರ್ಪಾಡುಮಾಡಿಸುತ್ತೇನೆ. ನೀವೂ ತಲೆ ಸಿಡಿಯುತ್ತೆ ಅಂತ ನರಳುತ್ತಾ ಹಾಸಿಗೆ ಹಿಡಿದುಬಿಡಿ. ಅವನು ಬಂದಾಗ ಪ್ರಸ್ಥಮಾಡಿಸಿಬಿಡಿ. ಎಲ್ಲವೂ ಸರಿ ಹೋಗುತ್ತೆ' ಎಂದೆ.

"'ನೀವು ಹೇಳಿದ ಹಾಗೆ ಕೇಳುತ್ತೇನೆ. ಮನೆಗೆ ಹೋಗಿ ಅವರಿಗೆ ಊಟ ಕೊಟ್ಟು ಕಾರ್ಖಾನೆಗೆ ಕಳಿಸಿದ ಮೇಲೆ, ಒಂಬತ್ತರ ಹೊತ್ತಿಗೆ ಹಾಸಿಗೆ ಹಿಡಿಯುತ್ತೇನೆ.' ಎಂದು ಹೇಳಿ ಆಕೆ ಮೊದಲ ಮಗನ ವಿಳಾಸವನ್ನು ಕೊಟ್ಟು ಹೊರಟುಹೋದಳು.

"ನಮ್ಮ ಯೋಜನೆಯಂತೆ, ಎಲ್ಲವನ್ನೂ ದೇವರು ನಡಸಿಕೊಟ್ಟ.

"ಅಂತಹ ಪುಣ್ಯಾತ್ಮಗಿತ್ತಿಯ ಎರಡನೆಯ ಜಾಣಮಗ ವರ್ಷವೊಂದ ರಲ್ಲೇ ರಾಷ್ಟ್ರದ ಸ್ಪರ್ಧಾಪರೀಕ್ಷೆಯಲ್ಲಿ ದ್ವಿತೀಯ ಸ್ಥಾನ ದೊರಕಿ ಹೊರಟು ಹೋದ. ಮೊದಲನೆಯ ಮಗ ದಿಳ್ಳಿಯಿಂದ ತನ್ನೂರಿಗೆ ವರ್ಗವಾಗಿ ಹಿಂತಿರುಗಿದ್ದ. ಬಲು ಆದರದಿಂದ ತಾಯಿಯ ಸೇವೆಯನ್ನು ಅವನು ಮಾಡಿದಾಗಲೆಲ್ಲ ಆಕೆಯ ಕೊರಗು ಹೆಚ್ಚಾಗತೊಡಗಿತು, ವಿಶ್ವಾಸದ ಮಾತನ್ನ ವನು ಆಡಿದಾಗಲೆಲ್ಲ ಆಕೆ ಭೌಳಿ ಬಂದವಳಂತೆ ತೆಪ್ಪಗಿರುತ್ತಿದ್ದಳು. ಇಂತಹ ಮಗನಿಗೆ ಅನ್ಯಾಯಮಾಡಿದೆನಲ್ಲಾ ಎಂಬ ಕೊರಗು ಹೆಚ್ಚುತ್ತ ಹೋಯಿತು. ತನ್ನ ಮೊದಲ ಮೊಮ್ಮಗನನ್ನು ಮೊದಲ ಮಗನು ಮುದ್ದಾಡಿದಾಗಲೆಲ್ಲ ಆಕೆಯ ತಲೆ ಬಗಿಯುತ್ತಿತ್ತು. ಇದೇ ಕೊರಗಿನಲ್ಲಿ ಆಕೆ ಯಾರೊಬ್ಬರಿಗೂ ಹೇಳಲಾರದೆ ಬಾಳಬೇಕಾಗಿತ್ತು." ಎಂದೆ.

"ಅರ್ಥವಾಯಿತು. ಎಲ್ಲವೂ ತಿಳಿಯಿತು. ಇನ್ನೇನನ್ನೂ ಹೇಳಬೇಕಾ ಗಿಲ್ಲ. ನಿಮ್ಮ ಉದ್ವೇಗದ ದನಿಯನ್ನು ಕೇಳಿದರೆ ಹೆದರಿಕೆಯಾಗುತ್ತೆ, ನಿಮಗೆ ಏನು ಆಗಿಬಿಡುತ್ತೋ ಎಂದು. ಊಟಕ್ಕೆ ಹೋಗೋಣ!" ಎಂದು ಡಾ॥ ನವರೋಜ್. ನಮ್ಮನೆಯಲ್ಲಿ ನನ್ನನ್ನು ಊಟಕ್ಕೆ ಎಬ್ಬಿಸಿದರು.

"ಕೂತುಕೊಳ್ಳಿ! ಇನ್ನೂ ಅಡಿಗೆಯಾಗಿಲ್ಲ ಮನೆಯಲ್ಲಿ. ಹೇಳೋದ ನ್ನೆಲ್ಲಾ ಕೇಳಿದ ಮೇಲೆ ಊಟಕ್ಕೆ ಹೋಗೋಣ. ಆಗ ಊಟ ರುಚಿಸುತ್ತೆ. ಆತನಕ ತೆಂಗಿನಕಾಯಿ ಚಟ್ನಿ, ಅಕ್ಕಿ ರೊಟ್ಟಿ ಕೂಡ, ಬೆಣ್ಣೆ ಸವರಿದರೂನೂ, ರುಚಿ ಹತ್ತೊಲ್ಲ" ಎಂದು ಮುಂದುವರಿಸಿದೆ.

"ಈ ಕೊರಗು ಬಲಿತಾಗಲೇ ಒಮ್ಮೆ ಆಕೆಗೆ ಒಂದೆರಡು ನಿಮಿಷ ಮಾತು ನಿಂತುಹೋಗಿತ್ತು. ನೀವು ಮೊದಲು ವೈಜ್ಞಾನಿಕವಾಗಿ ಊಹಿಸಿದಂತೆ ಆಕೆ ಹೇಗೋ ಸಮಾಧಾನವನ್ನು ಕಾಲಕ್ರಮೇಣ ತಂದುಕೊಳ್ಳುತ್ತಿದ್ದಳು.

"ಆದರೆ ಆಕೆಯ ಗಂಡ ಆತುರದಿಂದ ಎರಡನೆಯ ಮಗನಿಗೆ ತಾರು ಕೊಟ್ಟ. ಏಳು ವರ್ಷಗಳಿಂದ ಆ ಮನೆಯನ್ನು ಸೇರದೆ ಇದ್ದ ಅವನೂ ಬರಲೇಬೇಕಾಯ್ತು. ತಾಯಿಗೆ ತಾನು ಕೊಟ್ಟಿದ್ದ ಮಾತನ್ನು ಮುರಿಯಲೇ ಬೇಕಾಯ್ತು. ಆ ಬ್ರಹ್ಮಚಾರಿ ಬಂದು ಅದೇ ಮನೆಯಲ್ಲಿದ್ದರೆ, ಇನ್ನೇನು ಹಳೆಯ ಅನಾಹುತಗಳು ಮರುಕಳಿಸುತ್ತವೋ ಎಂಬ ಭೀತಿಯು ಆಕೆಯನ್ನು ಮುತ್ತಿತು. ಭೀತಿಗೆ ಕಾರಣವಾದರೂ ದಿಟವಾದದ್ದೇ. ಅದನ್ನು ಮರಸಲು ಆಕೆಗೆ ಸಾಧ್ಯವಾಗಲಿಲ್ಲ.

"ಅದಕ್ಕೇ ನಾನು ಸಂಶಯಪಟ್ಟಿದ್ದು, ಆಕೆ ಉಳಿಯುವುದಿಲ್ಲವೇನೋ ಎಂದು. ಯಾವಯಾವ ಕಾರಣದಿಂದ ಯಾವುಯಾವುದು ತಿರುಗಿ ಸಂಭವಿಸ ಕೂಡದು ಎಂದು ಆಕೆ ತನ್ನ ಮಗನನ್ನೇ ತೊರೆದಿದ್ದಳೋ ಆ ಅವಕಾಶವು ಕಣ್ಣೆದುರಿಗೇ ದೊರೆತಾಗ ಆಕೆಗೆ ಬೇಸರ ಬರದೆ ಇರಲು ಸಾಧ್ಯವೇ ? ಅದಕ್ಕೆ ಬಯಸಿ ಬೇಡಿ ಇಚ್ಛಾಮರಣೆಯಾದಳು ಆ ಮುತ್ತೈದೆ.

"ಸಲಹಾಪರೀಕ್ಷೆಯ ಸಲುವಾಗಿ ನಾನು ಬಂದಾಗ ಮೊದಲು ಆಕೆ ಹೇಳಿದ್ದು ನೆನಪಿದೆಯೇ ? 'ಹೆದರಿಕೆ ಏನು ಬಾತು ಡಾಕ್ಟರೇ ? ಬದುಕಿರಬೇಕು ಅಂತ ನನಗೇನು ಆಸೆ ? ಈ ತಲೆ ರ್ಶೋಮು ಬಿಟ್ಟರೆ ಸಾಕು. ತೊಗೊಂಡು ಹೋದರೂ ಆಯಿತು. ಎರಡರಲ್ಲಿ ಒಂದು ಮಾಡಿಸಿ . . .' ಜ್ಞಾಪಕಕ್ಕೆ ಬಾತೆ ? ಬೀಳ್ಕೊಡುವ ಮುನ್ನ ಆಕೆ ಹೇಳಿದ್ದು ಏನು ಗೊತ್ತೆ? 'ಅದರ ಜೊತೆಯಲ್ಲೇ ಎಲ್ಲವೂ ಮುಗಿದು ಹೋಗಲಿ. ಎಲ್ಲವೂ ಮರೆತುಹೋಗಲಿ' ಎಂದರು. ನೆನ ಪಿದೆಯೇ? ನಾನೂ ಮರೆತುಬಿಡಬೇಕು ಎಂದಾಕೆಯ ಆಸೆ. 'ಖಂಡಿತವಾಗಿ ಮರೆತುಹೋಗುತ್ತಮ್ಮಾ, ಖಂಡಿತವಾಗಿ ಮುಗಿದುಹೋಗುತ್ತೆ' ಎಂದು ಭರವಸೆಕೊಟ್ಟು ನಾನು ಹಿಂತಿರುಗಿದ್ದು ಜ್ಞಾಪಕವಿದೆಯೇ ? ಹಾಗೆ ಮಾತು ಕೊಟ್ಟಮೇಲೆ ಹೇಗಾದರೂ ವಿವರಣೆ ಕೊಡಲಿ, ಆಗ ?

"ಈಗ ಸಂಬಂಧಿಸಿದವರೆಲ್ಲರೂ ಒಂದೊಂದು ರೀತಿ ಆಗಿದ್ದಾರೆ. ಅಬು

ಜಮ್ಮ ಸತ್ತರು. ಆಕೆಯ ಗಂಡ ಎರಡು ವರ್ಷಗಳ ಹಿಂದೆ, ಮೊದಲ ಮಗನ ಮನೆಯಲ್ಲಿ ತೀರಿಕೊಂಡರು. ಹೋದ ತಿಂಗಳು ಎರಡನೆಯ ಮಗ ನೇಪಾಳದ ಬಳಿ ವಿಮಾನಾಪಘಾತದಲ್ಲಿ ಅಸುವನ್ನು ನೀಗಿದ. ಮೊದಲ ಮಗ, ಹೆಂಡತಿ ಮಕ್ಕಳು ಮಾತ್ರ ಉಳಿದಿದ್ದಾರೆ. ಯಾರಿಗೂ ತೊಂದರೆಯಾಗುವುದಿಲ್ಲ ಎಂದು ಧೈರ್ಯವಾಯಿತು. ಅದಕ್ಕೇ ಭೋಜನದ ನೆಪ ಮಾಡಿ ಕರೆದು ನಿಮಗೆ ಹೇಳಿದೆ" ಎಂದೆ.

"ಊಟಕ್ಕೆ ಏಳುತ್ತೀರಾ?" ಎಂದು ಊಟದ ಮನೆಯಿಂದ ಅದೃಶ್ಯವಾಣಿ ಕೇಳಿಬಂತು.

ಊಟಕ್ಕೆ ಹೋದೆವು. ಮೂರು ಅಕ್ಕಿರೊಟ್ಟಿ ತಿಂದ ನವರೋಜ್ ಚಟ್ನಿಗಾಗಿ ಅಷ್ಟು ರೊಟ್ಟಿ ತಿಂದ ಎನಿಸಿತು ನನಗೆ. ನನಗೆ ನಾನೂ ಮೋಸ ಮಾಡಿಕೊಳ್ಳಲಿಲ್ಲ, ಊಟದಲ್ಲಿ. ಮೊಸರನ್ನ ಮಿಡಿಉಪ್ಪಿನಕಾಯಿ ತಿಂದು ಎಲಡಿಕೆಗೆ ಹಜಾರಕ್ಕೆ ಬಂದೆವು.

ಬಾಳೆಯ ಹಣ್ಣನ್ನು ತಿಂದು, ಐಸ್‌ಕ್ರೀಮನ್ನು ನುಂಗಿ, ಎಲಡಿಕೆಯನ್ನು ಮೆಲ್ಲುತ್ತಿದ್ದಾಗ ಡಾ॥ ನವರೋಜ್ "ಸಾರ್! ಎಷ್ಟು ಮನೆಯವರ ಏನೆಲ್ಲಾ ಗೋಳಂಗಳನ್ನು ತಾಪತ್ರಯಂಗಳನ್ನು ನೀವು ಹೃದಯದಲ್ಲಿ ಹಂದುಗಿಸಿಕೊಂಡಿದ್ದೀರೋ, ಈ ಮೂರು ನಾಲ್ಕು ದಶಕಗಳಲ್ಲಿ! ಎಲ್ಲರ ಕೊರಗನ್ನೂ ನಿಮ್ಮವನ್ನಾಗಿ ಮಾಡಿಕೊಂಡು ಹೇಗಾದರೂ ಇಷ್ಟು ದಿನ ಬೇನೆಬೀಳದೆ ಇದ್ದೀರೋ?" ಎಂದು ಮಮತೆಯಿಂದಲೇ ಹೇಳಿದರು.

"ನನ್ನ ಕೊರಗು ಎಂದು ನನ್ನ ಮೇಲೆ ಹಾಕಿಕೊಂಡಿದ್ದರೆ, ನಾನೂ ಬೇನೆಗೆ ಬಲಿಯಾಗುತ್ತಿದ್ದೆ. ಎಲ್ಲರ ಕೊರಗಿನಲ್ಲೂ ಕಿರುನಿಮಿತ್ತವಾಗಿ ಭಾಗವಹಿಸಿಕೊಳ್ಳುವ ಭಾಗ್ಯವನ್ನು ಆ ಹಿರಿಯನಿಮಿತ್ತ ಅನುಕಂಪದಿಂದ ಕರುಣಿಸಿದೆ. ಆ ಅನುಕಂಪದ ಕರುಣೆಯ ಋಣವನ್ನು ಆ ಹಿರಿಯ ನಿಮಿತ್ತಕ್ಕೆ ಪಾವತಿ ಮಾಡಿಬಿಟ್ಟರೆ, 'ನನ್ನ' ಕೆಲಸ ಮುಗಿಯಿತು. ಆ ನಂಬಿಕೆಯಿಂದಲೇ ಬೇನೆಯ ಯೋಚನೆಯನ್ನೇ ಮಾಡಿಲ್ಲ. ವೈಜ್ಞಾನಿಕವಾಗಿ ವಿಚಾರಿಸಿದರೆ, ತಲೆ ಚಿಟ್ಟುಹಿಡಿದುಹೋಗುತ್ತೆ" ಎಂದೆ.

"ವೇದಾಂತವು ವೈದ್ಯರಿಗೆ ಎಷ್ಟು ಮುಖ್ಯ ಅಂತ ಈಗ ಗೊತ್ತಾಯ್ತು. ಹೋಗಿಬರಲೇ ?" ಎಂದು ದಾ॥ ನವರೋಜ್ ಎದ್ದು ಅಡಿಗೆಮನೆಯ ಕಡೆಗೆ ತಿರುಗಿ "ಹೋಗಿಬರ್ತೀನಿ ತಾಯಿ, ನಮಸ್ಕಾರ" ಅಂತ ಅಡಿಗೆಮನೆಯ ಬಾಗಿಲಿಗೆ ಹೇಳಿ, ನನಗೂ 'ನಮಸ್ತೇ' ಎಂದು ಹೊರಟು ಹೋದರು.

ನನ್ನ ಎದೆ ಸ್ವಲ್ಪ ಹಗೂರಾಯಿತು.

# ೬. ಹೊಟ್ಟೆ ಉರಿದುಹೋಗುತ್ತೆ

ಹಾಲುಬೆಳದಿಂಗಳ ದ್ವೀಪದ ಸುತ್ತ
ಕಾಳ ಕರಾಳ ಕಪ್ಪು ಅಂಚು ಹೆಪ್ಪಿಟ್ಟಿತ್ತು.

ಜಡ್ಜಿಗಳಿಗಿಂತ ಡಾಕ್ಟರುಗಳ ಪಾಡು ಎಷ್ಟೋ ಮೇಲು. ವಾದಿ ಪ್ರತಿವಾದಿಗಳ ಪರವಾಗಿ ಲಾಯರುಗಳು ಹೇಳಿದ್ದನ್ನೆಲ್ಲಾ ಜಡ್ಜಿಗಳು ಕಿವಿಗೆ ಕೇಳಿಸಿಕೊಳ್ಳಬೇಕು. ಕಿವಿಗೆ ಕೇಳಿಸಿದ್ದನ್ನು ಮನಸ್ಸಿನಲ್ಲಿ ನೆನಪಿನಲ್ಲಿಡಬೇಕು. ವಾದಗಳು ಮುಗಿದಮೇಲೆ ತೀರ್ಪು ಕೊಡುವ ತನಕ ಲಾಯರುಗಳು ಹೇಳಿದ್ದನ್ನು ನೆನಪಿನಲ್ಲಿಡಬೇಕು. ಆದರೆ ಡಾಕ್ಟರುಗಳಿಗೆ ಈ ತಾಪತ್ರಯವಿಲ್ಲ. ರೋಗಿಗಳು ಹೇಳಿದ್ದನ್ನೇ ಹೇಳುತ್ತಿರುವಾಗ, ಮರುಮರುಕಳಿಸಿ ನುಡಿಯುವಾಗ ಕೇಳಿಸಿದಂತೆ ನಟಿಸಿದರೆ ಸಾಕು, ಕಿವಿಗೆ ಕೇಳಿಸಿದ್ದು ಕಿವಿಯಲ್ಲೇ ಉಳಿದುಕೊಂಡರಾಯಿತು. ಮೆದುಳನ್ನು ಮುಟ್ಟಬೇಕಾಗಿಲ್ಲ. ಹಾಗಾಗಿ ಡಾಕ್ಟರುಗಳ ತಾಪತ್ರಯ ಬಹಳ ಕಡಮೆ.

ಜಡ್ಜಿ ರಾಮಯ್ಯನವರು ಹೊಟ್ಟೆನೋವಿಗಾಗಿ ೧೯೩೬ರಲ್ಲಿ ನನ್ನ ಬಳಿಗೆ ಬಂದಾಗ ಈ ತಾರತಮ್ಯದ ನೆನಪಾಯಿತು. "ನೋಡಿ, ಡಾಕ್ಟರೇ, ಮಧ್ಯಾಹ್ನ ಮೂರೂವರೆ ಗಂಟೆ ಆಯಿತು ಅಂದರೆ ಹೊಟ್ಟೆಯಲ್ಲಿ ಉರಿ ಶುರುವಾಗುತ್ತೆ. ಐದು ನಿಮಿಷಗಳಲ್ಲಿ ಹೊಟ್ಟೆ ಉಬ್ಬರಿಸಿಕೊಂಡ ಹಾಗೆ ಆಗುತ್ತೆ. ಇನ್ನೈದು ನಿಮಿಷಗಳಲ್ಲಿ ತೇಗು ಬರಲೋ ಬೇಡವೋ ಎಂದು ಎದೆಯನ್ನು ಕುಕ್ಕುಕ್ಕೆ ಶುರು ಮಾಡುತ್ತದೆ. ಅದಾದ ಹತ್ತು ನಿಮಿಷಗಳಲ್ಲಿ ಹುಳಿತೇಗು ಬರುತ್ತದೆ. ಗಂಟಲೆಲ್ಲಾ ಉರಿಯಾಗುತ್ತದೆ. ಕಮರುತೇಗು ಕೂಡ ಒಂದೊಂದು ಸರ್ತಿ ಬರುತ್ತದೆ. ತೇಗಿದ ಎರಡು ಮೂರು ನಿಮಿಷ ಸ್ವಲ್ಪ ಸಮಾಧಾನವಾಗಿರುತ್ತದೆ.

ಅನಂತರ ತಿರುಗಿ ಹುಳಿತೇಗು ಮರಿಹಾಕುತ್ತದೆ. ಊಟ ಮಾಡುವಾಗ ಮಧ್ಯಾಹ್ನ ಉಂಡ ಅನ್ನದ ಅಗುಳುಗಳು ತೇಗಿದಾಗ ಬಾಯಿಗೆ ಬರುವುದುಂಟು. ಈವೊತ್ತು ಆಲೂಗಡ್ಡೆ ಪಲ್ಯ ಮಾಡಿದ್ದರು. ಆಲೂಗಡ್ಡೆ ಕಂಡರೆ ನನಗೆ ಇಷ್ಟ. ಹದವಾಗಿ ಹುಳಿಹಿಂಡಿ ಒಗ್ಗರಣೆ ಹಾಕಿತ್ತು. ಚೆನ್ನಾಗಿ ಅಗಿದೂ ಅಗಿದೂ ತುತ್ತನ್ನು ನಾಲಿಗೆಯ ಮೇಲಾಡಿಸಿ ರುಚಿ ಹೀರಿ ಸಂತಸಪಟ್ಟು ನುಂಗುತ್ತಿದ್ದೆ, ಹನ್ನೆರಡು ಗಂಟೆಗೆ ಉಂಡಿದ್ದೆ. ಮೂರೂವರೆಯ ಹೊತ್ತಿಗೆ ನೋಡಿ, ಹುಡಿ ಪುಡಿ ಹಿಟ್ಟಾಗಿರಬೇಕಾದ ಆಲೂಗಡ್ಡೆ ಹೊಟ್ಟೆಯಲ್ಲಿ ಹೆಪ್ಪಿಟ್ಟು ತಿರುಗಿ ಗಟ್ಟಿ ಯಾದ ಆಲೂಗಡ್ಡೆ ಆಗಿಬಿಡುತ್ತೆ ಅಂತ ಕಾಣುತ್ತೆ ; ಅದೇ ಎದೆಯನ್ನು ಒದ್ದು ಬಾಯಿಗೆ ಬರಲು ಹವಣಿಸಿತ್ತೋ ಏನೋ....ಅಷ್ಟು ಹೊತ್ತಿಗೆ ಮಧ್ಯಾಹ್ನ ನಾಲ್ಕು ಗಂಟೆಯಾಗಿರುತ್ತೆ . . . . . ಕಾಫಿಹುಡುಗನು ಆ ಹೊತ್ತಿಗೆ ಸರಿಯಾಗಿ ಕಾಫಿ ತರುತ್ತಾನೆ. ಅದನ್ನು ಗುಟುಕುಗುಟುಕಾಗಿ ಕುಡಿಯುತ್ತೇನೆ. ಹತ್ತು ಹದಿನೈದು ನಿಮಿಷಗಳಲ್ಲಿ ಹೊಟ್ಟೆಯು ಸಮಾಧಾನವಾಗುತ್ತದೆ. ಎದೆಯು ಹಗುರವಾಗುತ್ತದೆ . . . ”

ಇವೆಲ್ಲವನ್ನೂ ಆತ ದಿನಾಗಲೂ ಹೇಳುತ್ತಿದ್ದ. ಮೂರು ನಾಲ್ಕು ದಿನ ಗಳ ಹಿಂದೆ ಚಿಕಿತ್ಸೆಗೆ ಶುರುಮಾಡಿದ್ದ. ಇಷ್ಟನ್ನು ಹೇಳುವುದಕ್ಕೆ ಹದಿನೈದು ನಿಮಿಷಗಳು ಅಂದರೆ ಒಂಭೈನೂರು ಸೆಕೆಂಡುಗಳನ್ನು ತೆಗೆದುಕೊಳ್ಳುತ್ತಿದ್ದ. ಅಷ್ಟು ಹೊತ್ತಿನಲ್ಲಿ ಎರಡು ಸಣ್ಣ ಆಪರೇಷನ್ನುಗಳನ್ನೋ ಅಥವಾ ಹತ್ತು ಹನ್ನೆರಡು ಜ್ವರದವರನ್ನೋ ಪರೀಕ್ಷಿಸಿ ಸೇವೆಮಾಡಬಹುದು. ಹೇಳಿದ್ದನ್ನೇ ಹೇಳುವಾಗಲೂ ನವೀನತೆಯನ್ನು ಆತ ತೋರಿಸುತ್ತಿರಲಿಲ್ಲ. ಗ್ರಾಮೋಫೋನ್ ರೆಕಾರ್ಡ್ ಹಾಕಿದಾಗ, ಅದರಲ್ಲಿ ಒಂದು ಪಂಕ್ತಿ ಹರಿದುಹೋಗಿದ್ದರೆ, 'ಬಂದನೋ ಬಂದನೋ ಬಂದನೋ' ಅಂತ ಬಡಕೊಳ್ಳಲ್ಲವೇ ಹಾಗೆ ಇವ ಒಂದೇ ರಾಗದಲ್ಲಿ ಬಡಬಡಿಸುತ್ತಿದ್ದ.

ಕಿವಿಗೆ ಮೊದಲನೇ ದಿವಸ ಕೇಳಿಸಿಕೊಂಡೆ ; ಮನಸ್ಸಿಗೂ ಹಚ್ಚಿಕೊಂಡೆ. ಎರಡನೇ ದಿನದಿಂದ ಕಿವಿಗೆ ಬೀಳಿಸಿಕೊಳ್ಳುತ್ತಿದ್ದೆ ; ಮನಸ್ಸಿನಲ್ಲಿ ಇನ್ನೇನ ನ್ನಾದರೂ ಯೋಚಿಸುತ್ತಿದ್ದೆ. ಆತನ ಮೇಲೆಯೇ ದೃಷ್ಟಿಯನ್ನು ನೆಟ್ಟು ಆಗಿಂದಾಗ್ಗೆ ಹೂ ಹೂ ಅನ್ನುತ್ತ “ಇವನೇ ಅಲ್ಲವೇ ಎರಡು ವರ್ಷಗಳ ಹಿಂದೆ ಲಾಯರ್ ಕಿಟ್ಟಪ್ಪನವರ ಹತ್ತಿರ 'ಆ ಡಾಕ್ಟರ ಹತ್ತಿರ ಯಾಕೆ ಹೋಗ್ತೀ,

ಕಿಟ್ಟಪ್ಪ ? ಸ್ವಲ್ಪ ಎಳೇ ನಿಂಬೇಕಾಯಿ ! ವೈದ್ಯ ಪತ್ರಿಕೇಲಿ ಬಂದಿದ್ದನ್ನು ಓದಿ, ಅರ್ಥಂಬರ್ಥ ಅರ್ಥಮಾಡಿಕೊಂಡು, ಸಿಕ್ಕಿದ ರೋಗಿಗಳ ಮೇಲೆ ಪರೀಕ್ಷೆ ನಡಸುತ್ತಾನೆ. ನುರಿತ ಹಿರಿಯ ಡಾಕ್ಟರ ಹತ್ತಿರ ಹೋಗಬಾರದೇ ?' ಎಂದು ಹೇಳಿದ್ದವನು ? ಲಾಯರು ಕಿಟ್ಟಪ್ಪನವರೇ ಇದನ್ನು ಹೇಳಿದ್ದರು. 'ಜಡ್ಜಿ ರಾಮಯ್ಯನವರ ಪರಿಚಯ ನಿಮಗಿದೆಯೋ ಡಾಕ್ಟರೇ ?' ಎಂದು ಕೇಳಿದ್ದರು. 'ಇಲ್ಲವಲ್ಲಾ ಸಾರ್' ಎಂದು ನಾನಂದಾಗ, 'ಮತ್ತೆ ಹೀಗೆಲ್ಲಾ ಅಂದರಲ್ಲಾ ! ನಿಮ್ಮ. ಪರಿಯವಿಲ್ಲದೇನೇ ಹೀಗಂದರೇ !' ಎಂದು ಆಶ್ಚರ್ಯಪಟ್ಟಿದ್ದರು. 'ಜಡ್ಜಿಗಳಲ್ಲವೇ ಸಾರ್ ! ಅವರು ತೀರ್ಪುಕೊಡುವುದೂ ಹೀಗೇನೇ !' ಎಂದು ನಾನು ಕುಹಕವಾಡಿದ್ದೆ . . , ಇದನ್ನೆಲ್ಲಾ ನೆನಪಿಗೆ ತಂದುಕೊಂಡ. ಜಡ್ಜಿ ರಾಮಯ್ಯನವರ ವಿಷಯವಾಗಿ ಯಾರ್‍ಯಾರು ಏನೇನು ಬಾಡಿ ಮಾತಂಗಳನ್ನಾಡಿದರು, ಎನ್ನುವುದನ್ನೆಲ್ಲಾ ಖುಷಿಯಾಗಿ ಜ್ಞಾಪಿಸಿಕೊಳ್ಳುತ್ತಿದ್ದೆ. ಹ್ಞೂ ಅಂತ ಕಡೇಸಲ ಹ್ಞೂಗುಟ್ಟಿ, ಅವರ ಹೊಟ್ಟೆಯ ಮೇಲೆ ಕೈಯಾಡಿಸಿ, ವಾಡಿಕೆಯ ಔಷಧಿಯನ್ನೇ ಕೊಟ್ಟು ಕಳಿಸುತ್ತಿದ್ದೆ. ಪಥ್ಯವನ್ನೂ ಇರಿಸಿದೆ.

ಒಂದು ವಾರವಾದರೂ ಆತನಿಗೆ ಗುಣ ಕಂಡು ಬರಲಿಲ್ಲ. ಹೊಟ್ಟೆಯು ಕೆರಳಿದೆ. ಅದರಿಂದ ಹೊಟ್ಟೆಯಲ್ಲಿನ ಆಮ್ಲದ್ರವವು ಹೆಚ್ಚಾಗಿ ಹುಳಿತೇಗು ಬರುತ್ತಿದೆ. ಮಸಾಲೆ ಹೆಚ್ಚಾದ ಆಹಾರವನ್ನು ಕಂಠಪೂರ್ತಿ ತಿಂದಿದಾನೆ ಅಂತ ಊಹಿಸಿ, ಸಪ್ಪೆಪಥ್ಯ, ಆಮ್ಲದ್ರವವನ್ನು ನಿರುಪದ್ರವ ಮಾಡುವ ಔಷಧಿಗಳನ್ನು ಪ್ರಯೋಗಿಸಿದ್ದೆ. ಒಂದು ವಾರದಲ್ಲ ಗುಣಮುಖವಾಗಬೇಕು. ಮೂರು ನಾಲ್ಕು ವಾರಗಳಲ್ಲಿ ಪೂರ್ಣವಾಗಿ ಗುಣವಾಗಬೇಕು ಆದರೆ ಆತನಿಗೆ ಸ್ವಲ್ಪವೂ ಪ್ರಯೋಜನವಾಗಿರಲಿಲ್ಲ. ಅದಕ್ಕಾಗಿ 'ತಿರುಗಿ ಪೂರ್ಣ ಪರೀಕ್ಷೆ ಮಾಡುತ್ತೇನೆ. ನಾಳೆ ಬೆಳಗ್ಗೆ ಬರಿಹೊಟ್ಟೆಯಲ್ಲಿ ಬೇಗ ಬನ್ನಿ' ಎಂದು ಹೇಳಿ ಕಳಿಸಿದೆ.

* * *

ಮಾರನೆಯ ದಿನ ಆತ ಬಂದಾಗ ಹೊಟ್ಟೆಯನ್ನು ಪರೀಕ್ಷೆಮಾಡಿದೆ. ಹೊಟ್ಟೆ ಸಡಿಲವಾಗೇ ಇತ್ತು. ಕೆಲವು ವೇಳೆ ಹೊಟ್ಟೆಯ ಕೆರಳುವಿಕೆಗೆ

ಅಪೆಂಡಿಕ್ಸ್, ಅಥವಾ ಸೀಕಂ ಎಂಬ ದೊಡ್ಡಕರುಳಿನ ಮೊದಲ ಭಾಗದ ಬೇನೆಗಳು ಕಾರಣವಾಗಿರಬಹುದು. ಹೊಟ್ಟೆಗೂ ಅಪೆಂಡಿಕ್ಸಿಗೂ ಸೀಕಂಗೂ ಬೆನ್ನಿನ ಹತ್ತನೆಯ ನರವೇ ಹರಡಿರುತ್ತದೆ. ಈ ಕಾರಣದಿಂದ ಅಪೆಂಡಿಕ್ಸ್‌ನಲ್ಲಿ ಬೇನೆ ಇದ್ದರೆ ಹೊಟ್ಟೆಯಲ್ಲಿ ನೋವು ಕಾಣಿಸಿಕೊಳ್ಳಬಹುದು. ಅದು ಕಾರಣ ಅಪೆಂಡಿಸೈಟಿಸ್ ಇರಬಹುದೇ ಎಂದು ಪರೀಕ್ಷಿಸಿದೆ. ಆದಿರಬಹುದು ಎಂದು ಸೂಚಿಸುವ ಯಾವ ಸಾಕ್ಷ್ಯವೂ ದೊರಕಲಿಲ್ಲ. ಸೀಕಂನಲ್ಲಿ ಆಮಶಂಕೆಯನ್ನುಂಟುಮಾಡುವ ಕ್ರಿಮಿಗಳಲ್ಲೊಂದು ನೆಲಸಿ ಬೇನೆಪಡಿಸಿದರೂ ಹೊಟ್ಟೆಯಲ್ಲಿ ಉರಿ, ನೋವು ಕಾಣಿಸಬಹುದು. ಅದಿರಬಹುದೋ ಎಂದು ವಿಚಾರಿಸಿದೆ. ಹಿಂದೆಂದೂ ಆತನಿಗ ಆಮಶಂಕೆ ಬಂದೇ ಇರಲಿಲ್ಲ.

ಕೆಲವೊಮ್ಮೆ ಬೆನ್ನಿನ ಒಂಭತ್ತನೇ ನರವು ಸರಬರಾಜಿಸುವ ಪಿತ್ತಚೀಲದ ಬೇನೆ ಬಂದರೂ ಹೊಟ್ಟೆಯಲ್ಲಿ ನೋವು ಕಾಣಿಸಬಹುದು. ಆದಿರಬಹುದೋ ಎಂದು ಪರೀಕ್ಷೆಮಾಡಿದೆ. ಅನುಮಾನ ಬರುವಂತಹ ಸಾಕ್ಷ್ಯ ಕೂಡ ಸಿಗಲಿಲ್ಲ.

ಆಂದಮೇಲೆ ಈತನಿಗ ಹೊಟ್ಟೆಯೇ ಕೆರಳಿದೆ. ಸಾಮಾನ್ಯವಾಗಿ ಮಾನಸಿಕ ಅವ್ಯವಸ್ಥೆಯಿಂದಲೇ ಹೀಗಾಗುವುದು. ಅವಮಾನದ ಮಾತುಗಳನ್ನು ಹಿರಿಯು ನೆಂಟರಿಷ್ಟರು ಆಡಿದರೆ, ರೇಗಿ ಎದುರುಮಾತನಾಡಿ ಅವಮಾನವನ್ನು ನೀಗಿಸಿಕೊಳ್ಳಲಾಗದಿದ್ದರೆ, ಈ ರೀತಿ ಹೊಟ್ಟೆ ಉರಿದುಹೋಗುತ್ತೆ ಎನ್ನುವ ನಾಣ್ನುಡಿ ಅನುಭವದ ಮಾತು. ವೈಜ್ಞಾನಿಕವಾಗಿ ಕೂಡ ಇದು ದೃಢೀಕರಿಸಲ್ಪಟ್ಟಿದೆ. ಆದ್ದರಿಂದ ಅವರ ಮನೆಯಲ್ಲಿ ಏನಾದರೂ ಅನುಭವಿಸಲಾರದ, ಹಾಗೂ ಸರಿಮಾಡಲಾಗದ ಸಂದರ್ಭಗಳು ಇವೆಯೋ ವಿಚಾರಿಸೋಣ ಎಂದು ಎಳ್ಳುಂಬಳಸೆ ಪ್ರಶ್ನೆಗಳನ್ನು ಹಾಕಿದೆ. ನೇರವಾಗಿ ಕೇಳಿದರೆ ಸಹಜವಾಗಿ ರೋಗಿಯು 'ಮನೆಯಲ್ಲಿ ಎಲ್ಲಾ ಚೆಂದ, ಸುಖವಾಗಿದ್ದೇನೆ' ಎಂದೇ ಹೇಳುತ್ತಾನೆ.

ಹೆಂಡತಿ ಆರೋಗ್ಯವಾಗಿದ್ದಳು, ಅನ್ಯೋನ್ಯವಾಗಿದ್ದಳು. ನಾಲ್ಕು ಜನ ಮಕ್ಕಳು. ಮೊದಲ ಮಗನಿಗೆ ಇಂಜಿನಿಯರ್ ಕೆಲಸ : ಮದುವೆಯಾಗಿ ಸುಖವಾಗಿದ್ದಾನೆ. ಎರಡನೇ ಮಗು ಹೆಣ್ಣು ; ಅದಕ್ಕೂ ಮದುವೆಯಾಗಿ ಎರಡು ಮಕ್ಕಳಾಗಿವೆ. ಅಳಿಯನಿಗೆ ಆರು ನೂರು ಸಂಬಳ. ಮೂರನೆಯ ಹೆಣ್ಣಿಗೆ ಹದಿನೈದು. ಎಸ್.ಎಸ್.ಎಲ್.ಸೀ.ಗೆ ಓದುತ್ತಿದ್ದಾಳೆ. ನಾಲ್ಕನೆಯ ಗಂಡು

ಮಗುವಿಗೆ ಒಂಭತ್ತು, ಮಾಧ್ಯಮಿಕ ಶಾಲೆಯಲ್ಲಿ ಓದುತ್ತಿದ್ದಾನೆ. ಎಂದೆಲ್ಲಾ ವಿವರಗಳು ತಿಳಿದವು. ರಾಮಯ್ಯನವರಿಗೆ ತಾಯಿ ತಂದೆ ಇರಲಿಲ್ಲ. ಹೆಂಡತಿ ತಾಯಿ ವಿವಾದಕ್ಕೆ ಸಿಕ್ಕಿಬಿದ್ದಿರಲಿಲ್ಲ. ಅಣ್ಣತಮ್ಮಂದಿರೆಲ್ಲಾ ಬೇರೆ ಬೇರೆ ಸುಖವಾಗಿ ಇದ್ದರು,

ಕಚೇರಿಯಲ್ಲಿ ಕೂಡ ರಾಮಯ್ಯನವರು ಚೆನ್ನಾಗಿದ್ದವರು, ಮೇಲಧಿಕಾರಿಗಳ ಮೆಚ್ಚುಗೆ ಪಡೆದಿದ್ದರು. ಕೋರ್ಟಿನ ಕೆಲಸಗಾರರಿಗೆ ಜಡ್ಜಿಯವರು ಅಚ್ಚುಮೆಚ್ಚು. ಸ್ವಲ್ಪ ಮುಂಗೋಪಿಗಳು ಆದರೂ ಹೃದಯ ಒಳ್ಳೆಯದು ಎಂದನ್ನುತ್ತಿದ್ದರಂತೆ. ಸಮಾಜದಲ್ಲಿ ಜಡ್ಜಿಗಳು ಗಣ್ಯತೆಹೊಂದಿದ್ದವರು. ಸಂಗೀತಸಭೆಯ ಅಧ್ಯಕ್ಷರು. ಅರಮನೆಯ ಔತಣಗಳಿಗೆಲ್ಲಾ ಕರೆಯೋಲೆ ಬರುತ್ತಿತ್ತು.

ಅಂದಮೇಲೆ ಈತನಿಗೇನು ಗುನುಗು ?

ಯಾವನಿಗಾದರೂ ಆಸೆ ಇದ್ದೇ ಇರುತ್ತದೆ. ಹುದುಗಿರುವ ಅಂತಹ ಆಸೆ ಹೊನ್ನು ಹೆಣ್ಣು ಮಣ್ಣುಗಳನ್ನೇ ಅವಲಂಬಿಸಿರುತ್ತೆ. ಈತನಿಗಿರುವ ಸಂಬಳ, ಆಸ್ತಿಪಾಸ್ತಿ, ದೊರಕಿರುವ ಹೆಣ್ಣು, ಕಟ್ಟಿಸಿದ ಮನೆ, ಕೊಂಡ ಭೂಮಿ, ಇವು ತೃಪ್ತಿಯನ್ನು ಕೊಡದೇ ಇರಬಹುದೋ ಅಥವಾ ಇನ್ನೂ ಯಾತರ ಮೇಲೋ ಕಣ್ಣಿರಬಹುದೋ ಎನ್ನಿಸಿತು. ಅದನ್ನು ಹೇಗೆ ಕಂಡುಹಿಡಿಯುವುದು ? ಆತನ ಮನಸ್ಸನ್ನು ಪ್ರಶ್ನೋತ್ತರಗಳಿಂದ ಭೇದಿಸಿ ತಿಳಿಯಬೇಕು. ಹೀಗೆ ಪ್ರಯೋಗ ನಡೆಸಬೇಕಾದರೆ, ಫಲಿತಾಂಶ ಯಶಸ್ವಿಯಾಗಿ ದೊರಕಬೇಕಾದರೆ ಒಂದೆರಡು ವರ್ಷಗಳಾದರೂ ಆಗಬಹುದು. ಆವೇಳೆಗೆ ಪ್ರಕೃತಿ ಸಹಜವಾಗಿ ಆತನ ಮನಸ್ಸಿನ ಆ ದುರಾಸೆಯನ್ನು ಆತನ ವಿವೇಚನಾಶಕ್ತಿಯೇ ಬಿಡಿಸುತ್ತದೆ. ಆದ್ದರಿಂದ ಆ ಮಾರ್ಗ ಸೂಕ್ತವಲ್ಲ.

ಸರಿ ! ಇನ್ನೂ ಕಟ್ಟುನಿಟ್ಟಾಗಿ ಪಥ್ಯ ಇರಿಸುವುದು. ಎರಡೆರಡು ಗಂಟೆಗಳಿಗೆ ಸ್ವಲ್ಪ ಸ್ವಲ್ಪ ಹಾಲು, ಅಥವಾ ಸಪ್ಪೆ ಆಹಾರಗಳನ್ನು ಸೇವಿಸುವಂತೆ ನಿಯಮಿಸಿದರೆ, ಹೆಚ್ಚಾಗಿ ಉಂಟಾಗುವ ಆಮ್ಲದ್ರವವು ಆಹಾರವನ್ನು ಪಚನ ಮಾಡಿ ನಿರುಪದ್ರವವಾಗುತ್ತದೆ. ಆಗ ನೋವು ಕಾಣಿಸಿಕೊಳ್ಳುವುದಿಲ್ಲ. ತಂಬಾಕಿನ ಒಂದು ಅಂಶವು ನರಗಳನ್ನು ಉದ್ರೇಕಿಸಿ ಆಮ್ಲದ್ರವವು ಹೊಟ್ಟೆಯಲ್ಲಿ ಹೆಚ್ಚಾಗಿ ಸ್ರವಿಸುವಂತೆ ಮಾಡುತ್ತದೆ. ಆದ್ದರಿಂದ ನಶ್ಯ, ತಂಬಾಕಿನ

ಪದಾರ್ಥಗಳು ಅಂದರೆ ಬೀಡಿ, ಸಿಗರೇಟ್, ಎಲಡಿಕೆ ಜತೆಗೆ ಜಗಿಯುವ ತಂಬಾಕು ಇವುಗಳನ್ನು ನಿಷೇಧಿಸಬೇಕು. ಜಡ್ಜಿಯವರು ಮೋಜಿಗೆ ಸಿಗರೇಟನ್ನು ಯಾವಾಗಲಾದರೂ ಸೇದುವುದುಂಟು. ಅದನ್ನು ತಪ್ಪಿಸಬೇಕು. ಆಹಾರವನ್ನು ನಿಯಮಿತ ವೇಳೆಯಲ್ಲಿ ಸೇವಿಸಿ, ಊಟವಾದ ಮೇಲೆ ಸ್ವಲ್ಪ ಹೊತ್ತು ವಿಶ್ರಾಂತಿ ಪಡೆಯುವಂತೆ ನಿಯಮಿಸಬೇಕು. ಹೊಟ್ಟೆಗೆ ಸೇರುವ ವೇಳೆಗೆ ಮೆದುವಾಗಿರುವಂತ ಆಹಾರವನ್ನು ಚೆನ್ನಾಗಿ ಅಗಿದು ಅಗಿದು ನುಂಗಬೇಕು. ಮಾದಕ ಪದಾರ್ಥಗಳನ್ನು ನಿಷೇಧಿಸಬೇಕು.

—ಎಂದೆಲ್ಲಾ ಯೋಚಿಸಿ, ಆಹಾರದ ವೇಳಾಪಟ್ಟಿಯನ್ನೇ ಸುದೀರ್ಘವಾಗಿ ಬರೆದುಕೊಟ್ಟೆ. ಅರ್ಧಗಂಟೆ ಅವರೊಡನೆ ಕುಳಿತು ಎಲ್ಲವನ್ನೂ ಸಾವಧಾನವಾಗಿ ವಿವರಿಸಿದೆ. ಅವರ ಮನಸ್ಸಿಗೂ ನಾಟಿದಂತೆ ತೋರಿತು. 'ಜಾಚೂ ತಪ್ಪದೆ ಮಾಡುತ್ತೇನೆ' ಎಂದರು.

ಒಂದು ವಾರದಲ್ಲಿ ಜಡ್ಜಿಗಳು 'ಗುಣಮುಖವಾಗಿದ್ದೀನಿ, ಡಾಕ್ಟರೇ. ಎಷ್ಟೋ ಹಗುರಾಗಿದೆ ಹೊಟ್ಟೆ. ಹೊಟ್ಟೆ ಇದೆ ಎಂದೇ ತಿಳಿಯುವುದಿಲ್ಲ' ಎಂದು ಹೇಳಿದರು. ಎರಡು ವಾರಗಳಾದ ಮೇಲೆ 'ಇನ್ನೂ ಪಥ್ಯಮಾಡಬೇಕೆ ?' ಎಂದು ಕೇಳಿದರು. 'ಇನ್ನೆರಡು ವಾರ ಮಾಡಿ, ಸಾಕು' ಎಂದೆ. ಇನ್ನೂ ಎರಡು ವಾರ ಮಾಡಿದರು. 'ಎಲ್ಲವೂ ಸರಿಹೋದಹಾಗೆ ಕಾಣುತ್ತೆ' ಎಂದರು. 'ಅಂದಮೇಲೆ ಔಷಧಿಗಳನ್ನು ನಿಲ್ಲಿಸಿ. ಆದರೆ ಪಥ್ಯವನ್ನು ಸಡಿಲಪಡಿಸುವಾಗ ಹುಷಾರಾಗಿರಿ. ಸ್ವಲ್ಪ ಸ್ವಲ್ಪವಾಗಿ ಆಹಾರವನ್ನು ಹೆಚ್ಚಿಸಿಕೊಳ್ಳಿ' ಎಂದು ಮುಂಜಾಗ್ರತೆ ಕೊಟ್ಟೆ.

ಐದಾರು ತಿಂಗಳಾಗಿರಬಹುದು. ತಿರುಗಿ ಜಡ್ಜರು ಬಂದು "ಏನು ತಿಂದರೂ ಹುಳಿಹುಳಿವಾಸನೆ ಬಡಿಯುತ್ತೆ, ಅರ್ಧ ಮುಕ್ಕಾಲು ಗಂಟೆಯಲ್ಲಿ. ಎಲ್ಲವೂ ಹುಳಿವಾಂತಿಯಾಗಿಬಿಡುತ್ತೆ. ಸಂಕಟ ನೋವು ಉರಿ ಎಲ್ಲವೂ ಶುರುವಾಗಿದೆ, ಎರಡು ಮೂರು ವಾರಗಳಿಂದ" ಎಂದರು. "ಎಲ್ಲೋ ಅಪಥ್ಯವಾಗಿದೆ. ಹೊಟ್ಟೆಯ ಕೆರಳುವಿಕೆಯು ಹೀಗೆ ಮರುಕಳಿಸುವುದು ಸ್ವಾಭಾವಿಕ. ತಿರುಗಿ ಪಥ್ಯ ಮಾಡಬೇಕು. ಆದರೆ ಮೊದಲು ಎಕ್ಸ್‌ರೇ ಮಾಡಿಸಿ. ಹೊಟ್ಟೆಯು ಕೆರಳಿದೆಯೇ ಅಥವಾ ಹುಣ್ಣೇ ಆಗಿಬಿಟ್ಟಿದೆಯೋ ನೋಡುವುದು ಒಳ್ಳೆಯದು" ಎಂದು ಹೇಳಿ ಹೊಟ್ಟೆಯ ಎಕ್ಸ್‌ರೇ ಚಿತ್ರಗಳನ್ನು ತೆಗೆಸಿದೆ. ಹೊಟ್ಟೆಯು

ಚಿಕ್ಕ ಕರುಳನ್ನು ಸೇರುವ ಕಡೆ ಹುಣ್ಣಾಗಿತ್ತು. ಧೂಳು ಕಣ್ಣಿನೊಳಕ್ಕೆ ಬಿದ್ದರೆ ರೆಪ್ಪೆ ಮುಚ್ಚಿಕೊಳ್ಳುವುದಿಲ್ಲವೇ ಹಾಗೆಯೇ ಹುಣ್ಣಾಗಿದ್ದ ಹೊಟ್ಟೆಯ ಭಾಗವು ಬಿಗಿದುಕೊಂಡಿತ್ತು. ಹಾಗಾಗಿ ಹೊಟ್ಟೆಯಲ್ಲಿದ್ದ ಆಹಾರವು ಮುಂದೆ ಕರುಳಿಗೆ ಹೋಗಲು ತಡೆಯುಂಟಾಗಿತ್ತು. ಅದಕ್ಕೇ ಅವರು ಹುಳಿಹುಳಿ ವಾಂತಿ ಮಾಡಿಕೊಳ್ಳುತ್ತಿದ್ದರು.

"ಬರೀ ದ್ರವರೂಪದಲ್ಲಿರುವ ಆಹಾರವನ್ನೇ ಸೇವಿಸಬೇಕು. ಹೆಚ್ಚು ಕಠಿಣವಾಗಿ ಔಷಧಿಗಳ ಪ್ರಯೋಗಮಾಡಬೇಕು. ವಿಶ್ರಾಂತಿಯು ಅವಶ್ಯಕ!" ಎಂದು ಎಲ್ಲ ವಿವರಗಳನ್ನೂ ಹೇಳಿದೆ. "ಆರೆಂಟು ತಿಂಗಳಲ್ಲಿ ಗುಣವಾಗದೆ ಇದ್ದರೆ, ದೇಹಸ್ಥಿತಿಯು ನಿಶ್ಶಕ್ತಿಯಾದರೆ, ಶಸ್ತ್ರಚಿಕಿತ್ಸೆಯನ್ನು ಮಾಡಬೇಕಾದೀತು" ಎಂದು ಎಚ್ಚರಿಕೆಯನ್ನೂ ಕೊಟ್ಟೆ.

ಮೂರು ತಿಂಗಳು ರಜವನ್ನೇನೋ ತೆಗೆದುಕೊಂಡು ಹೇಳಿದಂತೆಲ್ಲಾ ಆತ ಮಾಡಿದ. ವಾಂತಿಯೇನೋ ನಿಂತಿತ್ತು. ಆದರೆ ಗಟ್ಟಿಯಾದ ಆಹಾರವನ್ನು ಕೊಟ್ಟು ನೋಡುವ ಮೊದಲು ತಿರುಗಿ ಎಕ್ಸ್‌ರೇ ಮಾಡಿ ನೋಡೋಣ; ಹುಣ್ಣು ಆರಿದೆ ಅಂತ ದೃಢಮಾಡಿಕೊಂಡು ಗಟ್ಟಿ ಆಹಾರ ಕೊಡೋಣ, ಎಂದು ನಿರ್ಣಯಿಸಿದೆ. ಎಕ್ಸ್‌ರೇ ಮಾಡಿಸಿದರೆ, ಹೊಟ್ಟೆಗೆ ಹೋದುದು ೨೪ ಗಂಟೆಗಳಾದರೂ ಅಲ್ಲಿಯೇ ಗಡು ಎಂದು ಕುಳಿತಿತ್ತು. ಮುಂದಕ್ಕೆ ಕರುಳಿಗೆ ಸಾಗತ್ತಿಲ್ಲ.

"ಹೀಗಿದೆ ರಾಮಯ್ಯನವರೇ. ಇನ್ನೆರಡು ತಿಂಗಳು ದ್ರವರೂಪದ ಆಹಾರವನ್ನೇ ತೆಗೆದುಕೊಳ್ಳಬೇಕಾಗುತ್ತೆ. ಅಲ್ಲಿಗೂ ಸರಿಹೋಗುತ್ತೆ ಎಂದು ಹೇಳುವುದಕ್ಕೆ ಬರುವುದಿಲ್ಲ. ನಿಮ್ಮ ದೇಹವೂ ಸಾಕಷ್ಟು ಆಹಾರವಿಲ್ಲದೆ ದುರ್ಬಲವಾಗಿದೆ. ಈಗಲೇ ಶಸ್ತ್ರಚಿಕಿತ್ಸೆ ಮಾಡಿಸಿಕೊಂಡರೆ ಒಳ್ಳೆಯದು" ಎಂದು ಸಲಹೆಮಾಡಿದೆ.

ನಾನು ಹೇಳಿದ್ದನ್ನೆಲ್ಲಾ ಆತ ಶಾಂತಚಿತ್ತನಾಗಿಯೇ ಕೇಳಿದ. ಇದು ನನಗೆ ಸ್ವಲ್ಪ ಸಂತೋಷವನ್ನೇ ಉಂಟುಮಾಡಿತು. ಮುಂಗೋಪದ ಪ್ರಕೃತಿಯುವ, ಸ್ವಂತ ಅನುಭವವಾಗಲಿ ಪರಿಚಯವಾಗಲಿ ಇಲ್ಲದೆ ಇದ್ದಾಗ ನನ್ನನ್ನೂ ಟೀಕಿಸುವ ಸ್ವಭಾವದ ಅಹಂಕಾರಿ, ಶಸ್ತ್ರಚಿಕಿತ್ಸೆ ಎಂದರೆ ಸಾಮಾನ್ಯವಾಗಿ ಕುಗ್ಗಿಹೋಗುತ್ತಾನೆ. 'ಈ ಕಾಯಿಲೆ ಈತನಿಗೆ ಬುದ್ಧಿ ಕಲಿಸಿದೆ' ಎಂದುಕೊಂಡೆ.

ಅಷ್ಟರಲ್ಲೇ ಆತ ಮುಂದುವರಿದು "ಹೀಗೆ ನೀವು ಹೇಳಬಹುದು ಎಂದು ನನಗೂ ಅನುಮಾನ ಬಂದಿತ್ತು. ಮೆಡಿಸಿನ್ ಪಠ್ಯಪುಸ್ತಕವನ್ನೂ ಓದಿದೆ. ನೂತನ ಎಕ್ಸ್‌ರೇ ವರದಿಯನ್ನೂ ನೋಡಿದೆ. ಆದಕ್ಕೆ ಮನೆಯಲ್ಲಿ ಏನು ಮಾಡೋಣ ಅಂತ ವಿಚಾರಿಸಿದೆ. 'ಆಯುರ್ವೇದದ ಚಿಕಿತ್ಸೆ ಎಷ್ಟೋ ಬಾರಿ ಗುಣಪಡಿಸಿದೆ, ಅದನ್ನು ಮಾಡೋಣ. ಅದಕ್ಕೂ ಬಗ್ಗದೆ ಇದ್ದರೆ ಆಮೇಲೆ ಶಸ್ತ್ರಚಿಕಿತ್ಸೆ ಮಾಡಿಸೋಣ. ನಮ್ಮಪ್ಪ ಬದುಕಿದ್ದಾಗ ಇದೇ ರೀತಿ ನರಳಿ, ವೈಜ್ಞಾನಿಕ ವೈದ್ಯವು ನಿರುಪಯೋಗವಾದಾಗ ಆಯುರ್ವೇದ ಪಂಡಿತರ ಬಳಿ ಮೂರು ವಾರ ಹಸಿರು ಸೇವಿಸಿ, ಗುಣ ಹೊಂದಿದರು' ಎಂದು ಮನೆಯಾಕೆಯು ಹೇಳಿದಳು. ನನಗೂ ಅದೇ ಸರಿ ಕಾಣಿಸುತ್ತೆ. ಒಂದು ಕೈ ಆಯುರ್ವೇದ ನೋಡುತ್ತೇನೆ" ಎಂದು ತುಸು ನಗುತ್ತಲೇ ಹೇಳಿದರು.

"ನನಗೇನೋ ಅಳುಕು. ಅದರಿಂದ ಗುಣವಾಗಲಾರದೇನೋ, ಬೇನೆ ವಿಷಮಸ್ಥಿತಿಗೆ ಏರಿ, ರಕ್ತ ಕಾರುವಂತಾಗುತ್ತೇನೋ, ಎಂದು. ಆಯುರ್ವೇದದಲ್ಲಿ ಪಾದರಸ, ಪಚ್ಚಕರ್ಪೂರ, ತೀವ್ರಪರಿಣಾಮ ಮಾಡಬಹುದಾದ ಔಷಧಿಗಳನ್ನು ಪ್ರಯೋಗಿಸುತ್ತಾರೆ. ಹೊಟ್ಟೆಯ ಹುಣ್ಣು ಕೆರಳಿ ರಕ್ತಸ್ರಾವಕ್ಕೆ ಶುರುವಾದರೆ ಜೀವಕ್ಕೆ ಅಪಾಯ. ನೀವು ಓದಿದವರು, ತಿಳಿದವರು, ಹಿರಿಯರು. ದೇವರು ನಿಮಗೆ ಬುದ್ಧಿ ಕೊಟ್ಟ ಹಾಗೆ ಮಾಡಿ" ಎಂದು ಹೇಳಿ ನನ್ನ ಜವಾಬ್ದಾರಿಯನ್ನು ಝಾಡಿಸಿಕೊಂಡೆ.

* * *

೧೯೬೮. ಸಂಕ್ರಾಂತಿ ಹಬ್ಬ. ರಾತ್ರಿ ಊಟ ಮಾಡಿ, ಕುಸುರಿಕಾಳು, ಎಳ್ಳು, ರಂಗುರಂಗಿನ ಸಕ್ಕರೆ ಅಚ್ಚು, ಎಲ್ಲವನ್ನೂ ಲಲ್ಲೆಮಾತಾಡುತ್ತಾ ಮುಕ್ಕಿದ್ದೆ. ಹನ್ನೊಂದೋ ಹನ್ನೆರಡೋ ಆಗಿತ್ತು, ಮಲಗಿ ನಿದ್ರೆ ಬಂದಿದ್ದಾಗ ಕುಂಭಕರ್ಣನ ನಿದ್ರೆ ಬಂದಿತ್ತು.

ಧಡ! ಧಡ! ಬಾಗಿಲು ಬಡಿದ ಶಬ್ದವಾಯಿತು. ಎಚ್ಚರವಾಯಿತು. ಎದ್ದು ದೀಪ ಹಚ್ಚಿ, ವರಾಂಡಕ್ಕೆ ಹೋಗಿ, ಅಲ್ಲಿನ ದೀಪ ಹಚ್ಚಿ, ಬಾಗಿಲು

ತೆಗೆದೆ. ಜಡ್ಜಿ ರಾಮಯ್ಯನವರು ಲಾಂದ್ರ ಹಿಡಿದು ನಿಂತಿದ್ದ ಜವಾನನೊಡನೆ ಕಾಣಿಸಿದರು. ನಿದ್ರೆಯ ಅಮಲು ಕಡಮೆಯಾಯಿತು.

"ರಕ್ತದ ವಾಂತಿಯಾಯಿತೇ ? ಯಾವಾಗ ಆಯಿತು ? ನೀವೇ ಏಕೆ ಬಂದಿರಿ ? ಮುಖವೆಲ್ಲಾ ಬಿಳುಪೇರಿದೆಯಲ್ಲಾ ! ಹೇಳಿ ಕಳಿಸಬಾರದಾಗಿತ್ತೇ, ಜಡ್ಜಿಗಳೇ" ಎಂದು ಕೇಳಿದೆ.

"ನನಗೇನೂ ಆಗಿಲ್ಲ, ಡಾಕ್ಟರೇ ! ನನ್ನ ಮಗಳು ತುಂಬಾ ನರಳುತ್ತಾ ಇದಾಳೆ. ಕಣ್ಣುಗುಡ್ಡೆ ಮೇಲುಗುಡ್ಡೆ ತೇಲಿಸ್ತಾಳೆ. ಬಂದು ಏನಾದರೂ ಮಾಡಿ, ಡಾಕ್ಟರೇ" ಎಂದು ಬಲು ದೈನ್ಯದ ದನಿಯಲ್ಲಿ ಹೇಳಿದರು.

ಅವರ ಬೇನೆಯ ಹಿಂದಿನ ಚರಿತ್ರೆಯೆಲ್ಲವನ್ನೂ ತಿಳಿದಿದ್ದ ನನಗೆ, ಅವರ ಮುಖದ ಕಾತರವನ್ನು ಕಂಡು ಹೆದರಿಕೆಯಾಯಿತು. ಮಗಳ ಬೇನೆ ಏನೋ ತಿಳಿಯದು. ಆದರೆ ಆ ಕೊರಗಿನಿಂದ ಈತ, ಈತನ ದೇಹಸ್ಥಿತಿಯಲ್ಲಿ, ಎಲ್ಲಿ ಒರಗಿಬಿಡ್ತಾನೋ ಎಂದು ಭಯವಾಯಿತು. ಏನೊಂದೂ ಮಾತಾಡದೆ, ಒಳಕ್ಕೆ ಹೋಗಿ. ವೈದ್ಯನ ಮಡಿಪೆಟ್ಟಿಗೆಯನ್ನು ತೆಗೆದುಕೊಂಡು, ಮನೆಯಾಕೆಯನ್ನು ಎಬ್ಬಿಸಿ, 'ಬಾಗಿಲು ಹಾಕಿಕೋ, ಹೊರಗೆ ಹೋಗಿ ಬರಬೇಕಾಗಿದೆ. ಯಾರೋ ಅಸ್ವಾಸ್ಥ್ಯದಲ್ಲಿದ್ದಾರೆ' ಎಂದು ಹೇಳಿ, ಜಡ್ಜಿಗಳ ಜತೆ ನಡೆದುಹೋದೆ.

ಹತ್ತಿರವೇ ಅವರ ಮನೆ. ಅರ್ಧ ಗಂಟೆ ನಡೆಯುವುದರೊಳಗೇ ಅವರ ಮನೆ ಸಿಕ್ಕಿತು. ಆ ಹೊತ್ತಿಗೆ ನನಗೆ ಪೂರ್ಣವಾಗಿ ಎಚ್ಚರವಾಗಿತ್ತು. ಒಂದು ಮಾತನ್ನೂ ಒಬ್ಬರೂ ಆಡುತ್ತಿಲ್ಲ. ಅವರವರಿಗೆ ಅವರವರ ಮೂಲಭೂತ ಚಿಂತೆ.

ಅವರ ಮನೆಯಲ್ಲಿ ಎಲ್ಲ ದೀಪಗಳೂ ಹಚ್ಚಲ್ಪಟ್ಟಿತ್ತು. ಧಡಧಡ ಜಡ್ಜಿಗಳು ಮನೆಯೊಳಕ್ಕೆ ನುಗ್ಗಿದರು. ಅವರ ಹಿಂದೆಯೇ ನಾನೂ ಹೋದೆ. ಮಂಚದ ಪಕ್ಕದಲ್ಲಿ ನೆಲದ ಮೇಲೆ ಹಾಕಿದ್ದ ಹಾಸಿಗೆಯಲ್ಲಿ ಸುಂದರ ಯುವತಿಯೊಬ್ಬಳು ಮೇಲುಸಿರು ಎಳೆಯುತ್ತ ಮಲಗಿದ್ದಳು. ಮೈತುಂಬಾ ಹೊದಿಸಿದ್ದ ಶಾಲು ಕೂಡ ಆಕೆಯ ದೇಹದ ಕಣ್ಸೆಳೆವ ಏರುಪೇರುಗಳನ್ನು ಮುಚ್ಚಿಡಲು ಶಕ್ಯವಾಗಿರಲಿಲ್ಲ. ಬೇಗಬೇಗ ಉಸಿರಾಡುತ್ತಿದ್ದಾಕೆಯ ಗಂಟಲಿನಿಂದ ಸಾವೇರಿ ರಾಗದ ದನಿ ಕೇಳಿಬರುತ್ತಿತ್ತು. ಚಂದ್ರನ ಕಾಂತಿಯನ್ನು ಸೂಸುತ್ತಿದ್ದ ಹಣೆಯ ಮೇಲೆ, ಚಂದ್ರಕಾಂತ ಶಿಲೆಯು ಕಿರುಹನಿಗಳನ್ನು ಸ್ರವಿಸುವಂತೆ, ಬೆವರು

ಹನಿಗೂಡಿತ್ತು. ಅರೆಮುಚ್ಚಿದ ಕಣ್ಣುಗಳು ಯಾವ ಕನಸು ಕಂಡು ಬೆದರಿದ್ದುವೊ ಏನೋ. ಕಾಂತಿಹೀನವಾಗಿದ್ದುವು. ಅಯ್ಯೋ! ಎನಿಸಿತು ನೋಡಿದಾಗ.

"ಎಷ್ಟು ದಿವಸದಿಂದ ಕಾಯಿಲೆ ಬಿದ್ದಿದ್ದಾಳೆ? ಫೋರ್ ಫೋರ್ ಮೇಲುಸಿರು ಆಡ್ತಾ ಇದಾಳೆ! ಏನೇನು ಮಾಡಿದ್ದೀರಿ?" ಎಂದು ಕೋಪ ದಿಂದಲೇ ಕೇಳಿದೆ. "ತುಟ್ಟಗಟ್ಟಕ್ಕೆ ಬಂದಾಗಲೇ ನಮ್ಮನ್ನು ಸತಾಯಿಸೋದು" ಎಂದು ಹೇಳಿ ಆಕೆಯ ಪರೀಕ್ಷೆಗೆ ತೊಡಗಿದೆ.

"ಐದಾರು ದಿವಸದಿಂದ ನೆಗಡಿ ಕೆಮ್ಮು ಅಂತಿದ್ದಳು. ಎದ್ದು ಓಡಾಡ್ತಾ ಇದ್ದಳು. ಕಷಾಯ ಹಾಕಿಕೊಟ್ಟೆವು. ನಿನ್ನೆ ಜ್ವರ ಸ್ವಲ್ಪ ಹೆಚ್ಚಾಯಿತು. ಇವತ್ತು ಬೆಳಗ್ಗೆ ಎದ್ದು ಎರಕೊಂಡಳು. ಗೆಲುವಾಗಿದ್ದಳು. ಸಾಯಂಕಾಲ ಹೋಗಿ ಎಳ್ಳು ಬೀರಿ ಬಂದಳು. 'ಯಾಕೋ ಸುಸ್ತಮ್ಮ! ಊಟ ಬೇಡ' ಅಂತ ಹೇಳಿ ಎಂಟು ಗಂಟೆಗೆ ಮಲಗಿಕೊಂಡಳು. ನಾವೆಲ್ಲಾ ಊಟಮಾಡಿ ಬಂದು ಮಲಗಿದೆವು. ಒಂದು ಗಂಟೆ ಮುಂಚೆ ಗೊರಗೊರ ಶಬ್ದ ಕೇಳಿಸಿತು. ಎದ್ದು ಬಂದು ನೋಡಿದೆ. ಮಾತಾಡಿಸಿದೆ. ಉತ್ತರವೇ ಇಲ್ಲ. ಓಡಿಬಂದೆ ನಿಮ್ಮ ಮನೆಗೆ" ಅಂತ ಜಡ್ಜಿ ರಾಮಯ್ಯನವರು ಹೇಳಿದ್ದು ಕಿವಿಗೂ ಬಿದ್ದಿತ್ತು. ಮನಸ್ಸನ್ನೂ ಹೊಕ್ಕಿತ್ತು. ನನ್ನ ಪರೀಕ್ಷೆಯನ್ನು ಮಾಡುತ್ತಲೂ ಇದ್ದೆ.

ಶ್ವಾಸಕೋಶಗಳನ್ನೂ ಹೃದಯವನ್ನೂ ಪರೀಕ್ಷೆಮಾಡಲು ಶಾಲನ್ನು ಕೆಳಕ್ಕೆ ಸರಿಸಿದೆ. "ಅಯ್ಯೋ ಡಾಕ್ಟರೇ!" ಅಂತ ಆ ಕಡೆ ಕುಳಿತಿದ್ದ ಜಡ್ಜಿ ಯವರ ಹೆಂಡತಿಯು ಚೀರಿದರು. 'ಅಸ್ವಸ್ಥಾವಸ್ಥೆಯಲ್ಲಿರುವ ರೋಗಿಯನ್ನು ಪರೀಕ್ಷೆಮಾಡಲು ಹೋದರೆ ಈಕೆ ಯಾಕೆ ಚೀರುತ್ತಾಳೆ? ಮತ್ತೆ ಯಾಕೆ ಕರಿಸಿ ದರು ಡಾಕ್ಟರನ್ನ?' ಎನ್ನಿಸಿತು. ಎದೆಯ ಮೇಲಿನ ತೊಡಿಗೆಯನ್ನು ಸಡಿಲಿಸಿದೆ. ತಾಯಿಯು ಚೀರಿದ ಕಾರಣ ತಿಳಿಯಿತು. ಎದೆಯ ಮೇಲೆಲ್ಲಾ ತೊನ್ನು ಬಡಿದಿತ್ತು. ಹಾಲುಬೆಳದಿಂಗಳ ದ್ವೀಪಗಳ ಸುತ್ತಲೂ ಕಾಳ ಕರಾಳವಾದ ಕಪ್ಪುಅಂಚು ಹೆಪ್ಪುಗಟ್ಟಿತ್ತು.

ದೇಹಸ್ಥಿತಿಯನ್ನು ತಿಳಿಯಲು, ಸ್ಟೆತಸ್ಕೋಪನ್ನು ಕಿವಿಗೆ ಏರಿಸಿ ಎದೆ ಬಿಲ್ಲೆಯನ್ನು ಎಡಗಡೆ ಐದನೇ ಪಕ್ಕೆಲುಬಿನ ಮೇಲೆ ಇರಿಸಿದೆ. ಹೃದಯದ ವೇಗದ ಬಡಿತವನ್ನು ಎಣಿಸಲಾಗಲಿಲ್ಲ. ಟಕ ಟಕ ಅಂತ ಪಾತಾಳದಲ್ಲೆಲ್ಲೋ ಬಡಿದಂತೆ ಕೇಳಿಸುತ್ತಿತ್ತು. ಶ್ವಾಸಕೋಶವನ್ನು ಪರೀಕ್ಷಿಸಿದೆ. ಗುಳುಗುಳು

ಶಬ್ದವು ಕೇಳಿಸಿತು. ಹೃದಯವು ಸುಸ್ತಾಗಿ ಶ್ವಾಸಕೋಶಗಳಲ್ಲಿ ರಕ್ತವನ್ನು ದೂಡಲಾರದೆ ಹೋದಾಗ, ರಕ್ತದಿಂದ ನೀರು ಬೇರೆಯಾಗಿ ಶ್ವಾಸಕೋಶದ ಗೂಡುಗಳಲ್ಲಿ ಸೇರಿಕೊಳ್ಳುತ್ತದೆ. ಉಸಿರಾಡಿದಾಗ ಈ ನೀರಿನಲ್ಲಿ ಗುಳುಗುಳು ಅಂತ ಶಬ್ದ ಬರುತ್ತದೆ. ಈ ಚಿಹ್ನೆಯು ಕಾಣಿಸಿಕೊಂಡಾಗ ರೋಗಿಯ ಸ್ಥಿತಿ ಉತ್ಕಟಾವಸ್ಥೆಯಲ್ಲಿದೆ ಎಂದು ತಿಳಿಯಬಹುದು. ಆಗ ತೀವ್ರ ಚಿಕಿತ್ಸೆ ಅತ್ಯಗತ್ಯ.

ಬೇಗ ಸಿರಿಂಜನ್ನು ಸಿದ್ಧಪಡಿಸಿ. ಕೋರಮಿನ್ ಮತ್ತು ಆಟ್ರೊಪಿನ್ ಔಷಧಿಗಳನ್ನು ಚುಚ್ಚಿದೆ. ಒಂದು ಕ್ಷಣ ನಾಡಿ ಉತ್ತಮವಾದಂತೆ ಕಾಣಿಸಿತು. ಅಷ್ಟೇ. ಎರಡು ಮೂರು ನಿಮಿಷಗಳಲ್ಲಿ ನನ್ನೆದುರಿಗೇ ಆಕೆಯು ದೊಡ್ಡ ಉಸಿರನ್ನು ಒಮ್ಮೆ ಬಿಟ್ಟು, ಮತ್ತಗೆ ತೀರಿಕೊಂಡಳು.

"ಏನಾದರೂ ಮಾಡಿ ಡಾಕ್ಟರೇ ! ಉಸಿರು ನಿಂತಹಾಗಿದೆ" ಅಂತ ತಾಯಿಯು ಅಳುಕ್ಕೆ ಶುರುಮಾಡಿದಳು.

"ಆಗಿಹೋಯ್ತು ಡಾಕ್ಟರೆ ? ಋಣಾನುಬಂಧ ಮುಗಿದುಹೋಯ್ತು ಡಾಕ್ಟರೇ ?" ಎಂದು ಕುಗ್ಗಿದ ದನಿಯಲ್ಲಿ ಜಡ್ಜಿಗಳು ಕೇಳಿದರು.

"ಡಬ್ಬಲ್ ನ್ಯೂಮೋನಿಯಾ ! ಬಲು ಬೇಗ ಹರಡಿದೆ. ತೀವ್ರ ವಿಷ ಪೂರಿತ ನ್ಯೂಮೋಕಾಕೈಗಳು ಬೇನೆಯನ್ನು ಉಂಟುಮಾಡಿರಬೇಕು. ಮೊದ ಲಿಂದಲೇ ಚಿಕಿತ್ಸೆಮಾಡಿದ್ದರೆ ಬದುಕುತಿದ್ದಳು ಅಂತ ಹೇಳಲಿಕ್ಕೆ ಬರುವುದಿಲ್ಲ. ಎಲ್ಲಾ ದೈವಸಂಕಲ್ಪ" ಅಂತ ಹೇಳಿದೆ.

ಸತ್ತವಳು ಸತ್ತಳು. ಇದ್ದವರ್‍ಯಾಕೆ 'ಮೊದಲೇ ಡಾಕ್ಟರನ್ನ ಕರೆಸಿದ್ದರೆ ಬದುಕಿಕೊಳ್ಳುತ್ತಿದ್ದಳೋ ಏನೋ' ಎಂದು ಆಜೀವಪರ್ಯಂತ ದುಃಖಿಸ ಬೇಕು ? ಅದಕ್ಕೇ ಹಾಗೆ ಹೇಳಿದೆ.

ತಂದೆತಾಯಿಗಳು ಅಳುತ್ತ ಹೆಣದ ಅತ್ತ ಇತ್ತ ಕುಳಿತಿದ್ದರು. ಮನೆಯ ಮಗನ ಹತ್ತಿರ "ನನ್ನಿಂದ ಏನಾದರೂ ಸಹಾಯ ಬೇಕಾದರೆ ಕೇಳಿ" ಎಂದು ಉಪಚಾರದ ಮಾತುಗಳನ್ನು ಹೇಳಿ ಹಿಂತಿರುಗಿದೆ.

* * *

"ನಿಶಿರಾತ್ರಿಯಲ್ಲಿ ನಿಮ್ಮನ್ನು ನಡಸಿಕೊಂಡು ಕರೆದುಹೋದೆ. ಹಿಂತಿರುಗಿ ನೀವೊಬ್ಬರೇ ಕತ್ತಲೆಯಲ್ಲಿ ಹೋಗುವ ಹಾಗೆ ಆಯ್ತು. ಹಾಳಂದಾರೀಲಿ ಪೋಲೀನಾಯಿಗಳು, ಮಲಗಿದ ಕತ್ತೆಗಳು ಎಲ್ಲವೂ ಇರಂತ್ತೆ. ಇಷ್ಟೆಲ್ಲಾ ತೊಂದರೆ ಕೊಟ್ಟೆವು ನಿಮಗೆ ! ಬಿಲ್ ಎಷ್ಟು ?" ಎಂದು ಬಂದು ಕೇಳಿದರು ಅಂತೀರಾ ! ಅವರು ಅವತ್ತಿನಿಂದ ಮುಖವನ್ನೇ ತೋರಿಸಲಿಲ್ಲ. ಹಣ ಕೊಡುವ ಮಾತು ಹಾಗಿರಲಿ, ಧನ್ಯವಾದವನ್ನು ಹೇಳಲು ಕೂಡ ಯಾರೂ ಬರಲಿಲ್ಲ.

ಇದೇನೂ ಹೊಸ ಅನುಭವವಲ್ಲ ಅನ್ನಿ ಡಾಕ್ಟರುಗಳಿಗೆ. "ಹಣವಿಲ್ಲದಿದ್ದರೆ ಬರಲ್ಲ ಅಂದರು ಡಾಕ್ಟರು. ಅವರು ಬಂದಿದ್ದರೆ ರೋಗಿಯು ಬದುಕಿಕೊಂಡುಬಿಡುತ್ತಿದ್ದ. ರಾಕ್ಷಸ ಡಾಕ್ಟರು ಬರಲಿಲ್ಲ; ರೋಗಿ ಸತ್ತುಹೋದ." ಹೀಗೆಲ್ಲಾ ಕತೆಗಳಲ್ಲಿ ಕಾದಂಬರಿಗಳಲ್ಲಿ ಬರೆದಿರುತ್ತಾರಲ್ಲಾ--ಇದಕ್ಕೆಲ್ಲ ಕತೆ ಬರೆದ ಹೀಚುಗಳ ಅಮೋಘವಾದ ಅಪರಿಮಿತ ಅಜ್ಞಾನವೇ ಕಾರಣ.

ಹೋಗೋ ಪ್ರಾಣಾನ ಹಿಡಿದು ನಿಲ್ಲಿಸಿದ ಧನ್ವಂತ್ರಿ ಇನ್ನೂ ಹುಟ್ಟಿಲ್ಲ. ಇರೋ ಪ್ರಾಣಾನ ಹೋಗಿಸುವುದು ಕೂಡ ಅಷ್ಟೇ ಅಸಾಧ್ಯ. ನಾನು ಹೇಳ್ತಾ ಇರೋದು ಸಾಮಾನ್ಯ ಖಾಯಿಲೆಗಳ ವಿಷಯ ; ಆಕಸ್ಮಿಕಗಳ ವಿಷಯವನ್ನಲ್ಲ. ಬೆಂಕಿ ಬಿದ್ದು ಮೈಸುಟ್ಟರೆ, ಗಾಡಿಯ ಅಪಘಾತವಾದರೆ, ವಿಷ ಸೇವನೆಯಾದರೆ. ಶೀಘ್ರ ಚಿಕಿತ್ಸೆಯು ಅತ್ಯವಶ್ಯಕ. ಆದರೆ ಅಂತಹ ಚಿಕಿತ್ಸೆಯನ್ನು ಸಲಕರಣೆಗಳಿರುವ, ಶುಶ್ರೂಷೆಯ ಅನುಕೂಲವಿರುವ ಆಸ್ಪತ್ರೆಗಳಲ್ಲಿ ಮಾಡಲು ಸಾಧ್ಯವೇ ಹೊರತು, ಒಂದು ಕೈಲಿ ಮಡೀಪೆಟ್ಟಿಗೆ ಇನ್ನೊಂದು ಕೈಲಿ ಸ್ಟೆತಸ್ಕೋಪು ಹಿಡಿದುಕೊಂಡು ರೋಗಿಯು ಮಲಗಿರುವೆಡೆಗೆ ಹೋಗಿ ಉದ್ಧಾರ ಮಾಡಿದೆ ಎಂದು ಯಾರಾದರೂ ಡಾಕ್ಟರು ಹೇಳಿದರೆ, ಅವ ಮುಕ್ಕಾಲುಪಾಲು ಅಪ್ಪಟ ಅಬದ್ಧದ ಮೂರುತಿ ಎಂದು ನೀವು ನಂಬಬಹುದು.

* * *

೧೯೫೮. ಸಂಕ್ರಾಂತಿಯ ದಿನ ನಮ್ಮ ಬಡಾವಣೆಯ ಮಿತ್ರಸಂಘದವರು ಭೋಜನಕೂಟವನ್ನು ಏರ್ಪಡಿಸಿದ್ದರು. ಸದಸ್ಯನೊಬ್ಬನಿಗೆ ವರ್ಗವಾದ ಪ್ರಯುಕ್ತ ಆತ ಮಾರನೆಯ ದಿನವೇ ಊರು ಬಿಡಬೇಕಾಗಿದ್ದರಿಂದ, ಹಬ್ಬದ ದಿನವೇ ಸಮಾರಂಭವನ್ನು ಏರ್ಪಡಿಸಿದ್ದರು.

ಜಡ್ಜಿ ರಾಮಯ್ಯನವರನ್ನು ಒಂದು ವರ್ಷದ ಮೇಲೆ ಕಂಡದ್ದು ಅಲ್ಲೀ. ನನ್ನೆದುರಿಗೆ ಊಟಕ್ಕೆ ಕುಳಿತಿದ್ದರು. "ಚೆನ್ನಾಗಿದೀರಾ ಡಾಕ್ಟರೇ! ನಿಮ್ಮನ್ನು ಬಂದು ನೋಡುಕ್ಕಾಗಲಿಲ್ಲ. ಏನೇನೋ ತಾಪತ್ರಯಗಳಿರುತ್ತಲ್ಲ" ಎಂದು ಯೋಗಕ್ಷೇಮ ವಿಚಾರಿಸಿದರು. ನ್ಯಾಯವಾಗಿ ನಾನು ಕೇಳಬೇಕು: "ನಿಮ್ಮ ಹೊಟ್ಟೆಗೆ ಈಗ ಏನು ತಿಂತೀರಿ?" ಅಂತ. ಆದರೆ ಆತನೇ ಶುರುಮಾಡಿದ್ದ.

ಊಟಕ್ಕೆ ಬಡಿಸಿದರು. ಲಕ್ಷಣವಾದ ಊಟ, ನಾನು ಹೇಳಿದ್ದನ್ನು ನಂಬುತೀರೋ ಇಲ್ಲವೋ! ಜಡ್ಜಿಗಳು ಬ್ರಾಹ್ಮಣಾರ್ಥದವರಂತೆ ಗಡದ್ದು ತಿಂದು, ನಾಲ್ಕು ಬೊಂಬಾಯಿ ಬೋಂಡ. ಎರಡು ಚಿರೋಟಿ ನುಂಗಿದ್ದರು. "ಎಲ ಎಲಾ! ಈ ರಾತ್ರಿ ಈತ ಏನೋ ಆಗಿಬಿಡ್ತಾನೆ. ರಾತ್ರಿ ಖಂಡಿತವಾಗಿ ನಿದ್ರೆಗೆಡಿಸಿ ಕರೆದುಕೊಂಡು ಹೋಗ್ತಾರೆ. ಹೋದ ಸಂಕ್ರಾಂತಿ ಇವನ ಮಗಳು, ಈ ಸಂಕ್ರಾಂತಿ ಇವನು! ತಿಂದ ತಿಂಡಿಯನ್ನು ಜೀರ್ಣಿಸಿಕೊಂಡರೂ ನನ್ನ ದೃಷ್ಟಿ ತಾಕಿ ಇವ ಘನ ಆಗಿಬಿಡ್ತಾನೋ!" ಎಂದು ಮನಸ್ಸಿನಲ್ಲೇ ಆಲೋಚನೆಗಳು ತೇಲಿಹೋದುವು.

ಆ ರಾತ್ರಿ ಹೇಳಿಕಳಿಸಲೇ ಇಲ್ಲ. ಮಾರನೇ ದಿನ ಪೇಟೆರಸ್ತೆಯಲ್ಲಿ ಠೀಕಾಗಿ ಹೋದದ್ದನ್ನೂ ಕಂಡೆ. ಎರಡು ಮೂರು ವರ್ಷಗಳಾದ ಮೇಲೆ ರೈಲ್ವೆನಿಲ್ದಾಣದಲ್ಲಿ ಕಂಡೆ. ದೂರದಲ್ಲಿ ಯಾರೊಡನೆಯೋ ಮಾತನಾಡುತ್ತಿದ್ದ. ಕೊಣಪನಾಗಿಬಿಟ್ಟಿದ್ದ. ಹೋಗಿ ಮಾತನಾಡಿಸೋಣವೋ ಎಂದು ಆಸೆಯಾಯ್ತು. ಆದರೆ ರೈಲು ಹೊರಡುವ ಸಿಳ್ಳುಹಾಕಿತು. ಅವಕಾಶವಾಗಲಿಲ್ಲ.

**ಕಲಿತ ಪಾಠ**

ಈತನಿಗೆ ಸ್ವಾಭಾವಿಕವಾಗಿ ಅಹಂಕಾರ ಹೆಚ್ಚು. ಸಮಾಜದಲ್ಲಿ ಪರಿಚಯವಾದವರಿಗಿಂತ ತಾನು ಹೆಚ್ಚು ಜಾಣ ಎಂದುಕೊಳ್ಳುವ ಅವಕಾಶಗಳು ಹೇರಳವಾಗಿದ್ದುವು. ಆ ಕಾರಣದಿಂದಲೇ ಎಲ್ಲರನ್ನೂ ಹಳಿಯುವುದು, ಮೂದಲಿಸಿ ಮಾತನಾಡುವುದು. ಇವೆಲ್ಲವನ್ನೂ ಅಭ್ಯಾಸಮಾಡಿಕೊಂಡಿದ್ದ. ಹಾಗೆ ಮಾಡಿದಾಗ ನಾನು ದೊಡ್ಡವನು ಎಂಬ ಆತ್ಮ ಮೆರವಣಿಗೆಯನ್ನು ಮಾಡಿದ ಸಂತೋಷವಾಗುತ್ತಿತ್ತು.

ಮದುವೆಗೆ ಬಂದ ಮಗಳಿಗೆ ತೊನ್ನು ಎನ್ನುವುದು ತಿಳಿದಾಗ ಈತನ ಕೊರಗಿಗೆ ಪ್ರಾರಂಭವಾಗಿದೆ. ಹೇಗಾದರೂ ಅವಳ ಸೆರೆ ಬಿಡಿಸಬೇಕು ಎಂದು ವಿಷಯವನ್ನು ಗಂಡಹೆಂಡತಿಯರು ಗೋಪ್ಯವಾಗಿಟ್ಟುಕೊಂಡು, ಬೇನೆಯನ್ನು ಗುಣಪಡಿಸಲು ಎಷ್ಟೋ ಯತ್ನಗಳನ್ನು ಮಾಡಿದರು. ಆ ಬೇನೆಯನ್ನು ನಿವಾರಿಸುವ ಯಾವುದೊಂದು ಮಾರ್ಗವೂ ಕಾಣಬರದಾಗ ಈತನಿಗೆ "ದೇವರು ಇಷ್ಟೆಲ್ಲಾ ಸುಖಸಂಪತ್ತು ಕೊಟ್ಟಿದ್ದಾನೆ. ಈಗ ಈ ಸಂಕಟವನ್ನೂ ಹೇರಿದ್ದಾನೆ" ಎಂದು ಹೊಟ್ಟೆ ಉರಿದುಹೋಗಿರಬೇಕು. ಯಾರೊಂದಿಗೂ ಆಡಿ ಸಂಕಟವನ್ನು ಕಡಮೆ ಮಾಡಿಕೊಳ್ಳುವಂತಿಲ್ಲ. ಅನುಭವಿಸಲು ಸಾಧ್ಯವಾಗಿಲ್ಲ. ಹೀಗಾಗಿ ಮನಸ್ಸಿನ ಆತಂಕವು ಹೊಟ್ಟೆಯ ಮೇಲೆ ಪರಿಣಾಮವನ್ನುಂಟು ಮಾಡಿದೆ.

ಯಾರ ಮೇಲಾದರೂ ಕೋಪ ಬಂತು ಅಂತ ಇಟ್ಟುಕೊಳ್ಳಿ. ಕೋಪ ಏತಕ್ಕೆ ಬರುತ್ತದೆ? ನಾವು ನೆನೆಸಿದಂತೆ ಅಥವಾ ಹೇಳಿದಂತೆ ಅವನು ಮಾಡಲಿಲ್ಲ. ಆದಕ್ಕೇ ಕೋಪ ಬರುತ್ತದೆ. ಕೋಪ ಬಂದಾಗ ಏನು ಮಾಡುತ್ತೇವೆ? ಅವನನ್ನು ಹೊಡೆಯಲು ಹೋಗುತ್ತೇವೆ; ಅಥವಾ ಶಿಕ್ಷೆಮಾಡಿ ಅವನನ್ನು ನೋವಿಗೆ ಈಡುಮಾಡುತ್ತೇವೆ. ಆಗ ನಮಗೆ ಸಮಾಧಾನವಾಗುತ್ತದೆ.

ಅವನನ್ನು ಹೊಡೆಯಹೋಗುವಾಗ, ಹೊಡೆಯುವಷ್ಟು ಶಕ್ತಿ ನಮ್ಮಲ್ಲಿರಬೇಕಲ್ಲ! ಆ ಶಕ್ತಿ ತಕ್ಷಣ ಉತ್ಪತ್ತಿಯಾಗಲು ದೇಹದಲ್ಲಿ ಒಂದು ಏರ್ಪಾಡಿದೆ. ಮನಸ್ಸು ರೇಗಿದಾಗ, Sympathetic ನರಗಳ ಮೂಲಕ ಅಡ್ರೀನಲ್ಸ್ ಎಂಬ ಗ್ರಂಥಿಗಳು ಉದ್ರೇಕವಾಗುತ್ತವೆ. ಅಡ್ರೀನಲೀನ್ ಎಂಬ ವಸ್ತುವು ಹೆಚ್ಚಾಗಿ ಉತ್ಪನ್ನವಾಗಿ, ದೇಹದಲ್ಲೆಲ್ಲಾ ಹರಡುತ್ತದೆ. ಆಗ ಹೃದಯವು ಬೇಗ ಬೇಗ ಬಡಿದು, ಹೆಚ್ಚು ರಕ್ತವು ದೇಹದಲ್ಲೆಲ್ಲಾ ಚಲಿಸುವಂತೆ ಮಾಡುತ್ತದೆ. ಕೂಡಿಟ್ಟಿದ್ದ ಗ್ಲೈಕೊಜನ್ ಎಂಬ ಸಕ್ಕರೆಯನ್ನು ಒದಗಿಸುವ ವಸ್ತುವನ್ನು, ಲಿವರ್ ರಕ್ತಕ್ಕೆ ಹೆಚ್ಚಾಗಿ ದೊರಕಿಸುತ್ತದೆ. ಹೀಗಾಗಿ ದೇಹದ ಅಂಗಾಂಗಗಳಿಗೆಲ್ಲಾ ಹೆಚ್ಚು ಸಕ್ಕರೆಯಿಂದ ಕೂಡಿದ ರಕ್ತ ಹೆಚ್ಚು ಹೆಚ್ಚು ಸಂಚಾರವುಂಟಾಗಿ ದೇಹವು ಶಕ್ತಿಯನ್ನು ಹೊಂದುತ್ತದೆ. ಆಗ ಹೊಡೆಯಹೋಗಬಹುದು. ಹೊಡೆಯಲಾಗದೆ ಇದ್ದರೆ. ಉದಾಹರಣೆಗೆ ಎದುರಾಳಿಯು ನಮಗಿಂತ ಬಲಿಷ್ಠನಾಗಿದ್ದರೆ, ಓಡಿಹೋಗುವುದಲ್ಲೂ ಈ ಶಕ್ತಿಯನ್ನು ಉಪಯೋಗಿಸಿಕೊಳ

ಬಹುದು. ಹೊಡಿ ಅಥವಾ ಓಡು, ಈ ಎರಡು ಮೂಲಭೂತ ಪ್ರತಿಕ್ರಿಯೆಗಳಿಗೂ ಹೆಚ್ಚು ಶಕ್ತಿಯು ತಕ್ಷಣ ದೊರಕಬೇಕು.

ಪ್ರತಿಕ್ರಿಯೆಯು ಮುಗಿಯಿತು. ಕೋಪ ಶಾಂತವಾಯಿತು. ಆಗ ಲಿವರ್‌ನಲ್ಲಿ ದಾಸ್ತಾನಾಗಿರಬೇಕಾದಷ್ಟು ಗ್ಲೈಕೊಜನ್ ಇರುವುದಿಲ್ಲ. ಹಸಿವುಂಟಾಗುವುದಕ್ಕೆ ಇದೂ ಒಂದು ಕಾರಣ. ಈ ಕಾರಣದಿಂದಲೇ ಹೊಟ್ಟೆಯು ಕೂಡ ದ್ರವಗಳನ್ನು ಹೆಚ್ಚಾಗಿ ಸ್ರವಿಸಲು ಶುರುಮಾಡುತ್ತದೆ. ಹಸಿವಾದಾಗ ಏನಾದರೂ ಆಹಾರವನ್ನು ಸೇವಿಸುತ್ತಾನೆ. ಆಗ ಜೀರ್ಣಿಸಲು ನಾವು ಸಿದ್ಧವಾಗಿರೋಣ ಎಂದೇ ಹೊಟ್ಟೆಯು ಹೀಗೆ ಮುಂಜಾಗ್ರತಾಕ್ರಮವನ್ನು ಕೈಗೊಳ್ಳುತ್ತದೆ. ಇದು ಸಾಮಾನ್ಯವಾಗಿ ನಡೆಯುವ ಕಾರ್ಯಕ್ರಮ.

ಜಡ್ಜಿ ರಾಮಯ್ಯನವರಿಗೆ ಯಾರ ಮೇಲೆ ಕೋಪ ? ದೇವರ ಮೇಲೆ ? ಮಗಳಿಗೆ ತೊನ್ನು ಬಂದದ್ದು ಜಡ್ಜಿಗಳ ತಪ್ಪೇ ? ದೇವರ ತಪ್ಪಲ್ಲವೇ ? ಆದರೆ ದೇವರ ಮೇಲೆ ಹೇಗೆ ಸೇಡು ತೀರಿಸಿಕೊಳ್ಳುವುದು ? ಸುಲಭವಾಗಿ ಅವ ನಮ್ಮ ಕೈಗೆ ಸಿಗುವುದಿಲ್ಲವಲ್ಲ : ಅದೂ ನಮಗೆ ಕೋಪಬರುವಾಗ. 'ನಮ್ಮ ಪ್ರಾಚೀನ ಖರ್ಮ' ಅಂತ, ಕ ಕ್ಕೆ ಬದಲು ಖ ಉಪಯೋಗಿಸಿ, ಎಂದೋ ಮಾಡಿದ ನಮ್ಮ ತಪ್ಪು ಎಂದು ಮೂಢನಂಬಿಕೆ ಉಂಟಾದರೆ, ಆಗ ದೇವರ ಮೇಲೆ ಕೋಪಬರದೆ ಇರಬಹುದು. ಹಾಗೆ ಮೂಢನಂಬಿಕೆಯನ್ನು ಕಣಕಣಗಳಲ್ಲೂ ಪೋಷಿಸಿಕೊಂಡು ಬರಲು ಜಡ್ಜಿ ರಾಮಯ್ಯನವರ ಜಾಣತನ, ಅವೈಜ್ಞಾನಿಕ ವಿದ್ಯಾಭ್ಯಾಸ. ವಿಚಾರಣಾಶಕ್ತಿ, ರೂಢಿಯಾಗಿ ಕಲಿತುಬಂದ ವಿವೇಚನಾ ಮಾರ್ಗ ಇವೆಲ್ಲವೂ ತಡೆಯಾಗಿದೆ.

ದೇವರನ್ನು ಹೊಡೆದು ಬಂದ ಕೋಪವನ್ನು ನೀಗಿಸಿಕೊಳ್ಳುವಂತಿಲ್ಲ. ನಮ್ಮ ಪ್ರಾಚೀನ ಕರ್ಮ ಎಂದು ದೃಢವಾಗಿ ನಂಬಿ ನೀಗಿಸಿಕೊಳ್ಳುವಂತಿಲ್ಲ. ಇರುವ ಪರಿಸ್ಥಿತಿಯಿಂದ ಓಡಿಹೋಗುವಂತೆಯೂ ಇಲ್ಲ. ಹೀಗಾಗಿ ಕೋಪವನ್ನು ಮನಸ್ಸಿನ ಅಂತರಾಳದಲ್ಲಿಯೇ ಹುದುಗಿಸಲು ಪ್ರಯತ್ನಿಸಿದ್ದಾರೆ, ಜಡ್ಜಿಗಳು. ಆ ಕೋಪದ ಪರಿಣಾಮವಾಗಿಯೇ ಆಮ್ಲದ್ರವಗಳು ಹೊಟ್ಟೆಯಲ್ಲಿ ಸ್ರವಿಸುತ್ತಿವೆ. ಸೇವಿಸಿದ ಆಹಾರವೆಲ್ಲ ಪಚನವಾದರೂ ಈ ಆಮ್ಲದ್ರವಗಳು ಇನ್ನೂ ಸ್ರವಿಸುತ್ತಲೇ ಇವೆ. ಆಹಾರವಿಲ್ಲದಿದ್ದಾಗ ಈ ದ್ರವಗಳು ಹೊಟ್ಟೆಯ ಪದರ

ಗಳಲ್ಲಿ ಹನಿಕೂಡಿಕೊಂಡು ಹುಣ್ಣನ್ನು ಉಂಟುಮಾಡುತ್ತವೆ. ಅದಕ್ಕೇ ಜಡ್ಜಿಗಳ ಅಜೀರ್ಣವಾದ ಚಿಹ್ನೆಗಳೆಲ್ಲಾ ಕಾಣಿಸಿಕೊಂಡಿದ್ದು.

ಸಾಮಾನ್ಯವಾಗಿ ಹೊಟ್ಟೆಯಲ್ಲಿ ಅಜೀರ್ಣ, ಹುಳಿತೇಗು ಅಂತ ಬಂದರೆ, ಮಾನಸಿಕ ಅಸಮಾಧಾನವನ್ನು ಯೋಚಿಸುತ್ತೇವೆ, ದಿಟ. ಆದರೆ 'ಮದುವೆ ಗಿರುವ ನಿಮ್ಮ ಮಗಳಿಗೆ ತೊನ್ನು ಬಡಿದಿದೆಯೆ ?' ಎಂದು ಕೇಳುವುದಕ್ಕಾಗುತ್ತ್ಯೆ ? ಹಾಗಾಗುವುದು ಲಕ್ಷ ಜನರಲ್ಲೊಬ್ಬನಿಗೆ. ಆದರೂ ನಾನು ಇಂತಿಂತಹ ಸಂದರ್ಭಗಳಿರಬಹುದೋ ಎಂದು ಯೋಚಿಸಿ, ಉದಾಹರಣೆಗಳನ್ನು ಸಾವಧಾನವಾಗಿ ಕೊಟ್ಟು ಕೇಳಬಹುದಾಗಿತ್ತು, ಕೇಳಬೇಕಾಗಿತ್ತು.

ಯಾವ ಕಾರಣದಿಂದ ದೇವರ ಮೇಲೆ ಕೋಪ ಬಂದಿತ್ತೋ ಆ ಕಾರಣ, ತೊನ್ನು ಬಡಿದು ಬೆಳೆದ ಮಗಳು ! ಈಗ ಯಾವ ಕಾರಣದಿಂದಲೋ ಏನೋ ಆಕೆಯು ಸತ್ತಳು. ಅಂದರೆ ಜಡ್ಜಿಗಳಿಗೆ ಮನಸ್ಸಿನಲ್ಲಿ ಸಮಾಧಾನವಾಯ್ತು. ಅದಕ್ಕೇ ಔತಣಕೂಟದಲ್ಲಿ ಹಾಗೆ, ಹಂದಿ ತಿಂದ ಹಾಗೆ, ತಿಂದು ಜೀರ್ಣಿಸಿಕೊಂಡದ್ದು.

ಮಸಲಾ, ಜಡ್ಜಿಯವರಿಗೆ ಅಹಂಕಾರವಿದ್ದಿರಲಿಲ್ಲ ಅಂದುಕೊಂಡರೆ, ಆಗ ಆತನಿಗೆ ಮಗಳು ಸತ್ತರೂ ವ್ಯಥೆಯು ಹೆಚ್ಚಾಗಿರಬೇಕಾಗಿತ್ತು. ಮೊದಲೇ ಆಕೆಗೆ ಚಿಕಿತ್ಸೆ ನಡಸಿದ್ದರೆ ಉಳಿದುಕೊಳ್ಳುತ್ತಿದ್ದಳೇನೋ ಎಂಬ ವ್ಯಾಕುಲವು ಬೆನ್ನು ಹತ್ತುತ್ತಿತ್ತು. ಅಂತಹ ಮನಃಸ್ಥಿತಿಯಿದ್ದಾಗ, 'ತೊನ್ನು ಬಡಿದ ಮಗಳಾದರೇನಂತೆ. ಎಷ್ಟು ಜನ ತೊನ್ನು ಬಡಿದವರು ಬದುಕಿ ಬಾಳಲಿಲ್ಲ. ಅವರ ಹಾಗೆಯೇ ಇವಳೂ ಬಾಳಿಕೊಳ್ಳುತ್ತಿದ್ದಳು' ಎಂದು ತೋಚುತ್ತಿತ್ತು. ಆದರೆ ಜಡ್ಜರ ಅಹಂಕಾರ ಎಷ್ಟು ಅಂತ ; ಮಗಳು ಬಾಳಲಿ ಎನ್ನುವುದಕ್ಕಿಂತ, ತನ್ನ ಮಗಳು, ತನ್ನ ಅಂತಸ್ತಿಗೆ ತಕ್ಕ ಹಾಗೆ ಬಾಳಬೇಕು ಎಂಬ ಆಸೆ. 'ಅಹಂಕಾರ' ಎಂದು ಹೇಳುವಾಗ, ಬರೀ ಜಂಭ ಎನ್ನುವ ಅರ್ಥದಲ್ಲಲ್ಲ ; ಅಹಂ, ನಾನು, ನನ್ನತನ ಎನ್ನುವ ಮೂಲಭೂತ ಅರ್ಥದಲ್ಲಿ.

ಅಂದರೆ ಯಾವ ಅಹಂಕಾರ ಪ್ರಕೃತಿಯಿಂದ ಹೊಟ್ಟೆ ಉರಿಸಿ ಹುಣ್ಣು ಮಾಡಿಕೊಂಡನೋ, ಅದೇ ಸ್ವಭಾವವು ಮಗಳು ಸತ್ತಮೇಲೆ ವ್ಯಥೆಯೇ ಬಾರದಂತೆ, ರಕ್ಷೆಯೂ ಆಗಿತ್ತು.

ಇದಾಗಿ ಸುಮಾರು ೨೦ ವರ್ಷಗಳಾಗಿದೆ. ಮೇಲುಸಿರು ಎಳೆಯುತ್ತಾ ಮಲಗಿದ್ದ ಆ ಪ್ರಾಯದ ಚಂದದ ಮುಖವು ಇನ್ನೂ ಅಚ್ಚಳಿಯದಂತೆ ನನ್ನ ನೆನಪಿನಲ್ಲಿದೆ. ಹಾಲುಬೆಳದಿಂಗಳ ದ್ವೀಪಗಳ ಸುತ್ತ ಕಾಳಕರಾಳ ಕಪ್ಪು ಅಂಚು ಹೆಪ್ಪುಕಟ್ಟಿರುವುದೂ ಕಣ್ಣಿಗೆ ಕಟ್ಟಿದಂತಿದೆ. 'ಮೆಲ್ಲಗಿವಳನು ಎತ್ತಿ', ಎಂದು ಮೆತುದನಿಯಲ್ಲಿ ಹೇಳುವಂತಾದ ನೆನಪೂ ಇದೆ. ನನ್ನ ಹೊಟ್ಟೆಯಲ್ಲಿ ಹುಟ್ಟಿದ ಮಗುವಿಗೆ ಹೀಗಾಗಿದ್ದರೆ, ಪ್ರಾಯಶಃ ಹೆಚ್ಚು ದುಃಖವಾಗುತ್ತಿರಲಿಲ್ಲ. ಜಡ್ಜಿಯವರ ಹೆಂಡತಿಯು ಸತ್ತ ಮಗಳ ನೆನಪನ್ನು ಮರೆಯಲಾರದೆ ಇರಬಹುದು. ಆದರೆ ಮೊಮ್ಮಕ್ಕಳು. ಮರಿಮಕ್ಕಳು, ಮೋಟಾರು ಕಾರು, ಮಹಡಿಮನೆ, ಈ ಜುರುಘಾಟದಲ್ಲಿ ನೆನಪು ಹಸಿಯಾಗದೆ ಇರಬಹುದು. ಜಡ್ಜಿಗಳಿಗಾದರೋ ಅಂತಹ ಮಗಳಿದ್ದಳು ಎನ್ನುವುದು ಮರೆತಿರಬೇಕು.

ಯಾವ ಹಿರಿಯ ನಿಮಿತ್ತ ನನಗೆ ಈ ಅನುಭವವನ್ನು ಕೊಟ್ಟು ಆ ಹೆಣ್ಣುಮಗಳಿಗಾಗಿ ಇಂದೂ ಅಯ್ಯೋ ಎಂದು ನುಡಿಸುತ್ತಿದೆಯೋ, ಕಂಡ ಎಲ್ಲ ಮಕ್ಕಳ ಕಷ್ಟದಲ್ಲೂ ಕನಿಕರವನ್ನು ತೋರುವಂತೆ ನಡಸುತ್ತಿದೆಯೋ ಆ "ಮಹಾಕರುಣೆ"ಯ ಒಂದು ಜಾಡು ತುಸು ಕಾಣಿಸಿತು.




## ೭. ಮೆಡಶಿರದ ನೋವು

ನಮಗೆ ನಾವೇ ಹೊರೆ!
ನಮಗೆ ನಾವೇ ನೆರೆ!

ಹತ್ತು ಹನ್ನೆರಡು ವರ್ಷದ ಹುಡುಗನಾಗಿದ್ದಾಗ ನನಗೆ ವಿಷಮಶೀತಜ್ವರ ಬಂದ ನೆನಪಿದೆ. ಗರಿಗರಿಯಾದ ಸರಿಗೆರುಮಾಲನ್ನು ವಾರಣವಾಗಿ ಕಟ್ಟಿಕೊಂಡು ಲಕ್ಷಣವಾದ ಸೂಟು ಧರಿಸಿ, ರಬ್ಬರ್ ಅಟ್ಟೆಯ ಬೂಟ್ಸುಗಳನ್ನು ಹಾಕಿಕೊಂಡು ನಿಶ್ಶಬ್ದವಾಗಿ ಬಂದು ಚಿಕಿತ್ಸೆ ನಡೆಸಿದ ಡಾಕ್ಟರ್ ಕಣ್ಣಪ್ಪ ಮೊದಲಿಯಾರರ ನೆನಪು ಅಚ್ಚಳಿಯದಂತೆ ಇದೆ. ಹೆಚ್ಚಿಗೆ ಮಾತನಾಡುತ್ತಿರಲಿಲ್ಲ ಆತ. ಜನರು ಹೆಚ್ಚು ಸದರವನ್ನು ತೆಗೆದುಕೊಳ್ಳಲೂ ಬಿಡುತ್ತಿರಲಿಲ್ಲ. ಜ್ವರವನ್ನು ಇವರು ಖಂಡಿತವಾಗಿ ವಾಸಿಮಾಡುತ್ತಾರೆ ಎಂಬ ಧೈರ್ಯ ನನಗಿತ್ತು.

ನಾನು ಡಾಕ್ಟರ್ ಪರೀಕ್ಷೆ ಪಾಸುಮಾಡಿ ಖಾಸಗೀ ದವಾಖಾನೆಯನ್ನು ಆರಂಭಿಸಿದಾಗ ಡಾ॥ ಕಣ್ಣಪ್ಪ ಮೊದಲಿಯಾರ್ರು ವಿಶ್ರಾಂತಿವೇತನ ಪಡೆದು ಹತ್ತು ಹದಿನೈದು ವರ್ಷಗಳಾಗಿತ್ತು. ಅವರೂ ನಾನಿದ್ದ ಬಡಾವಣೆಯಲ್ಲೇ ಮನೆಮಾಡಿದ್ದರು. ಆಗಿಂದಾಗ್ಗೆ ದವಾಖಾನೆಗೆ ಬಂದು ನನ್ನ ಯೋಗಕ್ಷೇಮ ವನ್ನು ವಿಚಾರಿಸಿಕೊಂಡು, ವೃದ್ಧಾಪ್ಯದಿಂದಾಗಿ ಅವರ ದೇಹಸ್ಥಿತಿಯಲ್ಲಿ ಆಗಿರ ಬಹುದಾದ ವ್ಯತ್ಯಾಸಗಳನ್ನು ಪರೀಕ್ಷೆಮಾಡಿಸಿಕೊಂಡು ಹೋಗುತ್ತಿದ್ದರು. ಅವರು ಓದುವ ಕಾಲದಲ್ಲಿದ್ದ ವೈದ್ಯವಿಜ್ಞಾನಕ್ಕೂ ಈಗಿನ ವೈದ್ಯವಿಜ್ಞಾನಕ್ಕೂ ಅರ್ಥಾರ್ಥ ಸಂಬಂಧವಿಲ್ಲ. ಬಿಲ್ಲುಬಾಣಗಳಿಂದ ಯುದ್ಧಮಾಡುತ್ತಿದ್ದ ಕಾಲಕ್ಕೂ ಅಣುಬಾಂಬುಗಳನ್ನು ದೂರನಿರ್ದೇಶನದಿಂದ ಹಾರಿಸುವ ಈಗಿನ ಕಾಲಕ್ಕೂ ಇರುವ ವ್ಯತ್ಯಾಸವೇ ಅನ್ನಿ. ಹಾಗಾಗಿ "ರಕ್ತದ ಒತ್ತಡ ಸ್ವಲ್ಪ ಹೆಚ್ಚಾಗಿದೆ

ಎನ್ನುತ್ತೀ. ನಮ್ಮ ಕಾಲದಲ್ಲಿ ಹೆಪಾಟಿಕ್ ಮಿಕ್ಸ್ಚರ್ ಕೊಡುತ್ತಿದ್ದೆವು. ಅದನ್ನು ತೆಗೆದುಕೊಳ್ಳಲೇ ?" ಎಂದು ಕೇಳಿದಾಗ "ಇಲ್ಲಾ, ಸಾರ್! ಈಗ ಆಹಾರದಲ್ಲಿ ಉಪ್ಪನ್ನು ಸ್ವಲ್ಪ ಕಡಮೆ ಸೇವಿಸಿ. ಸರ್ಪಗಂಧಿಯಿಂದ ತಯಾರಿಸಿದ ಮಾತ್ರೆಗಳನ್ನು ಸೇವಿಸಿದರೆ ಒಳ್ಳೆಯದು" ಎಂದು ಹೇಳಿ, ಸರಿಯಾದ ಕಾರಣಗಳನ್ನು ವಿವರಿಸುವುದಕ್ಕೆ ಒಮ್ಮೊಮ್ಮೆ ಸ್ವಲ್ಪ ಪ್ರಯಾಸವೇ ಆಗುತ್ತಿತ್ತು. ಆದರೂ ಅವರಲ್ಲಿದ್ದ ಅಪಾರ ವಿಶ್ವಾಸದಿಂದಾಗಿ, ಕೇಳಿದ ಪ್ರಶ್ನೆಗಳಿಗೆಲ್ಲಾ ಸಾವಧಾನವಾಗಿ ಉತ್ತರ ಹೇಳಿ ಕಳಿಸುತ್ತಿದ್ದೆ. ಅವರೂ ಕೂಡ ದವಾಖಾನೆಗೆ ಬಂದಾಗ, ಉಳಿದ ರೋಗಿಗಳೆಲ್ಲರ ಚಿಕಿತ್ಸೆಯಾದಮೇಲೆ ಸ್ವಲ್ಪ ಬಿಡುವು ನನಗಾದಾಗಲೇ ಒಳಗೆ ಬರುತ್ತಿದ್ದರು. "ನನಗೇನು ಅವಸರ, ಮನೇಲಿ ಬಿದ್ದಿರೋ ಬದಲು ಇಲ್ಲಿ ಕೂತಿರುತ್ತೇನೆ. ನಿನ್ನ ಕೆಲಸವೆಲ್ಲ ಮುಗಿದ ಮೇಲೆ ನನ್ನ ಪರೀಕ್ಷೆ ಮಾಡಿದರಾಯಿತು" ಎಂದೆನ್ನುತ್ತಿದ್ದರು.

* * *

ಒಂದು ದಿವಸ ಬೆಳಗ್ಗೆ ದವಾಖಾನೆಯಲ್ಲಿ ರೋಗಿಗಳ ಸಂಖ್ಯೆ ಸ್ವಲ್ಪ ಹೆಚ್ಚಾಗಿತ್ತು. ಅವಸರದಲ್ಲಿ ಕೆಲಸ ಮಾಡುವಾಗ ತಾಳ್ಮೆ ಅಷ್ಟಾಗಿ ಉಳಿದಿರುವುದಿಲ್ಲ. ಮೊದಲೇ ಮುಂಗೋಪದ ಸ್ವಭಾವ. ಹಾಗಾಗಿ ರಸ್ತೆಯಿಂದಲೇ "ಡಾಕ್ಟರೇ! ಮಗುವಿಗೆ ಅಸ್ವಾಸ್ಥ್ಯವಾಗಿದೆ, ಬೇಗ ನೋಡಬೇಕು" ಅಂತ ಕೂಗಿಕೊಂಡೇ ಮಿಕ್ಕ ರೋಗಿಗಳನ್ನು ದೂಡಿಕೊಂಡು, ಒಳಗೆ ನಾನು ಕುಳಿತಿದ್ದಲ್ಲಿಗೆ ಮಗುವನ್ನೆತ್ತಿಕೊಂಡು ಬಂದವನನ್ನು ನೋಡಿ "ಮಗುವಿಗೆ ಹಾಗಿರಲೀರೀ! ನಿಮಗೇ ದೊಡ್ಡ ರೋಗ ಬಡಿದ ಹಾಗೆ ಬೊಬ್ಬೆ ಹಾಕ್ತಿರಲ್ರೀ! ಎಲ್ಲಿ ಕೊಡಿ ಮಗೂನ" ಎಂದು ಅವನಿಗೆ ಛೀಮಾರಿ ಹಾಕಿ, ಮಗುವನ್ನೆತ್ತಿ ಪರೀಕ್ಷೆ ಮಾಡಲೋಸುಗ ನನ್ನ ತೊಡೆಯ ಮೇಲೆ ಮಲಗಿಸಿಕೊಂಡೆ. ಮಗುವಿಗೆ ಸಂದು ಇಳಿಯುತ್ತಿತ್ತು. ಹಣೆಗೆ ಒದ್ದೆ ಬಟ್ಟೆ ಹಾಕಿದ ಸ್ವಲ್ಪ ಹೊತ್ತಿನಲ್ಲೇ ಮಗು ಕಣ್ಣು ಬಿಟ್ಟಿತು. ಒಂದೆರಡು ನಿಮಿಷಗಳಲ್ಲಿ ಯಥಾಪ್ರಕಾರದ ಅಳುವಿಗೆ ಆರಂಭಿಸಿತು. "ಇಷ್ಟಕ್ಕೇ ಗಾಬರಿಯಿಂದ ಬಡಕೊಂಡುಬಿಟ್ರಲ್ಲ್ರೀ" ಎಂದು ಆತನನ್ನು ಹಂಗಿಸಿ, ಮಗುವನ್ನು ಹಿಂದಿರುಗಿ ಅವನ ಕೈಗೆ ಕೊಡುತ್ತಾ "ಮುಂದವಾಗಿರಬೇಕು. ಔಷಧಿ ಕೊಡ್ತೀನಿ" ಎಂದು ಹೇಳಿದೆ. ನನ್ನ ತೊಡೆಯು

ಬೆಚ್ಚಗಾಯಿತು. ಎಲ ಎಲಾ ಏನಾಯ್ತು ? ಅಂತ ನೋಡುತ್ತೇನೆ. ಮಗುವು ಬಿಸಿಬಿಸಿಯಾಗಿ ನನ್ನ ಪರಾಯನ್ನು ತೋಯಿಸಿದೆ ! ಆತನೂ ನನ್ನ ಪರಾಯನ್ನು ನೋಡಿದ. "ಅಯ್ಯೋ ಡಾಕ್ಟರೇ ! ನಾನು ಇದನ್ನು ಅನುಭವಿಸುವುದು ನ್ಯಾಯ ! ನಿಮಗ್ಯಾಕೆ ಈ ಗೋಳು ? ಈಗೇನ್ಮಾಡ್ಲಿ? ನಿಮ್ಮನೆಗೆ ಹೋಗಿ ಬೇರೆ ಪರಾಯಿ ತಂದುಕೊಡಲೇ ?" ಎಂದು ಕೇಳಿದ. "ಪರವಾಗಿಲ್ಲ ಬಿಡಯ್ಯಾ ! ಇನ್ನು ಮೂರು ನಾಲ್ಕು ಮಕ್ಕಳನ್ನು ತೊಡೇಮೇಲೆ ಕೂರಿಸಿಕೊಂಡರೆ ಆರಿ ಹೋಗುತ್ತೆ" ಎಂದು ಸಮಾಧಾನ ಹೇಳಿದೆ.

ಎರಡು ವಾರಗಳಾಗಿರಬಹುದು. ಬೆಳಗ್ಗೆ ದವಾಖಾನೆಗೆ ಹೋದಾಗ ಆತ ಕುಳಿತಿದ್ದ. "ಏನ್ರೀ ! ಮಗು ಚೆನ್ನಾಗಿದೆಯೋ !" ಎಂದೆ. "ಚೆನ್ನಾಗಿದೆ ಡಾಕ್ಟರೇ ! ಈಗ ನನಗೇ ಔಷಧಿ ಬೇಕು. ಸುಮಾರು ದಿನಗಳ ಕಾಯಿಲೆ. ಬೇಗ ಬಂದರೆ ನಿಮಗೆ ವ್ಯವಧಾನ ಹೆಚ್ಚಾಗಿ ಸಿಗಬಹುದು ಅಂತ ಆಗಲೇ ಬಂದು ಕುಳಿತೆ" ಎಂದು ಹೇಳಿದ. ಹತ್ತು ರೂಪಾಯಿ ನೋಟನ್ನು ತೆಗೆದು ನನ್ನ ಮುಂದಿಟ್ಟ. ನನ್ನ ದವಾಖಾನೆಯಲ್ಲಿ ಮುಂಗಡ ಹಣ ಕೊಟ್ಟು ಚಿಕಿತ್ಸೆ ಪಡೆಯುವವರು ಅತಿ ವಿರಳ. ಆ ವಿರಳರಲ್ಲಿ ಯಾರಿಗೂ ಗುಣವಾದ ನೆನಪಿಲ್ಲ. ಮೊದಲು ನನಗೆ ಹಣ ಕೊಟ್ಟವರ ಬೇನೆ ಖಂಡಿತವಾಗಿ ವಾಸಿಯಾಗುಲ್ಲ ಎಂಬ ಸಿದ್ಧಾಂತಕ್ಕೆ, ಅನುಭವದಿಂದ ಬಂದಿದ್ದೇನೆ. ಚಿಕಿತ್ಸೆಯಾದ ಮೇಲೆ ಹೋಗಿ ಉಳಿದುಕೊಂಡಿದ್ದರೆ ಹಣಕ್ಕಾಗಿ ಹೋರಾಟ ನಡಸುವುದಕ್ಕೆ ಧೈರ್ಯವಾದರೂ ಇರುತ್ತೆ. ಇಲ್ಲದೆ ಹೋದರೆ ಗಾದೆಯ ತರಹ ಆಯಿತು. "ಉಪಾಧ್ಯಾಯಾಶ್ಚ ವೈದ್ಯಾಶ್ಚ" ಅಂತಂದುಕೊಳ್ಳಬಹುದು. ಅದಕ್ಕೇ "ಮೊದಲು ಹಣ ಕೊಡ ಬೇಡಿ, ಪರೀಕ್ಷೆ ಮಾಡಿದ ಮೇಲೆ ಕೊಡುವಿರಂತೆ. ಈಗೇನು ಅವಸರ?" ಎಂದು ಹೇಳಿದೆ. "ಹಾಗಲ್ಲ ಡಾಕ್ಟರೇ, ನೀವು ತೆಗೆದುಕೊಂಡರೇ ನಾನು ಪರೀಕ್ಷೆ ಮಾಡಿಸಿಕೊಳ್ಳುವುದು" ಎಂದು ಅವನೂ ಹಠ ಹಿಡಿದ. ಅವನೇ ಗೆದ್ದ.

ಒಳಕ್ಕೆ ಕರೆದುಕೊಂಡು ಹೋಗಿ ಬೇನೆಯ ವಿವರಗಳನ್ನು ಕೇಳಿದೆ. ರಂಗಪ್ಪ ಅಂತ ಹೆಸರು. ವಯಸ್ಸು ನಲವತ್ತೈದು. ಲಾಯರು. ಸ್ವಂತ ಮಹಡಿ ಮನೆ ಕೆರೆ ಬೀದೀಲಿದೆ. ಹೆಂಡತಿ ಸ್ವಸ್ಥವಾಗಿದ್ದಾಳೆ. ಇರೋದು ನಾಲ್ಕು ಮಕ್ಕಳು. ಎರಡು ಹೆಣ್ಣು ಮದುವೆಯಾದುವು. ಎರಡು ಗಂಡು : ಕಾಲೇಜಿನಲ್ಲೊಂದು, ಹಾಯಸ್ಕೂಲಿನಲ್ಲೊಂದು. ಎಲ್ಲರೂ ಆರೋಗ್ಯವಾಗಿದ್ದಾರೆ.

ದೊಡ್ಡ ಮಗನೇ ರಂಗಪ್ಪನವರನ್ನು ದವಾಖಾನೆಯಲ್ಲಿ ಬಿಟ್ಟು ಪೇಟೆಗೆ ಕಾರು ತೆಗೆದುಕೊಂಡು ಹೋಗಿದ್ದನಂತೆ. ಒಂದು ಗಂಟೆ ಬಿಟ್ಟುಕೊಂಡು ಬಾ ಅಂತ ಹೇಳಿದ್ದರಂತೆ.

ಬೇರೆ ಯಾವ ರೋಗವೂ ಯಾವಾಗಲೂ ಬಂದಿರಲಿಲ್ಲ. ಕಟ್ಟುಮಸ್ತಾಗಿ ತಿಂದುಕೊಂಡು ಇದ್ದವರು.

ಹತ್ತು ಹದಿನೈದು ವರ್ಷಗಳಿಂದ ತಲೆನೋವು ಬರುವುದಕ್ಕೆ ಆರಂಭಿಸಿತ್ತು. ಪೆಂಡಶಿರದಿಂದ ತಲೆಯ ಹಿಂಭಾಗವೆಲ್ಲ ಸಿಡಿಸಿಡಿ ಸಿಡಿಯುವುದಕ್ಕೆ ಆರಂಭಿಸಿದರೆ ಒಂದೆರಡು ದಿನಗಳು ಬಲು ತ್ರಾಸುಪಡುತ್ತಿದ್ದರು. ಆದರೂ ಕೋರ್ಟು ಕಚೇರಿಗೆ ಹೇಗೋ ಹೋಗಿ, ಕೆಲಸವನ್ನು ಮಾಡುತ್ತಿದ್ದರು. ಆದರೂ ಹಗಲು ರಾತ್ರಿ ತಲೆ ಸಿಡಿಸಿಡಿಯುತ್ತಿತ್ತು. ಯಾವ ಕೆಲಸದ ಮೇಲೂ ಮನಸ್ಸು ನಿಲ್ಲಿಸಲು ಸಾಧ್ಯವಾಗುತ್ತಿರಲಿಲ್ಲ. ಹಲವಾರು ತರಹ ಚಿಕಿತ್ಸೆಗಳನ್ನು ಕೆಲವಾರು ವರ್ಷಗಳಿಂದಲೂ ಮಾಡಿದ್ದರೂ ಯಾವುದರಿಂದಲೂ ಪ್ರಯೋಜನವಾಗಿರಲಿಲ್ಲ. ಎಲ್ಲ ವೈದ್ಯರ ಚೀಟಿಗಳನ್ನೂ ಎಲ್ಲ ತರಹ ಪರೀಕ್ಷಾ ವಿವರಗಳನ್ನೂ ದೊಡ್ಡ ಕಡತವನ್ನಾಗಿ ಮಾಡಿ ತಂದಿದ್ದರು.

"ಆಮೇಲೆ ನೋಡ್ತೀನಿ ಇವನ್ನು. ಬಿಡುಮನಸ್ಸಿನಲ್ಲಿ ಮೊದಲು ನಿಮ್ಮ ಪರೀಕ್ಷೆ ನಡಸುತ್ತೀನಿ" ಎಂದು ಹೇಳಿ ಪರೀಕ್ಷೆಗಾರಂಭಿಸಿದೆ.

ಹೃದಯವನ್ನು ಪರೀಕ್ಷಿಸಿದೆ. ಆರೋಗ್ಯದಿಂದಿತ್ತು. ರಕ್ತದ ಒತ್ತಡ ಸಮನಾಗಿತ್ತು. ನಾಡಿಯು ಸುಸೂತ್ರವಾಗಿತ್ತು. ಶ್ವಾಸಕೋಶಗಳಲ್ಲಿಯಾಗಲಿ, ಜೀರ್ಣಾಂಗಗಳಲ್ಲಿಯಾಗಲಿ ಯಾವ ದೋಷವೂ ಕಂಡುಬರಲಿಲ್ಲ. ಮೂತ್ರದಲ್ಲಿ ದೋಷವಿರಲಿಲ್ಲ. ಕಣ್ಣುಗಳನ್ನೂ ಪರೀಕ್ಷಿಸಿದೆ. ಚಾಳೀಸ ಶುರುವಾಗಿತ್ತೇ ವಿನಾ ಒಂದು ಕಣ್ಣು ಇನ್ನೊಂದಕ್ಕಿಂತ ದೃಷ್ಟಿ ವ್ಯತ್ಯಾಸವನ್ನು ಹೊಂದಿರಲಿಲ್ಲ. ಹಾಗಾಗಿದ್ದರೆ ತಲೆ ನೋವು, ಅದರಲ್ಲೂ ತಲೆಯ ಹಿಂದುಗಡೆ ನೋವು ಬರಲು ಸಾಧ್ಯ.

ಮೂಗನ್ನು ಪರೀಕ್ಷೆ ಮಾಡಿದೆ. ಉಸಿರಾಟದ ಮಾರ್ಗ ಹಸನಾಗಿತ್ತು. ನೆಗಡಿಯ ಚಿಹ್ನೆ ಇರಲಿಲ್ಲ. ನಾಸಿಕದ ಸೈನಸ್‌ಗಳು ಶುದ್ಧ ಕಂಡವು. ನೆಗಡಿಯು ಬಹು ಕಾಲ ಉಳಿದರೆ, ಸಿಂಬಳವು ಸೈನಸ್‌ಗಳಲ್ಲಿ ಕೊಳೆತು ಕೀವಾಗಿ ತಲೆನೋವು

ಬರುವುದುಂಟು. ಅಂಥದೇನೂ ಕಾಣಲಿಲ್ಲ. ಆದರೂ ಬಲಗಡೆ ಮೂಗಿನ ಒಳ ಪೊರೆಯು ಹೆಚ್ಚು ಕೆಂಪಾಗಿತ್ತು.

ಹಲ್ಲುಗಳೆಲ್ಲವೂ ಚೆನ್ನಾಗಿದ್ದುವು, ಮೇಲಿನ ದವಡೆ ಹಲ್ಲುಗಳ ಬೇರುಗಳಲ್ಲಿ ಏನಾದರೂ ಸೋಂಕಿದ್ದರೆ. ಆ ನರಗಳ ಸಂಪರ್ಕ ಹೊಂದಿರುವ ತಲೆಯ ನರಗಳು ಕೂಡ ಅನುಕಂಪದಿಂದ ಉದ್ರಿಕ್ತವಾಗಿ ತಲೆನೋವು ತರುವುದುಂಟು.

ಮುಖ್ಯವಾದ ಮೂರು ಕಾರಣಗಳೂ ರಂಗಪ್ಪನಲ್ಲಿ ಇರಲಿಲ್ಲ. ಸಂಚರಿಸುವ ರಕ್ತದಲ್ಲಿ ವಿಷವಸ್ತುಗಳಿದ್ದರೆ, – ಉದಾಹರಣೆಗೆ ಹೆಂಡ ಕುಡಿದವರಲ್ಲಿ– ತಲೆನೋವು ಕಾಣಿಸಿಕೊಳ್ಳಬಹುದು. ರಂಗಪ್ಪನಿಗೆ ದುಷ್ಟಚಟಗಳಾವುವೂ ಇರಲಿಲ್ಲ. ಜೀರ್ಣಶಕ್ತಿ ಚೆನ್ನಾಗಿತ್ತು. ಲಿವರ್ ಸರಿಯಾಗಿ ಕೆಲಸ ಮಾಡುತ್ತಿದೆ ಎಂದೂ ಕಂಡುಬಂದಿತ್ತು.

ಖಂಡಿತವಾದ ಕಾರಣಗಳಾವುವೂ ದೊರಕಲಿಲ್ಲ.

ಆಮೇಲೆ ಆತ ತಂದಿದ್ದ ಕಡತವನ್ನು ಬಿಚ್ಚಿ ನೋದಿದೆ. ಸುಮಾರು ೧೫ ವರ್ಷಗಳ ಕಡತ. ಒಬ್ಬರು ಕಣ್ಣಿನ ದೋಷವಿರಬೇಕು ಎಂದು ನಿರ್ಣಯಿಸಿ ಕನ್ನಡಕಗಳನ್ನು ಸಲಹೆ ಮಾಡಿದ್ದರು. ಮತ್ತೆ ಕೆಲವರು ಆಹಾರದ ಕೆಲವಂಶಗಳು ಸರಿಯಾಗಿ ಜೀರ್ಣವಾಗುವುದಿಲ್ಲವೇನೋ ಎಂದು ಜೀರ್ಣಕಾರಿ ದ್ರವಗಳನ್ನು ಸಲಹೆ ಮಾಡಿದ್ದರು. ಕೆಲವರು ಬೆಳಗಿನ ರಭಾಮುದ ತಣ್ಣೀರು ಸ್ನಾನವನ್ನು ಉಪದೇಶಿಸಿದ್ದರು. ಮತ್ತೆ ಕೆಲವರು ವ್ಯಾಯಾಮವನ್ನು ಸೂಚಿಸಿದ್ದರು. ಅದರಲ್ಲೂ ಶೀರ್ಷಾಸನ ಹಾಕಲು ಒತ್ತಾಯಪಡಿಸಿದ್ದರು.

ಆ ಎಲ್ಲ ವೈದ್ಯರುಗಳೂ ನನ್ನಂತೆಯೇ ಸಂದಿಗ್ಧ ಸ್ಥಿತಿಯಲ್ಲೇ ಇದ್ದವರು. ಯಾರಿಗೂ ದಿಟವಾದ ಕಾರಣ ಗೊತ್ತಾಗಿರಲಿಲ್ಲ. ಇದು ಸ್ವಲ್ಪ ಮಟ್ಟಿಗೆ ಆತ್ಮವಿಶ್ವಾಸವನ್ನು ಕೊಟ್ಟಿತು.

ಬಲಗಡೆ ಮೂಗಿನ ಒಳಪೊರೆಯು ಹೆಚ್ಚು ಕೆಂಪಾಗಿತ್ತು. ಇದಕ್ಕೆ ಕಾರಣವಾದ ರೋಗದಿಂದಲೇ ತಲೆನೋವೂ ಬಂದಿರಬಹುದೋ ಎಂದೆನಿಸಿತು. ಮುಳುಗುವವನು ಹುಲ್ಲುಕಡ್ಡಿ ಹಿಡಿದಂತೆ ಅದನ್ನೇ ಹಿಡಿದುಕೊಂಡೆ. ರಂಗಪ್ಪನವರಿಗೆ ವಿವರಣೆ ಕೊಟ್ಟೆ.

ನಮ್ಮ ರೋಗಿಗಳಿಗೆ ವಿವರಣೆ ಕೊಡುವಾಗ ಅವರುಗಳು ಸಾಮಾನ್ಯವಾಗಿ ಉಪಯೋಗಿಸುವ ಮಾತುಗಳನ್ನೇ ನಾವು ಉಪಯೋಗಿಸಬೇಕು. ನಮಗೆ

ಆ ಮಾತುಗಳ ಸರಿಯಾದ ಅರ್ಥವು ತಿಳಿಯದೇ ಇದ್ದರೂ ಪರವಾಗಿಲ್ಲ. ಈ ಮರ್ಮವನ್ನು ಅನುಭವದಿಂದ ಡಾಕ್ಟರುಗಳು ಕಲಿತಿರುತ್ತಾರೆ. ಅದಕ್ಕೇ ಈ ರೀತಿ ಹೇಳಿದೆ:

"ರಂಗಪ್ಪನವರೇ! ನಿಮ್ಮದು ವಾಯುಪ್ರಕೃತಿ ಹಾಗೂ ಬಲು ಸೂಕ್ಷ್ಮ ಪ್ರಕೃತಿ. ಉಳಿದವರ ಮೇಲೆ ಏನೂ ಪರಿಣಾಮವುಂಟುಮಾಡದೆ ಇರುವ ವಸ್ತುಗಳು ನಿಮ್ಮ ದೇಹದ ಒಂದು ಕಡೆಯಲ್ಲ ಇನ್ನೊಂದು ಕಡೆ ತೀವ್ರ ಪರಿಣಾಮವನ್ನುಂಟುಮಾಡುತ್ತವೆ. ಅದರಿಂದಲೇ ನಿಮ್ಮ ಮೂಗಿನ ಒಂದು ಕಡೆಯ ಒಳಪೊರೆಯು ರೇಗಿದೆ. ಶಿರದಿಂದ ಬರುವ ಐದನೇ ದೊಡ್ಡ ನರದ ಒಂದು ಕವಲೇ ಮೂಗಿನ ಒಳಪೊರೆಯಲ್ಲೂ ಹರಡಿರುತ್ತೆ. ಅದರಿಂದಲೇ ಮೂಗಿನಲ್ಲಿ ಕವಲು ನರದ ಉದ್ರೇಕವಾಯಿತೆಂದರೆ, ಆ ಉದ್ರೇಕವು ದೊಡ್ಡ ನರಕ್ಕೂ ಹರಡಿ ತಲೆ ನೋವು ಕಾಣಿಸಿಕೊಳ್ಳುತ್ತದೆ. ನಿಮ್ಮ ಮೂಗನ್ನು ಉದ್ರೇಕಿಸುವ ವಸ್ತುಗಳು ಉಸಿರಾಡುವ ಗಾಳಿಯಲ್ಲಿ ತೇಲಿ ಬಂದಿರಬಹುದು. ಅಡುಗೆಮನೆಯ ಘಾಟು, ಸ್ನಾನ ಮಾಡುವಾಗ ಉಪಯೋಗಿಸುವ ಸೀಗೆಕಾಯಿ ಪುಡಿ, ಕರವಸ್ತ್ರಕ್ಕೆ ಹಾಕುವ ಸುಗಂಧ ವಸ್ತುಗಳು ಇತ್ಯಾದಿಗಳಲ್ಲಿ ಯಾವುದರ ಅಂಶವಾದರೂ ಮೂಗಿನ ಪೊರೆಯನ್ನು ಉದ್ರೇಕಿಸಬಹುದು. ಅವುಗಳನ್ನು ಕಂಡುಹಿಡಿಯುವುದು ಸುಲಭ ಸಾಧ್ಯವಲ್ಲ. ಅದರ ಬದಲಾಗಿ ಮೂಗಿನ ಒಳಪೊರೆಯ ಗಟ್ಟಿಗಡತವನ್ನು ಹೆಚ್ಚು ಮಾಡಿ, ಸೂಕ್ಷ್ಮತೆಯನ್ನು ಮಂದವಮಾಡಿದರೆ ನಿಮಗೆ ಗುಣವಾಗಬಹುದು. ಆ ರೀತಿಯ ಚಿಕಿತ್ಸೆಯನ್ನು ಮಾಡುತ್ತೇನೆ" ಎಂದು ಹೇಳಿದೆ. ಹೊಟ್ಟೆಗೆ ಜೀರ್ಣಕಾರಕ ಔಷಧಿ, ಮೂಗಿಗೆ ಔಷಧದ ಸಿಂಪನೆ, ಮತ್ತು ಒಳಪೊರೆಗಳಿಗೆ ಅವಶ್ಯಕವಾದ ವೈಟಮಿನ್ ಎ ಮತ್ತು ಸಿ; ಇವುಗಳನ್ನೆಲ್ಲವನ್ನೂ ಬಳಸಿದೆ.

ಎರಡು ಮೂರು ದಿನಗಳಲ್ಲಿ ರಂಗಪ್ಪನ ತಲೆನೋವು ಮಾಯವಾಯಿತು. 'ನನ್ನ ಮಿಡಶಿರ ಇಷ್ಟು ಹಗುರಾಗಿ ಇದ್ದದ್ದೇ ಇಲ್ಲ' ಎಂದು ಆತ ಹೇಳಿದಾಗ ಮನಸ್ಸಿನಲ್ಲಿ ನನ್ನ ಬೆನ್ನನ್ನು ನಾನೇ ತಟ್ಟಿಕೊಂಡೆ.

ಆದರೆ ಇನ್ನಾರು ದಿನಗಳಲ್ಲಿ ತಿರುಗಿ ಜೋಲುಮುಖ ಹಾಕಿಕೊಂಡು ರಂಗಪ್ಪ ಹಿಂತಿರುಗಿದಾಗ, "ಮೂಗಿನಿಂದಿರಲಾರದು. ಹಲ್ಲುಗಳನ್ನು x-ray ಮಾಡಿಸಿ ನೋಡೋಣ. ಸ್ಥೂಲದೃಷ್ಟಿಗೆ ಕಾಣದೆ ಇದ್ದಿರಬಹುದು" ಎಂದು

ಅವೆಲ್ಲಾ ಪರೀಕ್ಷೆಗಳನ್ನೂ ಮಾಡಿಸಿದೆ. ಯಾವ ದೋಷವೂ ಕಂಡುಬರಲಿಲ್ಲ. ಇದೇ ರೀತಿ ಕಣ್ಣುಗಳನ್ನು, ರಕ್ತವನ್ನು, ಎಲ್ಲವನ್ನೂ ಒಂದೊಂದಾಗಿ ತಲಾಷ್ ಮಾಡಿಸುವ ವೇಳೆಗೆ ಆರೇಳು ತಿಂಗಳಾಯ್ತು. ದೇಹಪರೀಕ್ಷೆಯ ಫಲಿತಾಂಶ ಗಳೆಲ್ಲವೂ ಸಮರ್ಪಕವಾಗಿದ್ದುವು. ಆದರೆ ರೋಗಿಯನ್ನು ಬಾಧೆಯು ಮಾತ್ರ ಯಥಾಪ್ರಕಾರ ಕಾಡುತ್ತಲೇ ಇತ್ತು.

ದೈಹಿಕ ಕಾರಣಗಳಿಲ್ಲದಿರುವಾಗ ಮಾನಸಿಕ ಅವ್ಯವಸ್ಥೆಯನ್ನು ನೆನಪಿ ನಲ್ಲಿಡಬೇಕು. ಪಾರಣವಾದ ಸಂಸಾರ. ಸಾಕಷ್ಟು ಸುಖ ಸಂಪಾದನೆ. ಮನೆ ಯಲ್ಲಾಗಲೀ, ಕೋರ್ಟು ಕಚೇರಿಗಳಲ್ಲಾಗಲಿ ಅಸಮಾಧಾನಕ್ಕೆ ಕಾರಣವಾದುದು ಯಾವುದೂ ಕಂಡುಬರಲಿಲ್ಲ. ದೇಹ ಪರೀಕ್ಷೆ ಮಾಡಿದ ಎಷ್ಟೋ ವೇಳೆ ಲೋಕಾಭಿರಾಮವಾಗಿ ಮಾತನಾಡುತ್ತ, ಆತನ ಮನಸ್ಸಿಗೆ ಬೇಸರ ಪಡಿಸುವ ವಿಷಯಗಳು ಯಾವುದು ಇರಬಹುದು, ಎಂಬುದನ್ನು ತಿಳಿಯಲು ಯತ್ನಿಸಿದ್ದೆ. ಯಾವುದೊಂದು ಜುಗುಪ್ಸೆಯ ವಿಷಯವೂ ಹೊರಬೀಳಲಿಲ್ಲ.

ಈ ವಿವರಣೆಯನ್ನೆಲ್ಲಾ ನೀವೇನಾದರೂ ಪೂರ್ತಿ ಓದಿದ್ದರೆ ಈ ವೇಳೆಗೆ ನಿಮಗೆ ಬೇಜಾರು ಬಂದಿರಲೇಬೇಕು. ನನಗೂ ಹಾಗೆಯೇ ಆಗ ಆಗಿತ್ತು. "ಪುಣ್ಯಾತ್ಮ, ಇನ್ನು ಯಾರಾದರೂ ಬೇರೆ ಡಾಕ್ಟರ ಹತ್ತಿರ ಹೋಗಬಾರದೇ ! ನನ್ನನ್ನೇ ಯಾಕೆ ಕಾಡ್ತಾನೆ ?" ಎಂದು ಎಷ್ಟೋ ಸಲ ಅನ್ನಿಸಿತ್ತು. ಹಾಗೆ ಬಾಯಿಬಿಟ್ಟು ನನ್ನಿಂದ ಅಸಾಧ್ಯ ಎಂದೆನ್ನಲು ಏನೋ ಬಿಗುಮಾನ, ಎಂತದೋ ಅಹಂಕಾರ. ನನ್ನ ದುರದೃಷ್ಟಕ್ಕೆ ಒಂದೊಂದು ಪ್ರಯೋಗಕ್ಕೂ ನಾನು ಕೇಳಿ ದಷ್ಟು ಹಣವನ್ನು ಕಮಕ್ಕಿಮಕ್ಕೆನ್ನದೆ ಸಂತೋಷವಾಗಿಯೇ ಕೊಡುತ್ತಿದ್ದ. ಆ ನೆಪದಿಂದಲಾದರೂ ಅವನ ಮುಖ ನೋಡುವುದನ್ನು ತಪ್ಪಿಸಿಕೊಳ್ಳಲಾಗಲಿಲ್ಲ. ಹೀಗಾಗಿ ಅವನು ಬಂದಾಗಲೆಲ್ಲಾ ಜೇಬಿನಲ್ಲಿ ಝಣಝಣವಾದರೂ ಮನಸ್ಸು ಮಾತ್ರ ಸಣ್ಣದಾಗುತ್ತಿತ್ತು.

* * *

ಆ ದಿನ ಗಣೇಶ ಚತುರ್ಥಿ. ದವಾಖಾನೆಗೆ ಹೆಚ್ಚಾಗಿ ಹಿಂದೂ ರೋಗಿ ಗಳು ಬರುವುದಿಲ್ಲ. ಅತ್ಯವಶ್ಯಕವಿದ್ದವರೇ ಬರುವುದು ವಾಡಿಕೆ. ಆದರೂ

ಯಂಥಾಪ್ರಕಾರ ಹಾಜರಾದ ರೋಗಿಯೆಂದರೆ ರಂಗಪ್ಪ! ಹತ್ತು ಹದಿನೈದು ನಿಮಿಷ ಮಾತನ್ನಾಡಿ, ಕೈತುಂಬಾ ಔಷಧಿಕೊಟ್ಟು ಕಳಿಸಿದೆ. ಆತ ಹೋದ ಮೇಲೆ ಒಬ್ಬಿಬ್ಬರು ಮುಸ್ಲಿಂ ರೋಗಿಗಳಿಗೆ ಚಿಕಿತ್ಸೆಮಾಡಿರಬಹುದು. ಡಾ॥ ಕಣ್ಣಪ್ಪ ಮೊದಲಿಯಾರ್ರು ಬಂದರು.

"ಯಾಕೋ ಸ್ವಲ್ಪ ತಲೆ ಭಾರವಾದ ಹಾಗೆ ಕಾಣಿಸಿತು. ಹಬ್ಬದ ದಿವಸ ಹುಷಾರಾಗಿರೋಣ ಅಂತ ಬಂದೆ. ರಕ್ತದ ಒತ್ತಡ ಎಷ್ಟಿದೆ ನೋಡ್ತಿಯಾ?" ಎಂದರು. ಪರೀಕ್ಷೆಮಾಡಿ "ಎಲ್ಲವೂ ಸರಿಯಾಗಿದೆ" ಎಂದು ಹೇಳಿದೆ.

"ಹಬ್ಬ ಯಾರೂ ಬಂದಹಾಗಿಲ್ಲ ಅಲ್ಲವೇ ?" ಅಂದರು. "ಹ್ಞಾ" ಅಂದೆ,

"ನಾನು ಇಲ್ಲಿಗೆ ಬರೋವಾಗ ಹೊರಗಡೆಗೆ ಹೋಗುತ್ತಿದ್ದರಲ್ಲಾ ಅವರು ಲಾಯರು ರಂಗಪ್ಪನವರಲ್ಲವೇ? ಕನ್ನಡಕ ಹಾಕಿಕೊಂಡು ಬರಲಿಲ್ಲ. ಸರಿಯಾಗಿ ಕಾಣಿಸಲಿಲ್ಲ" ಎಂದು ಕೇಳಿದರು.

"ಹೌದು" ಎಂದು ಹೇಳಿದೆ. "ನಿಮಗೆ ಅವರ ಪರಿಚಯವಿದೆಯೋ ?" ಎಂದೆ.

"ನಾನು ರಿಟೈರ್ ಆಗುವ ಮೊದಲು ಸಂತೇಪೇಟೆ ಆಸ್ಪತ್ರೆಯಲ್ಲಿ ಡಾಕ್ಟರಾಗಿದ್ದೆ. ಆಸ್ಪತ್ರೆಯ ಹಿಂಭಾಗದಲ್ಲೇ ನನ್ನ ಮನೆ ಇತ್ತು. ಸಂತೇ ಪೇಟೆಯಿಂದ ಕೆರೆಬೀದಿಗೆ ಎರಡು ಫರ್ಲಾಂಗ್ ಅಂತರವಿರಬಹುದು. ಒಂದು ದಿನ ಬೆಳಗಿನ ಝಾಮ ಐದು ಗಂಟೆಗೆ ರಂಗಪ್ಪನವರು ಓಡೋಡಿ ಬಂದು ನನ್ನ ನ್ನೆಬ್ಬಿಸಿ, ಅವರ ಮಗು ತೀವ್ರ ಸ್ಥಿತಿಯಲ್ಲಿದೆಯೆಂದು ಬಡಬಡಸಿ, ತಮ್ಮನೆಗೆ ಕರೆದುಕೊಂಡು ಹೋದರು. ಅಲ್ಲಿಗೆ ಹೋದೆ. ತೊಟ್ಟಿಯಲ್ಲಿ ಮಗು ಮಲಗಿತ್ತು. ಆರೇಳು ವರ್ಷದ ಲಕ್ಷಣವಾದ ಮಗು. ಪರೀಕ್ಷೆಮಾಡಿದಾಗ ಅದು ಸತ್ತು ಎರಡು ಮೂರು ಗಂಟೆಗಳಾದರೂ ಆಗಿರಬೇಕು ಎಂದು ಗೊತ್ತಾಯಿತು. 'ಏನಾಗಿ ತ್ತಮ್ಮ?' ಎಂದು ಹತ್ತಿರ ಅಳುತ್ತ ಕುಳಿತಿದ್ದ ತಾಯಿಯನ್ನು ಕೇಳಿದೆ.

"ರಾತ್ರಿ ಊಟಮಾಡಿ ಸುಖವಾಗಿ ಮಲಗಿಕೊಂಡಿತು. ಶಾಲೆಯಲ್ಲಿ ಹೇಳಿಕೊಟ್ಟ ಬಲಿಚಕ್ರವರ್ತಿ ಕತೆಯನ್ನು ಹೇಳಿತು. ಮಧ್ಯರಾತ್ರಿ ಕಿಟಾರ್ರಂತ ಕಿರುಚಿಕೊಂಡು ಅಳೋಕ್ಕೆ ಶುರುಮಾಡಿತು. ದೀಪ ದೊಡ್ಡದುಮಾಡಿದೆ. ಏನೇನು ಮಾಡಿದರೂ ಅಳು ನಿಲ್ಲಿಸಲಿಲ್ಲ. ಹೊಟ್ಟೆಗೆ ಶಾಖಕೊಟ್ಟೆ. ಕಿವಿಗೆ ಎಣ್ಣೆ ಕಾಯಿಸಿ ಹಾಕಿದೆ. ಅಳು ನಿಲ್ಲಿಸಲೇ ಇಲ್ಲ. ಬಲಗಡೆ ಕೊಠಡಿಯಲ್ಲಿ

ಇವರು ಮಲಗಿದ್ದರು. ಎದ್ದು ಬಂದು ಸಮಜಾಯಿಸಿದರು. ಅಳು ನಿಲ್ಲಲಿಲ್ಲ. ಏನು ಬಂತೋ ಇವರಿಗೆ—ಮಗುವಿನ ಕೆನ್ನೆಗೆ ಒಂದು ಏಟು ಹಾಕಿದರು. ಎಂದೂ ಮಕ್ಕಳನ್ನು ಹೊಡೆದವರಲ್ಲ. ಏಟು ಬಿದ್ದಮೇಲೆ ಅದು ಅಳು ನಿಲ್ಲಿಸಿ ಮಲಗಿಕೊಂಡಿತು. ಇವರು ಕೊಠಡಿಗೆ ಹೋಗಿ ಕೋಪದಿಂದ ಧಡಾರಂತ ಬಾಗಿಲು ಹಾಕಿಕೊಂಡರು. ನಾನೂ ದೀಪ ಸಣ್ಣದು ಮಾಡಿ ಮಲಗಿದೆ. ಬೆಳಗ್ಗೆ ಬಚ್ಚಲುಮನೆ ಒಲೆ ಹತ್ತಿಸುಕ್ಕೆ ಐದು ಗಂಟೆ ಸುಮಾರಿಗೆ ಎದ್ದೆ. ಮಗು ವಿನ ಮೈ ತಣ್ಣಗಿತ್ತು. ಭಯವಾಯ್ತು. ಇವರನ್ನ ಎಬ್ಬಿಸಿದೆ. ನಿಮ್ಮನ್ನ ಕರ ಕೊಂಡು ಬನ್ನಿ ಅಂತ ಕಳಿಸಿ, ಬಿಸಿನೀರು ಶಾಖ ಕೊಟ್ಟೆ. ಮೈಗೆಲ್ಲಾ ಬ್ರಾಂದಿ ಹಚ್ಚಿದೆ. ಎಲ್ಲಾ ಮುಗಿದು ಹೋಯ್ತೋ, ಡಾಕ್ಟರೇ! ಇನ್ಜಕ್ಷನ್ ಏನಾರೂ ಕೊಟ್ಟು ನೋಡಿ ಡಾಕ್ಟರೇ!" ಎಂದು ಅಳುವಿನ ಮಧ್ಯೆ ತಡವರಿಸಿಕೊಂಡು ತಡವರಿಸಿಕೊಂಡು ಹೇಳಿದಳು.

"ಕೊಟ್ಟ ದೇವರು ಕೊಂಡುಹೋಗಿದಾನೆ, ತಾಯಿ. ಡಾಕ್ಟರು ಏನು ತಾನೆ ಮಾಡುಕ್ಕೆ ಆಗುತ್ತೆ ಈಗ!" ಎಂದು ಸಮಾಧಾನದ ಮಾತನ್ನು ಹೇಳಿದೆ. ರಂಗಪ್ಪನವರಿಗೂ ಸಮಾಧಾನ ಹೇಳಲು ತಿರುಗಿದೆ. ಅಲ್ಲಿತ್ತಿಲ್ಲ. ಅವರ ಕೊಠಡಿ ಯಲ್ಲಿ ಅಳುತ್ತಿದ್ದ ಸದ್ದು ಕೇಳಿಸಿತು. ಅಲ್ಲಿಗೆ ಹೋದೆ. ಕುರ್ಚಿಯ ಮೇಲೆ ಕುಳಿತು ತಲೆತಲೆ ಚಚ್ಚಿಕೊಂಡು "ನನ್ನ ಮಗುವಿನ ಕೆನ್ನೆಗೆ ನಾನೇ ಹೊಡೆದು ಕೊಂದೆ. ಈಗ ಏನು ಮಾಡಲಿ ?" ಅಂತ ಅಳುತ್ತಿದ್ದರು.

"ಕಪಾಳದ ಮೇಲೆ, ಅದೂ ಎಳೆಯ ಕಪಾಳದ ಮೇಲೆ, ಉಂಗುರ ಮೆಟ್ಟಿದ ಕೈಯನ್ನು ಜೋರಾಗಿ ಬಡಿದರೆ, ಪ್ರಾಣಹಾನಿಯಾಗಬಹುದು ಎಂದು ಎಲ್ಲರಿಗೂ ತಿಳಿದ ವಿಷಯ. ಇವನನ್ನು ಹೇಗೆ ಸಮಾಧಾನಮಾಡೋದು ಎಂದೇ ತೋರಲಿಲ್ಲ. 'ಗಂಡಸರು ನೀವು, ಹೀಗೆ ಅಳುಕ್ಕೆ ಶುರುಮಾಡಿದರೆ, ಹೆತ್ತ ತಾಯಿಯ ಸಂಕಟವನ್ನು ತೀರುಸುವವರ್‍ಯಾರು, ರಂಗಪ್ಪ? ಸ್ವಲ್ಪ ಧೈರ್ಯ ತೂಗೋಬೇಕು" ಎಂದೆ.

"ಧೈರ್ಯ ತೊಗೋಬೇಕು! ಅದು ಹೇಗೆ ಡಾಕ್ಟರೇ? ನ್ಯಾಯವಾಗಿ ನನ್ನನ್ನು ಗಲ್ಲಿಗೆ ಹಾಕಬೇಕು, ಮಗುವನ್ನು ಹೊಡೆದು ಕೊಂದದ್ದಕ್ಕೆ" ಎಂದು ಇನ್ನೂ ಗಟ್ಟಿಯಾಗಿ ತಲೇನ ಮೇಜಿಗೆ ಕುಟ್ಟುಕ್ಕೆ ಶುರುಮಾಡಿದರು.

"ಓಹೋ! ಈ ಉದ್ವೇಗದಲ್ಲಿ ಹುಚ್ಚಾಗಿಬಿಡ್ತಾನೇನೋ" ಎಂಬ ಭಯಂ ಬಂತು. ಪಾಪ! ಆಕೆಗಾದರೂ ಈ ಗಲಭೆ ಕಡಮೆ ಕೇಳಲಿ ಅಂತ ಕೊಠಡಿ ಬಾಗಿಲು ಹಾಕಲುಂ ಹೋದೆ. ಅಷ್ಟುಹೊತ್ತಿಗೆ ಬೆಳಗ್ಗೆ ೬ – ೬-೩೦ ಆಗಿದ್ದಿರ ಬಹುದು. ಪೂರ್ವಾಭಿಮುಖವಾದ ಕೊಠಡಿ, ಚೆನ್ನಾಗಿ ಬೆಳಕುಂ ಬಿದ್ದಿತ್ತು. ಬಾಗಿಲುಂ ಎಳೆದುಂಕೊಳ್ಳಲು ಹೋದರೆ, ಬಾಗಿಲ ಸಂದಿಯಲ್ಲಿ ಐದಾರು ಅಂಗುಲದ ದೊಡ್ಡ ಕೆಂಜೇಳೊಂದು ಸತ್ತು ಅಪ್ಪಚ್ಚಿಯಾಗಿ ಅಂಟಿಕೊಂಡಿತ್ತು. ಆಗ ಎಲ್ಲವೂ ತಿಳಿಯಿತು. ರಾತ್ರಿ ಮಲಗಿದ್ದಾಗ ಮಗುವಿನ ತಲೆಯನ್ನು ಕುಟುಕಿದೆ ಚೇಳು. ಅದು ಅಳುಕ್ಕೆ ಶುರುಮಾಡಿದಾಗ, ಚೇಳು ಬಾಗಿಲ ಬಳಿಗೆ ಹೋಗಿದೆ. ದೀಪ ದೊಡ್ಡದು ಮಾಡಿದಾಗ ಬಾಗಿಲ ಸಂದಿಯಲ್ಲಿ ಸೇರಿಕೊಂಡಿದೆ. ಮಗು ಮಲಗಿಕೊಂಡ ಮೇಲೆ ರಂಗಪ್ಪ, ಕೊಠಡಿಗೆ ಹೋಗಿ, ಧಡಾರಂತ ಬಾಗಿಲುಂ ಎಳೆದುಕೊಂಡಾಗ ಚೇಳುಂ ಅಲ್ಲಿ ಸಿಕ್ಕಿ ಅಪ್ಪಚ್ಚಿಯಾಗಿದೆ. ಬೆಳಗಿನ ರಭಾವಂ ಬಾಗಿಲುಂ ತೆಗೆದಾದ ಕತ್ತಲುಕತ್ತಲು, ಯಾರಿಗೂ ಕಾಣಿಸಿಲ್ಲ. 'ಅಯ್ಯೋ! ನೋಡೆ! ಈ ಹಾಳುಮುಂಡೇದು ಚೇಳು ಕುಟುಕಿದೆ. ಅದಕ್ಕೇ ಮಗುಂ ಬಡಕೊಂಡಿದೆ. ಏನಾಗಿದೆ ಅಂತ ನೋಡೋದು ಬಿಟ್ಟು, ಕಪಾಳಕ್ಕೆ ಹಾಕಿದೆನಲ್ಲೇ!' ಅಂತ ಹೆಂಡತಿಯ ಕಡೆ ತಿರುಗಿ ಅಳುಕ್ಕೆ ಶುರುಮಾಡಿದರು. ಅಷ್ಟು ಹೊತ್ತಿಗೆ ಆಚೆ ಬೀದಿಯಲ್ಲಿದ್ದ ಅವರ ಭಾವಮೈದುನನ ಮನೆಯವರೆಲ್ಲರೂ ಸುದ್ದಿ ತಿಳಿದುಂ ಬಂದರು. ನಾನು ಮೆಲ್ಲಗೆ ಹಿಂತಿರುಗಿ ಬಂದೆ.

"ಅವನ ಮಂಡಶಿರದ ನೋವು ಹೇಗೆ ವಾಸಿಯಾಗುತ್ತೆ ? ಮಗುಂ ತಲೆಯ ಹಿಂಭಾಗವನ್ನು ಕುಟ್ಟಿಕೊಂಡು ಅಳುತ್ತಿತ್ತು' ಎಂದು ಆಮೇಲೆ ತಾಯಿಯುಂ ತಮ್ಮನಿಗೆ ಹೇಳಿಕೊಂಡು ಅತ್ತಳಂತೆ. ಆವಾಗಿನಿಂದ ರಂಗಪ್ಪನಿಗೆ ಮಂಡಶಿರದ ನೋವು ಬರ್ತಾಇದೆ."

—ಎಂದುಂ ಹೇಳಿದರು, ಡಾ॥ ಕಣ್ಣಪ್ಪ. ಆ ವೇಳೆಗೆ ಇನ್ನೂ ಇಬ್ಬರುಂ ಮೂವರು ರೋಗಿಗಳು ಬಂದುದನ್ನು ನೋಡಿ "ಹೋಗಿಬರ್ತೀನಿ...ಏನೇನೋ ಹಳೇ ಸೆನಪನ್ನೆಲ್ಲಾ ನಿನ್ನ ಹತ್ತಿರ ಕಾಡುಹರಟೆ ಕೊಚ್ಚೀನಿ" ಎಂದು ಹೇಳಿ ಹೊರಟುಹೋದರು.

* * *

ಈಗ ಕಾರಣವೇನೋ ಗೊತ್ತಾಯಿತು. "ಆ ಕಾರಣವೇ ತಲೆನೋವಿಗ ಮೂಲವಾಗಿದೆ ಎಂಬುದು ರಂಗಪ್ಪನವರಿಗೂ ತಿಳಿದಿರಬೇಕು. ಜಾಣರು; ಹತ್ತಾರು ಡಾಕ್ಟರುಗಳ ಅನುಭವ ಪಡೆದವರು; ಓದಿ ತಿಳಿದುಕೊಳ್ಳುವ ಚಟ ಇದ್ದವರು. ಈ ಬೇನೆಯನ್ನು ಅನುಭವಿಸಿ, ತಾವು ಮಾಡಿದ ತಪ್ಪಿಗೆ ಪ್ರಾಯಶ್ಚಿತ್ತ ಮಾಡಿಕೊಳ್ಳುತ್ತಿದ್ದಾರೆ. ಇದರಲ್ಲಿ ನಾವು ಕೈಹಾಕಿದರೆ ಯಾವ ಫಲತಾನೆ ದೊರಕೀತು? ಹೀಗೆಂದು ಅವರಿಗೆ ವಿವರಣೆ ಕೊಡಬಹುದೆ? ಅದು ನ್ಯಾಯವೆ?" ಎಂದು ಸಂದೇಹ ಕಾಡಲು ಶುರುವಾಯ್ತು.

ನನ್ನ ವೈದ್ಯಮಿತ್ರನೊಬ್ಬನನ್ನು ಸಲಹೆ ಕೇಳಿದೆ. ಅವನು ಕಡ್ಡಿ ತುಂಡು ಮಾಡಿದ ಹಾಗೆ ಹೇಳಿದ: "ಡಾಕ್ಟರಾದವನ ಕೆಲಸ ಏನು? ಬಂದ ರೋಗಿಯ ಬೇನೆಯನ್ನು ಹೋಗಲಾಡಿಸುವುದು. ಆ ಬೇನೆಯು ರೋಗಿಗೆ ಅವಶ್ಯಕ ವಾಗಿದ್ದರೆ, ನೀನು ಏನು ಹೇಳಿದರೂ ಸಾರ್ಥಕವಾಗುವುದಿಲ್ಲ. ಇಲ್ಲದೆ ಇದ್ದರೆ ರೋಗಿಗೆ ಗುಣವಾಗುತ್ತದೆ. ಇದಕ್ಕೆ ಯಾಕೆ ಯೋಚನೆ? ಅವನಿಗೆ ಗುಣ ಪಡಿಸುತ್ತೇನೆ ಎಂಬ ಅಹಂಕಾರವೇನೂ ಇಲ್ಲವಲ್ಲ. ನನಗೆ ತಿಳಿದದ್ದನ್ನು ಮನಸಾರೆ ಮಾಡುತ್ತೇನೆ ಎಂಬುದೇ ನಿನ್ನ ಪ್ರಯತ್ನವಲ್ಲವೆ?" ಎಂದ. ಇದೇ ಸರಿ ಎಂದು ನನಗೂ ಅನ್ನಿಸಿತು.

ಆದರೆ ಹೇಗೆ ಹೇಳುವುದು? ಆರು ಎಂಟು ತಿಂಗಳಿಂದ ಚಿಕಿತ್ಸೆ ನಡೆಸು ತ್ತಿದ್ದು ಇದ್ದಕ್ಕಿದ್ದ ಹಾಗೆ 'ನಿಮ್ಮ ಮಗು ಚೇಳಿನ ಕಡಿತದಿಂದ ಸತ್ತು ಹೋಯಿತೆ?' ಎಂದು ಹೇಗೆ ಕೇಳುವುದು?

* * *

ಕನ್ನಡ ಸಂಘದವರೊಬ್ಬರು ಆ ತಿಂಗಳು ನನ್ನಲ್ಲಿಗೆ ಬಂದು "ನೀವು ಭಾಷಣಮಾಡಬೇಕು. ವಿಷಯವನ್ನು ನೀವೇ ಆಯ್ಕೆಮಾಡಿಕೊಳ್ಳಿ" ಎಂದು ಆಗ್ರಹದ ವಿನಂತಿ ಮಾಡಿದರು. ಒಪ್ಪಿಕೊಂಡೆ. ಅವಸರದಲ್ಲಿ ಒಪ್ಪಿಕೊಂಡೆ. ಸಂಘದ ಕಾರ್ಯದರ್ಶಿಗಳ ತಮ್ಮನಿಗೆ ನಮ್ಮನೆಯ ಹೆಣ್ಣನ್ನು ಕೊಟ್ಟಿದ್ದೆ. ಅಂದಮೇಲೆ ಹೆಣ್ಣು ಹೆತ್ತವರು ಗಂಡಿನ ಕಡೆಯವರು ಕುಣಿ ಎಂದಾಗಲೆಲ್ಲಾ ಕುಣಿಯಲೇಬೇಕು. ಅವಸರದಲ್ಲಿ ಒಪ್ಪಿಕೊಂಡಾಯ್ತು. ವಿರಾಮವಾಗಿ

ವಿಷಯ ಹುಡುಕಿದೆ. ಇಂತಹ ವಿಷಯ ಮಾತನಾಡು ಅಂದರೆ. ಆ ವಿಷಯದ ಸುತ್ತ ನಮಗೆ ತಿಳಿದದ್ದನ್ನು ಪೋಣಿಸಿ ಹೇಳಬಹುದು. ವಿಷಯವನ್ನೇ ಆಯ್ಕೆ ಮಾಡಿ ಎಂದರೆ ಕೊಂಚ ತೊಂದರೆವಂತ.

"ಅರೆ ! ಯಾಕೆ ಒದ್ದಾಡಬೇಕು ? ತಲೆನೋವಿನ ವಿಷಯವನ್ನೇ ಮಾತನಾಡಿದರಾಯಿತು !" ಅಂತ ಅನ್ನಿಸಿತು. ಅದೇ ವಿಷಯವನ್ನು ಭದ್ರಮಾಡಿದೆ. "ಉಪನ್ಯಾಸಕ್ಕೆ ರಂಗಪ್ಪನವರನ್ನು ಅಧ್ಯಕ್ಷರನ್ನಾಗಿ ಮಾಡಿ. ಆತ ಅನುಭವಸ್ಥರು" ಎಂದು ಸಲಹೆಮಾಡಿದೆ. ಅವರನ್ನು ಒಪ್ಪಿಸಾಯಿತು.

ತಲೆನೋವಿನ ವಿಧಾನವನ್ನು ವಿಶದೀಕರಿಸಿದೆ...ಬೇಸರ ಹುಟ್ಟಿಸುವ ಭಾವವೊಂದು ಮನಸ್ಸಿನಲ್ಲಿ ಸೇರಿಕೊಂಡಾಗ, ಅವನನ್ನು ಆಡಿ ಅಟ್ಟುವಂತೆಯೂ ಇಲ್ಲ, ಅವನ ತಾಪತ್ರಯವನ್ನು ಅನುಭವಿಸುವಂತೆಯೂ ಇಲ್ಲ. ವಿಕ್ರಮಾರ್ಕನಂತೆ ಅವನು ನಮ್ಮ ಕುತ್ತಿಗೆಯ ಮೇಲೆ ಕೂತಿರುತ್ತಾನೆ ಅಂತ ನಾಣ್ಣುಡಿಯಿಲ್ಲವೇ ? ಆಗ ನಮ್ಮ ಕತ್ತು ನೋಯುಕ್ಕೆ ಶುರುವಾಗುತ್ತದೆ...'ಮೊದಲನೇ ಹೆಂಡತಿ ಹೀಗೆ ದುಂಡುಹೆರಳು ಕಟ್ಟಿಕೊಳ್ಳುತ್ತಿದ್ದಳು. ನಿನ್ನ ಹಾಗೆ ಪುರುಚಲು ಜಡೆ ಯನ್ನಲ್ಲ' ಎಂದು ಗಂಡ ಮೂದಲಿಸಿದರೆ, ಎರಡನೇ ಹೆಂಡತಿಗೆ ತಲೆನೋವು ಕಾಣಿಸಿಕೊಳ್ಳಬಹುದು. ಸವತಿಕಾಟ ಅಂತ ಆ ತಲೆನೋವು ಮರೆಯಾಲೂ ಬಹುದು...ಎಂದು ಹೀಗೆ ಒಂದೆರಡು ಉದಾಹರಣೆಗಳನ್ನು ಹೇಳಿ. ಅನಂತರ ಡಾ॥ ಕಣ್ಣಪ್ಪ ಮೊದಲಿಯಾರ್ ಹೇಳಿದ್ದ ಕತೆಯನ್ನೂ ಹೇಳಿದೆ. 'ಅಂತಹವನ ತಲೆನೋವು, ಆಳಮನಸ್ಸಿನ ಪ್ರೇರಣೆಯಿಂದ ತೋರಮನಸ್ಸಿಗೆ ತಿಳಿಯದಂತೆ ಆತನು ಮಾಡಿಕೊಳ್ಳುವ ಪ್ರಾಯಶ್ಚಿತ್ತ' ಎಂದು ವಿಶದೀಕರಿಸಿದೆ.

ಅಧ್ಯಕ್ಷರು ಭಾಷಣಮಾಡುತ್ತಾ "ಡಾಕ್ಟರು ಹೇಳಿದ ವಿಷಯ ಬಹಳ ಗಂಭೀರವಾದುದು. ಮನನಮಾಡಬೇಕಾದುದು. ಇದಕ್ಕಾಗಿ ಭಾಷಣಕಾರರಿಗೆ ನನ್ನ ವಂದನೆಗಳು. ನನ್ನನ್ನು ಅಧ್ಯಕ್ಷನನ್ನಾಗಿ ಬರಮಾಡಿಕೊಂಡವರು ಭಾಷಣಕಾರರು. ಈಗ ನನಗೆ ಅರ್ಥವಾಗುತ್ತಿದೆ. ಯಾತಕ್ಕೆ ನನ್ನನ್ನು ಬರಮಾಡಿಕೊಂಡರು ಅಂತ. ಅದಕ್ಕಾಗಿ ತಿರುಗಿ ಧನ್ಯವಾದಗಳು." ಎಂದು ಪುಟ್ಟ ಭಾಷಣ ಮಾಡಿ ಹೂಮಾಲೆ ಹಾಕಿಸಿಕೊಂಡರು.

ಭಾಷಣ ಮುಗಿದ ಮೇಲೆ ನನ್ನ ಜತೆಯಲ್ಲಿ ರಂಗಪ್ಪನವರೂ ಬಂದರು. "ನಮ್ಮನೆಯಲ್ಲಿ ಹೀಗಾಯ್ತು ಅಂತ ನಿಮಗೆ ಯಾರು ಹೇಳಿದರು ?" ಎಂದು

ಕೇಳಿದರು ರಂಗಪ್ಪ. "ನಿಮ್ಮನೆಯಲ್ಲಿ ಹೀಗಾಯ್ತೇನು ? ಯಾಕೆ ಮೊದಲೇ ಹೇಳಲಿಲ್ಲ ?" ಎಂದು ಏನೂ ತಿಳಿಯಂದವನಂತೆ ಕೇಳಿದೆ. "ಏನೂ ಅಂತ ಹೇಳಿ ಕೊಳ್ಳೋದು. ಅಷ್ಟು ವರ್ಷಗಳಾಯ್ತು, ಇನ್ನೂ ಅದರ ನೆನಪು ಕಾಡುತ್ಯೆ ?" ಎಂದರು. "ಪ್ರಾಯಶ್ಚಿತ್ತ ಸಾಕು ಎಂದೆನಿಸುವ ತನಕ ನಿಮ್ಮ ತಲೆನೋವು ಕಾಡುತ್ತೆ. ಅಥವಾ ಬೇರೆ ತರಹ ಪ್ರಾಯಶ್ಚಿತ್ತ ಮಾಡಿಕೊಂಡರೂ ನಿಮಗೆ ಗುಣವಾಗಬಹುದು" ಎಂದು ಹೇಳಿದೆ. "ಅದು ಹೇಗೆ ?" ಎಂದು ಕೇಳಿದರು.

"ನೋಡಿ, ನಿಮ್ಮ ಮಗುವಿಗೆ ಆದಹಾಗೆ ಇನ್ನೂ ಯಾವುದಾದರೂ ಮಗುವಿಗೆ ಆಗಬಹುದು. ಅನಾಥಾಲಯದಲ್ಲಿರುವ ಮಕ್ಕಳಿಗೆ ಇಂತಹವು ಬೇಕಾದಷ್ಟು ಆಗಬಹುದು. ಕೆರೇಬಿದೀಲೇ ಅನಾಥಾಲಯ ಇದೆ. ಅಲ್ಲಿ ಚೇಳುಗಳ ಕಾಟ ಹೆಚ್ಚು. ನೀವು ಏಕೆ ಅದರ ಕಾರ್ಯದರ್ಶಿಗಳಾಗಿ ಕೆಲಸಮಾಡ ಬಾರದು ? ಆಡಳಿತವರ್ಗದಲ್ಲಿ ನಾನೂ ಒಬ್ಬ ಸದಸ್ಯ. ನೀವು ಆಗಬಹುದು ಎಂದರೆ ಎಲ್ಲರನ್ನೂ ಒಪ್ಪಿಸುತ್ತೇನೆ" ಎಂದೆ.

"ಆಗಬಹುದು, ಡಾಕ್ಟರೇ ! ನನ್ನ ತಲೆನೋವಿಗೆ ಇದೇ ಕಾರಣವಿರ ಬಹುದು ಎಂದು ನನಗೂ ಗುಮಾನಿ ಇತ್ತು. ಈಗ ಎಲ್ಲವೂ ಮಂದಟ್ಟಾಯಿತು. ನನ್ನ ಮಗು ಹೋಯ್ತು ಅಂತ ನನ್ನ ತಲೆಯನ್ನು ಮನಸ್ಸಿನಿಂದ ಕುಟ್ಟಿ ಕೊಳ್ಳುವ ಬದಲು, ಇತರ ಮಕ್ಕಳ ಸೇವೆಯಲ್ಲಿ ಆ ಮನಸ್ಸನ್ನು ಹರಿಸಿದರೆ, ಪ್ರಾಯಶ್ಚಿತ್ತವೂ ಆಯಿತು, ನನ್ನ ತಲೆನೋವೂ ಹೋಯಿತು. ಅಲ್ಲವೆ ?" ಎಂದರು.

"ಅಷ್ಟೆಲ್ಲಾ ಜಾಣರಾಗಿರದಿದ್ದರೆ. ಚಾಣಾಕ್ಷಬುದ್ಧಿ ಇರದಿದ್ದರೆ ನಿಮಗೆ ಈ ಬೇನೆಯೇ ಬರುತ್ತಿದ್ದಿಲ್ಲ. ಮಂದಬುದ್ಧಿಯ ಪುಣ್ಯವಂತರಾಗಿದ್ದರೆ, 'ಮಗು ಹೋಯ್ತು, ಮಗು ಬರುತ್ತೆ' ಎಂದು ಸುಖವಾಗೇ ಇರುತ್ತಿದ್ದಿರಿ. ಬುದ್ಧಿ ಇದ್ದು ವಿಚಾರಮಾಡಿದವರಿಗೇ ತಲೆನೋವು. ನೀವು ತೀರ್ಮಾನಮಾಡಿ ಹೇಳಿದಿರಲ್ಲ, ಅದೇ ಸತ್ಯ" ಎಂದೆ.

ತಲೆನೋವಿಗೆ ರಂಗಪ್ಪ ನನ್ನ ಹತ್ತಿರ ತಿರುಗಿ ಬರಲಿಲ್ಲ. ಅನಾಥಾಲಯ ಸುವ್ಯವಸ್ಥಿತವಾಗಿದೆ.

## ಕಲಿತ ಪಾಠ

ರಂಗಪ್ಪನಿಗೆ ಯಶಸ್ವೀ ಚಿಕಿತ್ಸೆ ಮಾಡಲು ಎಲ್ಲ ಪ್ರಯತ್ನಗಳನ್ನೂ ಮಾಡಿದ್ದೆ. ಆದರೆ ಮೊಮ್ಮಗುವನ್ನು ಕರೆತಂದಾಗ ಯಾಕೆ ಅಷ್ಟು ಹಂಚ್ಚು ಹಂಚ್ಚು ಕಾತುರನಾಗಿದ್ದ ಎಂದು ಯೋಚಿಸಲೇ ಇಲ್ಲ. ಮಗುವಿನ ಸಾವಿನಿಂದ ನೊಂದ ರಂಗಪ್ಪ ಮೊಮ್ಮಗುವಿಗೆ ಸಂದು ಬಂದಾಗ ಹಂಚ್ಚನಂತಾಗಿದ್ದ. ಇದನ್ನು ಗಣನೆಗೆ ತಂದುಕೊಂಡಿದ್ದರೆ, 'ನಿಮ್ಮ ಮನೆಯಲ್ಲಿ ಇನ್ನೂ ಯಾವುದಾದರೂ ಮಗುವಿಗೆ ಆಕಸ್ಮಿಕವಾಗಿತ್ತೆ? ಎಳವು ಬಾದು ಸತ್ತಿತ್ತೆ?' ಎಂದು ಕೇಳ ಬೇಕಾಗಿತ್ತು. ಅಲ್ಲಿ ತಪ್ಪಿದೆ. ತಪ್ಪಿದ ಮೇಲೆ, ಡಾ॥ ಕಣ್ಣಪ್ಪ ಮೊದಲಿಯಾರ್ರು ರಂಗಪ್ಪ ದವಾಖಾನೆಯಿಂದ ಹೋಗಿದ್ದನ್ನು ನೋಡಿ, ನನಗೆ ವ್ಯವಧಾನವಿದ್ದುದನ್ನು ಕಂಡು, ರಂಗಪ್ಪನ ವಿಷಯವನ್ನು ಹೇಳಿದರು. ಭಾಷಣಕ್ಕೆ ಕರೆದಾಗ ಹಿಂದಿನ ತಪ್ಪನ್ನು ನಾಜೂಕಾಗಿ ತಿದ್ದಿಕೊಳ್ಳುವ ಅವಕಾಶ ಸಿಕ್ಕಿತು.

ನಾನು ಮಾಡಿದ ತಪ್ಪನ್ನು ತಿಳಿಸಿಕೊಟ್ಟು, ಆ ತಪ್ಪಿನಿಂದಾದ ಅಜ್ಞಾನವನ್ನು ಡಾ॥ ಕಣ್ಣಪ್ಪ ಮೊದಲಿಯಾರ್ರ ನುಡಿಗಳಿಂದ ನೀಗಿಸಿ, ತಪ್ಪನ್ನು ಸರಿ ಮಾಡಿಕೊಳ್ಳಲು ಅವಕಾಶವನ್ನು ಕಲ್ಪಿಸಿಕೊಟ್ಟು, ಅನಾಥಾಲಯದ ಹಾಗೂ ರಂಗಪ್ಪನ ಹಿತಕ್ಕೆ ನನ್ನನ್ನು 'ನಿಮಿತ್ತ'ವನ್ನಾಗಿ ಮಾಡಿಕೊಂಡ ಆ 'ದೊಡ್ಡ ನಿಮಿತ್ತ'ದ ಜಾಡು ತುಸು ಕಾಣಿಸಿತು.

## ೮. "ಕಾಟಾರಮ್ಮ"

'ಹಸಿವ್ಯೆಯನ್ನು ಕಂಡರೆ ಬಲು ಇಷ್ಟವಂತೆ;
ಎಳೇಬಲಿಯು ಬಲು ರುಚಿಯಂತೆ'

—ಅಜ್ಜಮ್ಮ ಹೇಳಿದಳು.

ಆ ದಿನ ದವಾಖಾನೆಯಿಂದ ಹಿಂದಿರುಗಿದಾಗ ಮಧ್ಯಾಹ್ನ ಒಂದೂವರೆ ಗಂಟೆಯಾಗಿತ್ತು. ಸುಸ್ತಾಗಿದ್ದೆ ಬೇಗ ಊಟ ಮಾಡಿ ವಿಶ್ರಾಂತಿಗೆಂದು ಮಲಗಿದೆ. ಸಂಖವಾದ ನಿದ್ರೆ. ಏನೇನೋ ಅಸ್ಪಷ್ಟ ಕನಸುಗಳು. ಎಲ್ಲೋ ಜೋರಾಗಿ ಜಾಗಟೆ ಬಾರಿಸಿದಂತಾಯಿತು. ಎಚ್ಚರವಾಯ್ತು. ಟೆಲಿಫೋನ್ ಬಡಿದುಕೊಳ್ಳುತ್ತಿತ್ತು. ಮನಸ್ಸಿನಲ್ಲೇ ಶಪಿಸುತ್ತ ರಿಸೀವರನ್ನು ತೆಗೆದುಕೊಂಡೆ.

"ಡಾಕ್ಟರಿದಾರೆಯೇ ಮನೇಲಿ?" ಅಶರೀರವಾಣಿ ಕೇಳಿತು.

"ಇದಾರೆ, ಡಾಕ್ಟರೇ ಮಾತನಾಡ್ತಿದಾರೆ. ಏನು ಬೇಕಾಗಿತ್ತು?" ಅಂದೆ.

"ಡಾಕ್ಟರೇ! ಚಿಕ್ಕಪುಟ್ಟಮ್ಮ 'ಡೇಂಜರ್' ಆಗಿಬಿಟ್ಟಿದ್ದಾಳೆ. ತಕ್ಷಣ ಬರಬೇಕು ನೀವು"—ಆತಂಕದ ಧ್ವನಿ ಕೇಳಿಸಿತು.

"ಏನಾಗಿತ್ರೀ ಚಿಕ್ಕಪುಟ್ಟಮ್ಮನಿಗೆ? ಎಷ್ಟು ದಿವಸದಿಂದ ಕಾಯಿಲೆ ಬಿದ್ದಿದ್ದಾಳೆ? ಏನೇನು ಔಷಧಿ ಮಾಡಿದ್ದೀರಿ? ಯಾವ ಡಾಕ್ಟರು ನೋಡಿಕೋತಿರೋದು?" ಎಂದು ವಿವರಣೆ ಕೇಳಿದೆ.

"ಯಾವ ಡಾಕ್ಟರೂ ಇಲ್ಲ. ಐದು ದಿನಗಳ ಹಿಂದೆ ಗಂಡುಮಗುವನ್ನು ಹೆತ್ತಳು. ಹೆರಿಗೆ ಸುಸೂತ್ರವಾಗಿಯೇ ಆಗಿತ್ತು. ಉಳಿದ ಮೂರು ಮಕ್ಕಳನ್ನು ಹೆರಿಗೆಮಾಡಿಸಿದ ಸೂಲಗಿತ್ತಿಯೇ ಬಂದಿದ್ದಳು. ಈ ದಿನ ಬೆಳಗ್ಗೆಯೆಲ್ಲಾ ಚೆನ್ನಾಗಿದ್ದಳು. ಈಗ ಒಂದು ಗಂಟೆಯಿಂದ 'ಏನೊ ಸಂಕಟ ಆಗ್ತಾ ಇದೆ.

ಎದೆ ಹೊಡಕೋತಾ ಇದೆ. ನಾನಿರುಲ್ಲ. ಸತ್ತುಹೋಗ್ತೀನಿ' ಅಂತೆಲ್ಲಾ ಅಂತಿದಾಳೆ. ಮೈಯೆಲ್ಲಾ ಕಟ್ಟು ಬೆವರಿಟ್ಟಿದೆ. ನೋಡಿದರೆ ಗಾಬರಿ ಆಗುತ್ತೆ. ಬೇಗ ಬನ್ನಿ ಡಾಕ್ಟರೇ."

"ಅಲ್ರೀ! ಹೆತ್ತವರು ಸುಸ್ತಾದರೆ, ಹೆಂಗಸು ಡಾಕ್ಟರನ್ನು ಕರಸಬೇಕು. ನಾನು ಬಂದು ಏನು ತಾನೇ ಮಾಡುಕ್ಕಾಗುತ್ತೆ?" ಎಂದೆ.

"ಹಾಗೇ ಹೇಳಿದೆ, ಡಾಕ್ಟರೇ! 'ಯಾರೂ ಬೇಡ. ಅಪ್ಪಯ್ಯನ್ನೇ ಕರೆಸಿ. ಹೋಗಿ ಕರ್ಕೊಂಡು ಬನ್ನಿ' ಅಂತ ಅಂಗಲಾಚ್ತಾ ಇದಾಳೆ."

*　　　*　　　*

ಸುಮಾರು ೨೦ ವರ್ಷಗಳ ಹಿಂದಿನ ಮಾತು. ಒಂದು ಬೆಳಗ್ಗೆ ದವಾಖಾನೆಗೆ ಮೂರು ವರ್ಷದ ಹೆಣ್ಣುಮಗುವೊಂದು ಬಂದಿತ್ತು. ಏನು ಚೂಟಿ ಹುಡುಗಿ ಅಂತೀರಿ! ಡಾಕ್ಟರು ಅಂತ ಭಯವೇ ಇತ್ತಿಲ್ಲ. ಪುಟಾಣಿ ಪೆಜ್ಜೆ ಹಾಕ್ಕೊಂಡು ಬಂದು 'ಅಪ್ಪಯ್ಯಾ! ನನಗೆ ಜೊರ' ಅಂದಿತ್ತು. ಅದನ್ನೆತ್ತಿ ಕೊಂಡು ತೊಡೇಮೇಲೆ ಕೂರಿಸಿಕೊಂಡು, ಲಲ್ಲೆಮಾತಾಡ್ತಾ ಪರೀಕ್ಷೆಮಾಡಿ ಔಷಧಿಚೀಟಿಯನ್ನು ಅವರಮ್ಮನ ಕೈಲಿ ಕೊಟ್ಟೆ. ನನ್ನ ಬಳಿಯಿಂದ ಹಿಂತಿರುಗಿ ಮಗುವನ್ನು ಕರೆದುಕೊಂಡು ಹೋಗುಕ್ಕೆ ಅವರಮ್ಮ ಪಟ್ಟ ಸಾಹಸ ಅಷ್ಟಿಷ್ಟಲ್ಲ. ಆಮೇಲಿಂದ ವರ್ಷಕ್ಕೋ ತಿಂಗಳಿಗೋ ಒಮ್ಮೆ ಬರಬೇಕಾದಾಗ. ಆ ಹೆಣ್ಣು ಮಗು ಬಂದಾಗ, 'ಅಪ್ಪಯ್ಯಾ!' ಅಂತಲೇ ಕರೆಯುತ್ತಿತ್ತು, ನನ್ನನ್ನ. ಆ ಮಾತನ್ನು ಕೇಳಿದಾಗ ನನಗೇಕೋ ಏನೋ ಒಂದು ತರಹ ಹಿತವಾಗುತ್ತಿತ್ತು. ಆ ಮಗುವಿನ ಮೇಲೆ ತುಂಬಾ ಮಮತೆ. ಯಾವ ಜನ್ಮದ ಯಾವ ಋಣಾನು ಬಂಧವೋ ದೇವರೇ ಬಲ್ಲ.

"ಅಪ್ಪಯ್ಯನ್ನೇ ಕರಸಿ ಅಂತ ಅಂದಳು ಚಿಕ್ಕಪುಟ್ಟಮ್ಮ" ಎಂದಾಗ ಇದೆಲ್ಲಾ ಕ್ಷಣದಲ್ಲಿ ನನ್ನ ನೆನಪಿನ ತೆರೆಯ ಮೇಲೆ ಕಾಣಿಸಿಕೊಂಡಿತು. "ಹೇಗೂ ನಿದ್ರೆ ತಪ್ಪಿತು. ಹೋಗಿಯೇ ಬರೋಣ" ಎಂದಂದುಕೊಂಡು "ಹಳೇ ಮನೇನೆ ತಾನೆ, ಬರ್ತೀನಿ" ಅಂದೆ. "ನೀವು ಬಂದು ತುಂಬಾ ದಿನಗಳಾಯ್ತು, ಡಾಕ್ಟ್ರೇ! ಹೊಸ

ಮನೆಗಳು ತುಂಬಾ ಬಂದಿವೆ. ದೊಡ್ಡಬೀದಿ ಅಂಚೆ ಕಚೇರಿ ಹತ್ತಿರ ಕಾದಿರ್ತೀನಿ" ಎಂದಿತು, ಆ ಟೆಲಿಫೋನಿನ ಆ ತುದಿಯ ದನಿ.

* * *

ಅಂಚೆಕಚೇರಿ ಹತ್ತಿರವೇ ಸೀತಪ್ಪ ಕಾದಿದ್ದ. ಪಕ್ಕದ ಅಂಗಡಿಯವನಿಗೆ 'ಡಾಕ್ಟರ ಕಾರಿನ ಮೇಲೆ ಸ್ವಲ್ಪ ನಿಗಾ ಇಟ್ಟಿರಪ್ಪಾ' ಅಂತಾ ಹೇಳಿ, ನನ್ನ ಬ್ಯಾಗನ್ನು ಹಿಡಿದುಕೊಂಡು ಸೀತಪ್ಪ ಅಡ್ಡರಸ್ತೇಲಿ ಹೊರಟ. ಚಪ್ಪಡಿಕಲ್ಲು ಹಾಸಿದ ಆ ಸಣ್ಣ ರಸ್ತೆಯಲ್ಲಿ ಹುಷಾರಾಗಿ ನಡೆಯಬೇಕಾಗಿತ್ತು. ಕಲ್ಲುಗಳೆಲ್ಲವೂ ಸವೆದು ಸವೆದು ಅಷ್ಟು ನುಣುಪಾಗಿದ್ದುವು.

"ಏನು ಕಾರಣ ಸೀತಪ್ಪ? ಈ ಕಲ್ಲುಗಳೆಲ್ಲಾ ಇಷ್ಟು ಸವೆದುಹೋಗಿವೆ ? ಈ ರಸ್ತೆಯಲ್ಲಿ ಕವಾಡಿಗರೇನಾದರೂ ಇದ್ದಾರೆಯೇ? ದನ ಕರು ಓಡಾಡಿ ಹೀಗೆ ಸವೆದುಹೋಗಿದೆಯೆ ?" ಎಂದು ಕೇಳಿದೆ.

"ಕವಾಡಿಗರ್‍ಯಾರೂ ಇಲ್ಲ ಡಾಕ್ಟರೆ ! ಆದರೆ ಈ ರಸ್ತೆತುದಿಯಲ್ಲಿ ಎದುರಿಗೇ ಕಾಣಿಸುತ್ತಲ್ಲ ಒಂದು ಗರುಡಗಂಬ. ಅದು ಕಾಟಾರಮ್ಮನ ಗಂಡಿಕಂಬ. ಕಾಟಾರಮ್ಮನ ಗುಡಿ ನೂರಾರು ವರ್ಷಗಳ ಹಿಂದಿನಿಂದ ಇದೆ. ಹರಕೆ ಹೊತ್ಕೊಂಡೋರು, ಪೂಜೆಮಾಡಿಸೋರು ಎಲ್ಲಾ ಈ ರಸ್ತೇಲೇ ನಡೆದುಹೋಗ ಬೇಕು. ಅದಕ್ಕೇ ಹಾಸುಗಲ್ಲೆಲ್ಲಾ ನುಣುಪಾಗಿಹೋಗಿದೆ" ಎಂದ ಸೀತಪ್ಪ.

"ಕಾಟಾರಮ್ಮ! ಆ ಹೆಸರೇ ಕೇಳಿಲ್ಲವಲ್ಲ ಸೀತಪ್ಪ? ಕಾಳಿ, ದುರ್ಗಿ, ಚೌಡಿ, ಚಂಡಿ, ಚಾಮುಂಡಿ, ಅಣ್ಣಮ್ಮ, ಮಾರಮ್ಮ; ಎಲ್ಲಾ ಸರಿ ! ಕಾಟಾ ರಮ್ಮ! ಇದರ ಮಹತ್ವ ಏನು ?"

"ದುರ್ಗಿಯ ಒಂದು ಅವತಾರ ಡಾಕ್ಟರೇ ! ಬಲು ಕ್ರೂರ ದೇವತೆಯಂತೆ! ಎಳೆಯದಾಗಿದ್ದ ಬಲಿಯನ್ನು ಮೆಚ್ಚಿಕೋತಾಳಂತೆ, ಅದಕ್ಕೇ ಕೋಳಿಮರಿ, ಚಿಕ್ಕ ಕುರಿ, ಸಣ್ಣ ಕೋಣ, ಇಂತಹವನ್ನೇ ಬಲಿಕೊಡೋದು" ಅಂದ ಸೀತಪ್ಪ.

ಆ ವೇಳೆಗೆ ಸೀತಪ್ಪನ ಮನೆಯ ಬಾಗಿಲಿಗೆ ಬಂದಿದ್ದೆವು. ದಡಬಡ ಗುಟ್ಟುತ್ತಾ ಸೀತಪ್ಪ "ಡಾಕ್ಟರು ಬಂದ್ಬಿಟ್ರಮ್ಮಾ" ಅಂತ ಕೂಗುತ್ತಾ ಮನೆ ಯೊಳಕ್ಕೆ ಹೋದ. ಅವನ ಹಿಂದೆಯೇ ರೋಗಿಯಿದ್ದ ಕೊಠಡಿಗೆ ಹೋದೆ.

ಹಳೆತರಹ ಹೊಲೆವಮನೆಯಲ್ಲ ಅದು. ಕಿಟಕಿಗಳು ತೆರೆದಿದ್ದ, ಬೆಳಕು ಗಾಳಿ ಚೆನ್ನಾಗಿ ಬರುತ್ತಿದ್ದ ಸುಮಾರು ದೊಡ್ಡ ಕೊಠಡಿ. ಮಂಚದ ಮೇಲೆ ಚಿಕ್ಕ ಪುಟ್ಟಮ್ಮ ಮಲಗಿದ್ದಾಳೆ. ಹತ್ತಿರ ಹಾಕಿದ ಕುರ್ಚಿಯ ಮೇಲೆ ಕೂತು ಆಕೆಯ ನಾಡಿ ಹಿಡಿದೆ.

"ಅಪ್ಪಯ್ಯಾ! ಎದೇಲಿ ಏನೋ ಆಗ್ತಾ ಇದೆ. ಗಂಟಲಿನಲ್ಲಿ ಏನೋ ಅದುಮಿದ ಹಾಗಿದೆ. ನಾನು ಬದುಕಲ್ಲ ಅಪ್ಪಯ್ಯಾ!" ಎಂದಳು ಚಿಕ ಪುಟ್ಟಮ್ಮ. ನನ್ನ ಕೈಯನ್ನು ಭದ್ರವಾಗಿ ಹಿಡಿದುಕೊಂಡಳು.

"ಎಂಥಾ ಮಾತಾಡ್ತೀ ಪುಟ್ಟಮ್ಮಾ! ನಿಂಗೆ ಆಗೋದು ಹೇಳು. ಪರೀಕ್ಷೆ ಮಾಡ್ತೀನಿ ಆಮೇಲೆ" ಎಂದೆ.

"ಮಧ್ಯಾಹ್ನದ ತನಕ ಚೆನ್ನಾಗಿದ್ದೆ, ಅಪ್ಪಯ್ಯಾ. ಮೆಣಸಿನ ಸಾರು ಅನ್ನ, ಹಾಲು ಅನ್ನ ಊಟಮಾಡಿದೆ. ಲೇಹ ತಿಂದೆ. ಮಲಗಿಕೊಂಡಿದ್ದೆ. ಇದ್ದಕ್ಕಿದ್ದ ಹಾಗೆ ಎದೆ ಬಡಿಯುಕ್ಕೆ ಶುರುವಾಯ್ತು. ಗಂಟಲು ಒತ್ತುಡಕ್ಕೆ ಶುರುವಾಯ್ತು. ಮೈಯೆಲ್ಲಾ ಬೆವರು ಕಿತ್ತುಕೊಂಡಿತು. ಕೈಕಾಲೆಲ್ಲ ಸೋಲು ಬಂತು. ಗಾಬರಿ, ಅಪ್ಪಯ್ಯಾ! ನಾಲ್ಕು ಜನ ಪುಟ್ಟಮಕ್ಕಳು. ನೋಡಿ ಕೊಳ್ಳೋರು ಯಾರು ಅಪ್ಪಯ್ಯಾ?" ಎಂದಳು.

"ಇಷ್ಟೇ ತಾನೇನೇ! ಇದೇನು ಮಹಾಕಾಯಿಲೆ! ಕೆಟ್ಟ ಕನಸು ಬಿದ್ದರೂ ಹೀಗಾಗುತ್ತೆ! ಊಟಮಾಡಿ ಮಲಗಿದ್ದೆ—ಪಿತ್ತದ ಕನಸು ಬಿತ್ತೇನೋ? ಬೆದರಿ ಎದ್ದಿದಿ; ಹೀಗಾಗಿದೆ. ಮೊದಲಿಂದಲೂ ನಿನಗೆ ಪಿತ್ತಶರೀರ" ಎಂದೆ.

"ಮಲಗಿದ್ದೆ ಅಪ್ಪಯ್ಯಾ. ನಿದ್ರೆ ಬಂದಿರಲಿಲ್ಲ. ಅಜ್ಜಮ್ಮನ ಜತೇಲಿ ಮಾತಾಡ್ತಾನೇ ಇದ್ದೆ. ಜಟ್ಟಂತ ಎದೆಯಮೇಲೆ ಭಾರ ಬಿದ್ದಹಾಗಾಯ್ತು. ಆಮೇಲೆ ಸುಸ್ತಾಯಿತು" ಎಂದಳು.

ದಿಟ, ಬೆವರುತ್ತಾ ಇದ್ದಳು. ಹಣೇನ ಒರಸಿದಷ್ಟೂ ಹನಿ ಕೂಡುತ್ತಿತ್ತು. ನನಗೂ ಸ್ವಲ್ಪ ಮನಸ್ಸಿನಲ್ಲಿ ಗಾಬರಿ ಆಯ್ತು. ಬಾಣಂತಿಯರಲ್ಲಿ ಒಮ್ಮೊಮ್ಮೆ ಹೆಪ್ಪಿಟ್ಟ ರಕ್ತದ ತುಣುಕೊಂದು ಗರ್ಭಕೋಶದಿಂದ ಕಳಚಿಕೊಂಡು ಹರಿದು ಬಂದು ಶ್ವಾಸಕೋಶದ ರಕ್ತನಾಳಕ್ಕೆ ಅಡ್ಡಬೀಳಬಹುದು. ಲಕ್ಷದಲ್ಲಿ ಒಬ್ಬರಿಗೆ ಹೀಗಾಗಬಹುದು. ಹಾಗಾದರೆ ಈ ರೀತಿ ಸುಸ್ತು, ಬೆವರುವುದು, ಕಡೆಗೆ

ಮರಣ. ಆದರೆ ಇವೆಲ್ಲಾ ಒಂದೆರಡು ನಿಮಿಷಗಳಲ್ಲೇ ಮುಗಿದು ಹೋಗು ತ್ತದೆ. ಈಕೆ ೨ ಗಂಟೆಯಿಂದ ನರಳುತ್ತಿದ್ದಾಳೆ. ಆದ್ದರಿಂದ ಅದಿರಲಾರದು. ಪರೀಕ್ಷೆಮಾಡೋಣ– ಅಂತ ಪರೀಕ್ಷೆಮಾಡಲು ಎದ್ದು ನಿಂತೆ.

ನಾಡಿ ವೇಗವಾಗಿ, ನಿಮಿಷಕ್ಕೆ ೧೧೦–೧೨೦ ಬಡಿಯುತ್ತಿತ್ತು. ಆದರೂ ಅವ್ಯವಸ್ಥೆಯಿಂದ ನಡೆಯುತ್ತಿದ್ದಿಲ್ಲ. ಹೃದಯದ ಲಬ್‌ಡಪ್ ಸರಿಯಾಗಿ ತಾಳ ಹಾಕುತ್ತಿತ್ತು. ...ಉಸಿರಾಟವು ಬೇಗ ಬೇಗ ಆಗುತ್ತಿದ್ದರೂ ಶ್ವಾಸಕೋಶಗಳಲ್ಲಿ ಯಾವ ಕಫದ ವಿಕಾರವೂ ಕಾಣಬರಲಿಲ್ಲ...ಹೊಟ್ಟೆಯ ಉಬ್ಬರವಾಗಲೀ, ಲಿವರ್ ದೊಡ್ಡದಾಗಿರುವುದಾಗಲೀ ಕಾಣಲಿಲ್ಲ...ಕಿಬ್ಬೊಟ್ಟೆ ನೋವು, ಸೊಂಟದ ಬೇನೆ, ತೊಡೆ ಛಳಕು ಒಂದೂ ಇಲ್ಲವೆಂದು ಚಿಕ್ಕಪುಟ್ಟಮ್ಮ ಹೇಳಿದ್ದಳು...ಜಲಬಾಧೆ ಮಲಬಾಧೆಗಳೆಲ್ಲ ಸಮರ್ಪಕವಾಗಿ ಆಗಿತ್ತು. ಮಗುವಿಗೆ ಒಂದು ಬಾರಿ ಹಾಲನ್ನೂ ಉಣಿಸಿದ್ದಳು...ನಾಲಿಗೆಯ ಮೇಲೆ ಮಾಂದ್ಯವಿರಲಿಲ್ಲ, ಜ್ವರ ಬಂದಿತ್ತಿಲ್ಲ....ಅಂದಮೇಲೆ ದೇಹದಲ್ಲಿರುವ ಪ್ರಮುಖ ಕಾರ್ಯಗಳೆಲ್ಲಾ ಸುಸೂತ್ರವಾಗಿ ನಡೆದಿವೆ. ಸ್ಥೂಲಪರೀಕ್ಷೆಯಲ್ಲಿ ದೇಹದಲ್ಲಿ ಯಾವ ಹಿರಿದಾದ ಲೋಪದೋಷಗಳೂ ಕಾಣಿಸಲಿಲ್ಲ. ಆದರೂ ಸುಸ್ತಾಗಿದ್ದಾಳೆ. ಅಂದರೆ ಮನಸ್ಸಿನಲ್ಲಿ ಏನೋ ಬೆದರಿರಬೇಕು. ಬೆದರುವ ಹಾಗಾಗುವುದು ಸಾಮಾನ್ಯ ವಾಗಿ ಕೆಟ್ಟಕನಸು ಬೀಳುವುದರಿಂದ. ಆದರೆ ಈಕೆಗೆ ಮಧ್ಯಾಹ್ನ ನಿದ್ದೆಯೇ ಬಂದಿದ್ದಿಲ್ಲವಲ್ಲಾ! ...ಹೀಗೆ ಯೋಚನೆ ಮಾಡುವ ಹೊತ್ತಿಗೆ ಪರೀಕ್ಷೆಮಾಡುವ ಕ್ರಮಗಳೂ ಮುಗಿದಿದ್ದುವು.

ಕುರ್ಚಿಯ ಮೇಲೆ ಕುಳಿತುಕೊಂಡೆ. ಸುಮಾರು ಹತ್ತು ನಿಮಿಷ ಪರೀಕ್ಷೆ ಮಾಡಿದ್ದಿರಬಹುದು. 'ಎಲ್ಲವೂ ಚೆನ್ನಾಗಿದೆಯಲ್ಲೇ ಪುಟ್ಟಮ್ಮಾ!' ಅಂತ ಹೇಳಿದೆ. ಆ ವೇಳೆಗೆ ಬೆವರು ಹನಿಗಟ್ಟುವುದೂ ಸ್ವಲ್ಪ ಕಡಮೆಯಾಗಿತ್ತು. ನಾಡಿಯ ಬಡಿತವೂ ೯೦-೧೦೦ಕ್ಕೆ ಇಳಿದಿತ್ತು. ಅವಳ ಮುಖವೂ ಸ್ವಲ್ಪ ಗೆಲುಮುಖವಾಗಿತ್ತು.

"ನೋಡಮ್ಮ ತಾಯಿ ! ನಿನ್ನ ಹೃದಯ, ಹೊಟ್ಟೆ, ಶ್ವಾಸಕೋಶ ಎಲ್ಲವೂ ಸರಿಯಾಗಿ ಕೆಲಸಮಾಡ್ತಾ ಇದೆ. ಸನ್ನಿಯಿಲ್ಲ, ಜ್ವರ ಇಲ್ಲ, ಆದರೂ ಹೀಗೆ ಸುಸ್ತು ಬಡಿದುಹೋಗಿದ್ದೀ. ಇದಕ್ಕೆ ಯಾವುದೋ ಹೆದರಿಕೆಯೇ ಕಾರಣ, ಕಣಮ್ಮಾ! ಕನಸು ಬಿದ್ದು ಹೆದರುವುದು ಸಾಮಾನ್ಯ. ಅದಾಗಿಲ್ಲ ನಿನಗೆ.

ಆ ಕಾರಣ ನಿನಗೆ ತಿಳಿಯುವ ತನಕ ಹೆದರಿಕೆ ಹೋಗುವುದಿಲ್ಲ. ಅದಕ್ಕೇ ಈಗ ಕೆಲವು ಪ್ರಶ್ನೆಗಳನ್ನು ಕೇಳುತ್ತೇನೆ. ಯೋಚನೆಮಾಡಿ ಜ್ಞಾಪಿಸಿಕೊಂಡು ಉತ್ತರ ಹೇಳು" ಎಂದೆ.

"ಆಗಲಿ ಅಪ್ಪಯ್ಯ!" ಎಂದಳು.

"ನಿನ್ನ ಜಾತಕವನ್ನು ನೋಡಿ ಯಾರಾದರೂ. ನಾಲ್ಕನೇ ಹೆರಿಗೆಯಲ್ಲಿ ತೊಂದರೆ ಅಂತ ಏನಾದರೂ ಹೇಳಿದ್ದರೇನಮ್ಮಾ?"

"ಇಲ್ಲ ಅಪ್ಪಯ್ಯ! ಜಾತಕದ ಪ್ರಕಾರ ಇನ್ನೂ ಐದು ಮಕ್ಕಳ ತಾಯಿಯಾಗಬೇಕು ನಾನು" ಅಂತ ಹುಸಿನಗೆ ತೋರುತ್ತಾ ಹೇಳಿದಳು.

"ಕೈನೋಡಿ ಯಾರಾದರೂ ಆಯುಷ್ಯರೇಖೆ ತುಂಡುಬಿದ್ದಿದೆ. ಶಾಂತಿ ಮಾಡಿ ಅಂತ ಹೇಳಿದ್ದರೇನಮ್ಮಾ?"

"ಕೈತೋರಿಸಿ ಅವಲಕ್ಷಣ ಅಂತ ಅನ್ನಿಸಿಕೊಳ್ಳುಕ್ಕೆ ಹೋಗೋಳಲ್ಲ, ಅಪ್ಪಯ್ಯಾ. ಇದರಲ್ಲೆಲ್ಲಾ ನನಗೆ ನಂಬಿಕೆ ಇಲ್ಲ ಅಂತ ನಿಮಗೂ ಗೊತ್ತಲ್ಲ, ಜಾತಕಾನ ಅಪ್ಪ ಬರಸಿದ್ದರು. ನಾನು ನೋಡಿಸುಕ್ಕೆ ಹೋಗಲಿಲ್ಲ" ಎಂದಳು.

"ಬಸುರಿಯಾಗಿದ್ದಾಗ ಏನಾದರೂ ಹರಕೆ ಹೊತ್ತು ಮರೆತಿದೀನಿ ಅಂತ ಏನಾದರೂ ಭಯವೇನಮ್ಮಾ?" ಎಂದೆ.

"ಇಲ್ಲ ಅಪ್ಪಯ್ಯ! ಹರಕೆ ಹೊರೋ ಅಂತ ಕಷ್ಟಗಳೇ ಬಂದಿಲ್ಲ. ಅಜ್ಜಿ ಇವತ್ತು ಮಧ್ಯಾಹ್ನ ತಪ್ಪುಕಾಣಿಕೆ ಕಟ್ಟಿ 'ಮಗೂಗೆ ಮನೆದೇವರ ಗುಡಿಯಲ್ಲೇ ಮುಡಿ ಕೊಡಿಸ್ತೀವಿ' ಅಂತ ಹರಸಿಕೊಂಡಿದಾಳೆ" ಅಂದಳು.

"ಏನಾದರೂ ಕಾಲುಧೂಳು ಆಗಿತ್ತಾಮ್ಮಾ?" ಎಂದೆ.

"ಮೂರು ವಾರದಿಂದ ಮನೇನೆ ಬಿಟ್ಟು ಹೋಗಿಲ್ಲ ಅಪ್ಪಯ್ಯ! ಇನ್ನು ಕಾಲುಧೂಳು ಏನು ಬಂತು?" ಎಂದಳು.

ವಾಡಿಕೆಯ ಪ್ರಶ್ನೆಗಳನ್ನೆಲ್ಲಾ ಮುಗಿಸಾಯಿತು. ನಿರೀಕ್ಷಿಸಿದ ಉತ್ತರ ದೊರಕಲಿಲ್ಲ. ಕ್ಷೇಮಸಮಾಚಾರದ ಮಾತುಗಳನ್ನಾಡೋಣ ಎಂದುಕೊಂಡು, "'ಗಂಡುಮಗು ಆಯಿತು, ಮೂರು ಹೆಣ್ಣುಗಳಾದ ಮೇಲೆ' ಅಂತ ನಿಮ್ಮವರು ಯಾರ್‍ಯಾರು ಬಂದಿದ್ದರು? ಮಗುವಿನ ಕೈಗೆ ಏನೇನು ಕೊಟ್ಟರು?" ಎಂದು ಲೋಕಾಭಿರಾಮವಾಗಿ ಕೇಳಿದೆ.

"ವಠಾರದವರೆಲ್ಲ ಬಂದಿದ್ದರು. ಎಲ್ಲರೂ ಮಗುವನ್ನು ನೋಡಿ ದೃಷ್ಟಿ ತೆಗೆದು ನೆಟ್ಟಿಗೆ ಮುರಿದು ಹೋದರು. ಅದೇ ಪದ್ಧತಿ" ಎಂದಳು.

"ಬಂದೋರು ಏನೂ ಮಾತನಾಡಲಿಲ್ಲವೆ ?" ಎಂದು ಕೇಳಿದೆ.

"ಬಂದೋರು ನೋಡಿಕೊಂಡು ಹೊರಟುಹೋಗೋ ಅವಸರದಲ್ಲಿ ಇದ್ದರು. ಮೂರನೆ ಮನೆ ಅಜ್ಜಿಯೊಬ್ಬಳೇ ಊರಮಾತನ್ನೆಲ್ಲಾ ಆಡೋಳು."

"ಅಜ್ಜಿ ಏನೇನು ಊರಸಂದ್ದಿ ಹೇಳಿದಳು? ಯಾರ್‍ಯಾರ ಮನೇಲಿ ಏನೇನು ಆಗಬಾರದ್ದು ಆಯಿತು, ಎಂದು ಹೇಳಿದಳು?" ಎಂದು ಕುತೂಹಲ ದಿಂದ ಕೇಳಿದೆ. ಅಪವಾದದ ಮಾತು ಹೊರಿಸುವುದರಲ್ಲಿ ಮುದುಕಿಯರಿಗೆ ಸಾಟಿ ಯಾರೂ ಇಲ್ಲ. ಹೇಳಿಕೇಳಿದ ಮಾತುಗಳನ್ನು ಕೇಳಲು ನನಗೂ ಸ್ವಲ್ಪ ಇಷ್ಟ ಅನ್ನಿ.

''ಅಜ್ಜೀಮಾತು ಕೇಳ್ತೀರಾ ಅಪ್ಪಯ್ಯ? ಕೊನೆಯಿಲ್ಲ, ಮೊದಲಿಲ್ಲ. ಯಾವುದು ಆಡಬೇಕು, ಯಾವುದು ಬಿಡಬೇಕು, ಗೊತ್ತಿಲ್ಲ. ನಂಬಬಹುದೋ ಇಲ್ಲವೋ ಅದೂ ತಿಳಿಯುಲ್ಲ. ಕೇಳಿದ್ದಕ್ಕೆ ರಂಗಂಹಚ್ಚಿ ಆಡಿಬಿಡ್ತಾಳೆ.''

"ಅಲ್ಲಾ ಪುಟ್ಟಮ್ಮಾ! ಅಜ್ಜಿ ಹೇಳಿದ್ದೇನು ಹೇಳಮ್ಮಾ ಅಂತ ಕೇಳಿದರೆ, ನೀತಿ ಹೇಳಂಕ್ಕೆ ಹೊರಟೆಯಲ್ಲಾ" ಎಂದೆ.

ಚಿಕ್ಕಪುಟ್ಟಮ್ಮ ಒಂದು ಕ್ಷಣ ಕೆಂಪೇರಿದಳು. ಅದನ್ನು ಗಮನಿಸದೆ ಇರಲಿಲ್ಲ ನಾನು. ಆಮೇಲೆ ಯಥಾಸ್ಥಿತಿಗೆ ಬಂದಮೇಲೆ ಹೇಳಿದಳು :

"ಮೊನ್ನೆ ಅಜ್ಜಿ ಬಂದಿದ್ದಳು. ತೆಂಗಿನಮರದ ಮನೆ ಬೈರವ್ವನ್ನ ನೋಡುಕ್ಕೆ ಹೋಗಿದ್ದಳಂತೆ. ಬೈರವ್ವ ಗುಡಿಗೆ ಹೋಗಿ ಬಲಿಕೊಟ್ಟು ಬಂದಿದ್ದ ಳಂತೆ. ಕೋಳಿಪಲ್ಯ ಮಾಡಿಸಿದ್ದಳಂತೆ. 'ತಿಂತೀಯಾ ಸ್ವಲ್ಪ ?' ಅಂತ ಕೇಳಿದ ಳಂತೆ. 'ಹಲ್ಲಿಲ್ಲದ ಮುದುಕೀನ ಕೋಳಿಪಲ್ಯ ತಿಂತೀಯಾ ಅಂತ ಕೇಳ್ತಾಳೆ. ನೋಡಿದೆಯಾ ಬೈರವ್ವನ ಢೋಂಗೀನ ?' ಅಂತ ಅಜ್ಜಿ ಬಡಬಡಿಸಿದಳು."

"ನೀನೇನು ಹೇಳಿದೆ ಪುಟ್ಟಮ್ಮಾ ?" ಎಂದು ಕುಮ್ಮಕ್ಕು ಕೊಟ್ಟೆ.

"ಗುಡಿಗೆ ಬೈರವ್ವ ಯಾಕೆ ಹೋಗಿದ್ದಳು ? ಬಲಿ ಯಾಕೆ ಕೊಟ್ಟಳು ? ಅಂತ ಕೇಳಿದೆ."

"ಅದಕ್ಕೇನುವಳು ಅಜ್ಜಿ ?" ಎಂದೆ.

ಬೈರವ್ವನಿಗೆ ಯಾರೋ ಮದ್ದಿಡು ಮಾಡಿದ್ದರಂತೆ. ಆ ಧುಡುಮಿಂ

ಮುಂದುಕೀಗೆ ಯಾರು ಮದ್ದಿಡು ಮಾಡುಕ್ಕೆ ಹೋಗ್ತಾರೋ ಕಾಣೆಮ್ಮಾ. ಆದರೂ ಆಕೆ ಹಾಗೆ ಹೆದರಿಕೊಂಡು ಎಳೆಕೋಳಿ ಜತೆಯನ್ನು ಕಾಟಾರಮ್ಮನಿಗೆ ಬಲಿಕೊಟ್ಟು ಬಂದು, ಆ ಕೋಳಿಪಲ್ಯ ಮಾಡಿ ತಿಂದರೆ, ಮದ್ದೀಡು ನಾಶ ವಾಗುತ್ತೆ ಅಂತ ನಂಬಿ, ಹಾಗೆ ಮಾಡಿದಳು ಅಂತ ಅಜ್ಜಿ ಹೇಳಿದಳು."

"ಕಾಟಾರಮ್ಮನ ಹೊಟ್ಟೇಗೆ ಎರಡು ಎಳೆಕೋಳಿ ಬಲಿ ಸಾಕೇ ಪುಟ್ಟಮ್ಮಾ ?" ಅಂತ ಹಾಸ್ಯಕ್ಕೆ ಕೇಳಿದೆ.

"ಕಾಟಾರಮ್ಮನಿಗೆ ಎಳೆಕೋಳಿ ಕಂಡರೆ ಬಲು ಇಷ್ಟವಂತೆ, ಅಪ್ಪಯ್ಯಾ ! ಅಲ್ಲದೆ ಅಜ್ಜಿಹೇಳಿದಳು : ಅದನ್ನು ತಿಂದಮೇಲೆ ಇನ್ನೇನಾದರೂ ದೊಡ್ಡ ಬಲಿ ಯನ್ನು ತೆಗೆದುಕೊಳ್ಳುತ್ತಾಳೆ. ಕಾಟಾರಮ್ಮನಿಗೆ ಹಸಿಮ್ಮೈಯನ್ನು ಕಂಡರೆ ತುಂಬಾ ಇಷ್ಟ ಅಂತೆ. ಈದ ಹಸು ಬಲು ರುಚಿ ಅಂತೆ. ಮರಿಹಾಕಿದ ಎಮ್ಮೆಯ ಕೊಣನ್ನ ಮುರಿದು ರಕ್ತ ಕುಡಿಯುವುದಕ್ಕೆ ಆಸೆಪಡುತ್ತಾಳೆ ಅಂತ ಹೀಗೆಲ್ಲಾ ಕಾಗಕ್ಕ ಗುಬ್ಬಕ್ಕನ ಕತೇನ ಹೇಳಿದಳು" ಎಂದಳು ಪುಟ್ಟಮ್ಮ. ಮುಖದಲ್ಲಿ ನಗೆಯನ್ನು ಹೂಡಿದ್ದರೂ ಕೈಗಳು ಕಂಪಿಸುತ್ತಿದ್ದುವು.

"ಮೊನ್ನೆ ಅಜ್ಜಿ ಬಂದಿದ್ದಳು. ಈ ಕತೆಯನ್ನೆಲ್ಲಾ ಹೇಳಿದಳು. ನಿನ್ನೆ ಯಾರು ಬಂದಿದ್ದರು ? ಅದನ್ನು ಹೇಳು" ಎಂದೆ.

"ನಿನ್ನೆ ಯಾರೂ ಬಂದಿರಲಿಲ್ಲ, ಅಪ್ಪಯ್ಯಾ !"

"ಇವತ್ತು ಯಾರು ಬಂದಿದ್ದರು, ಪುಟ್ಟಮ್ಮಾ ?"

"ಇವತ್ತು ಯಾರೂ ಬಂದಿರಲಿಲ್ಲ, ಅಪ್ಪಯ್ಯಾ !"

"ಇವತ್ತು ಏನೇನು ಆಯಿತಮ್ಮ ?"

"ಏನೂ ಆಗಲಿಲ್ಲ, ಅಪ್ಪಯ್ಯ !"

"ಬುಡುಬುಡಿಕೆಯವರು ಯಾರಾರೂ ಬಂದಿದ್ದರೇನಮ್ಮ ? ಅವರೇ ನಾದರೂ ಬಾಗಿಲ ಬಳಿ ನುಡಿದುಹೋದರೇ ?"

"ಇಲ್ಲ, ಅಪ್ಪಯ್ಯಾ !"

"ಆ ತರಹ ಇನ್ನೂ ಏನಾದರೂ ಆಯ್ತೇನಮ್ಮ ?"

ಎರಡು ಮೂರು ಸಾರಿ ಒತ್ತಿ ಕೇಳಿದ ಮೇಲೆ "ಮಾಧ್ಯಾಪ್ಪ ಡಂಗೂರ ಸಾರಿಕೊಂಡು ಬೀದೀಲಿ ಹೋದನು, ಅಪ್ಪಯ್ಯಾ !" ಎಂದಳು.

"ಏನಂತ ಡಂಗುರ ಸಾರಿದರಮ್ಮ ?"

"ಕಾಟಾರಮ್ಮನ ಪೂಜೆಗೆ ಕಾಣಿಕೆ ಕೊಡೋರೆಲ್ಲರೂ ಈಗಲೇ ಕೊಡಿ. ಇಲ್ಲದೆ ಇದ್ದರೆ ಅವಳೇ ಬಂದು ಗೋಣುಮುರಿದು ಕಸಿದುಕೊಂಡು ಹೋಗ್ತಾಳೆ" ಎಂದು ಕೂಗಿಕೊಂಡು ಹೋಗ್ತಿದ್ದ, ಕಾಟಾರಮ್ಮನ ಗುಡಿಯ ಜವಾನ."

ಒಂದು ನಿಮಿಷ ಯೋಚಿಸಿದೆ. "ಲಲಿತಾಸಹಸ್ರನಾಮದಲ್ಲಿ ಕಾಟಾರಿಯ ಉಲ್ಲೇಖವೂ ಬಂದಿದೆ, ಪುಟ್ಟಮ್ಮಾ! ಅದರಲ್ಲಿ ಇದೆಲ್ಲ ಹೇಳಿಲ್ಲ" ಎಂದೆ.

ಪುರಾಣ ಪುಣ್ಯಕತೆಗಳಲ್ಲಿ ಅಲ್ಪ ಸ್ವಲ್ಪ ಜ್ಞಾನ ನನಗಿದೆಯೆಂದು ಚಿಕ್ಕ ಪುಟ್ಟಮ್ಮನಿಗೆ ನಂಬಿಕೆ. ಡಾಕ್ಟರಾದರೂ ಕೂಡ ಹಳೆಯ ಸರಳುಗಳನ್ನು ಮರೆತಿಲ್ಲ, ಓದಿದವರು, ಎಂದು ಅವಳು ತಿಳಿದಿದ್ದಳು. "ಲಲಿತಾಸಹಸ್ರನಾಮದಲ್ಲಿ ಏನು ಹೇಳಿದೆ, ಅಪ್ಪಯ್ಯ?" ಎಂದು ಕಾತರದಿಂದ, ಆತುರದಿಂದ ಕೇಳಿದಳು.

"ಕಾಟಾರಮ್ಮನು ಬಲು ಸೌಮ್ಯ ದೇವತೆ. ಮಂತ್ರಾಹಾರಿ ಆಕೆ. ಮಂತ್ರಗಳನ್ನು ಹೇಳಿದರೇ ಆಕೆಯ ಹೊಟ್ಟೆ ತುಂಬುತ್ತದೆ. ಆಕೆಯು ಸುಪ್ರೀತೆಳಾಗುತ್ತಾಳೆ. ಏನನ್ನೂ ತಿನ್ನುವುದಿಲ್ಲ, ಯಾವುದನ್ನೂ ಕುಡಿಯುವುದಿಲ್ಲ, ಎಂದು ವರ್ಣಿಸಿದೆ, ಪುಟ್ಟಮ್ಮಾ" ಎಂದೆ.

"ಅಂದರೆ, ಕಾಟಾರಮ್ಮನಿಗೆ ಬಲಿ ಕೊಡ್ತಾರಲ್ಲ?" ಎಂದಳು ಪುಟ್ಟಮ್ಮ.

"ಅಯ್ಯೋ! ಅದೆಲ್ಲಾ ಈಗಿನವರ ಅಜ್ಞಾನದಿಂದ ಉಂಟಾದುದು. ಅಷ್ಟೇ ಕಣಮ್ಮಾ! 'ಓಂ ನಮಶ್ಶಿವಾಯ' ಮಂತ್ರವನ್ನು ಹೇಳಿದರೆ ಕಾಟಾರಿಗೆ ತುಂಬಾ ಸಂತೋಷವಾಗುತ್ತದೆ" ಎಂದು ಹೇಳಿದೆ.

"ಓಂ ನಮಶ್ಶಿವಾಯ ಮಂತ್ರವನ್ನು ದಿನಾಗಲೂ ಹೇಳ್ತೀನಲ್ಲಾ ಅಪ್ಪಯ್ಯಾ!" ಎಂದಳು.

"ಮತ್ತೆ ಕಾಟಾರಿಯ ಭಯ ನಿನಗೇಕಮ್ಮಾ?" ಎಂದೆ.

"ಹೆದರಬೇಕಾಗಿಲ್ಲ ಅಲ್ಲವೇ ಅಪ್ಪಯ್ಯ? ಓಂ ನಮಶ್ಶಿವಾಯ ಅಂತ ಪ್ರಾರ್ಥನೆ ಮಾಡುತ್ತಿದ್ದರೆ, ಹಸಿವೆಯಿನ ಆಸೆಗೆ ಕಾಟಾರಮ್ಮ ಕತ್ತು ಮುರಿದು ಕೊಂಡು ಹೋಗುಲ್ಲ, ಅಲ್ಲವೇ ಅಪ್ಪಯ್ಯ?" ಎಂದಳು.

"'ಇಂಥಹಂದನ್ನೆಲ್ಲಾ ನಾನು ನಂಬುವವಳಲ್ಲ. ಕಾಲೇಜು ಮೆಟ್ಟಲು ಹತ್ತಿದವಳು' ಅಂದೆಯಲ್ಲೇ ಪುಟ್ಟಮ್ಮಾ?" ಎಂದೆ.

"ಹೌದಲ್ಲಾ ಅಪ್ಪಯ್ಯಾ! ಎಂಥಾ ಪೆಚ್ಚುಹುಡುಗಿ ನಾನು ಎಂದು" ನಕ್ಕಳು.

ಆ ವೇಳೆಗೆ ಆಕೆ ಬೆವರುವುದು ನಿಂತಿತ್ತು, ನಾಡಿ ಸಾಮಾನ್ಯ ಸ್ಥಿತಿಗೆ ಬಂದಿತ್ತು. ಮುಖದಲ್ಲಿ ಕಾತರ ಕಡಮೆಯಾಗಿತ್ತು.

"ಈಗ ಹೇಗಿದೆ ಪುಟ್ಟಮ್ಮಾ? ಸ್ವಲ್ಪ ಕಾಫಿ ಕುಡಿಯುತ್ತೀಯಾಮ್ಮಾ?" ಎಂದೆ. ನನಗೆ ಸ್ವಲ್ಪ ಕಿರುಬೆವರು ಬರುತ್ತಿತ್ತು. ಕಾಟಾರಿಯ ಹೆಸರನ್ನು ಆ ದಿನವೇ ನಾನು ಕೇಳಿದುದು. ಲಲಿತಾಸಹಸ್ರನಾಮದಲ್ಲಿ ನನಗೆ ತಿಳಿದಿರುವ ಒಂದೇ ಹೆಸರು 'ಲಲಿತಾ'. ಧೈರ್ಯ ಹುಟ್ಟಿಸಲು ಒಂದು ಸುಳ್ಳಿನ ಮಾಲೆ ಮೊನ್ನೆ ಕಟ್ಟಿದ್ದೆ. ಪುರಾತನಕಾಲದ ಸೌಮ್ಯಮೂರುತಿ ಕಾಟಾರಮ್ಮನು ಈಚೀಚೆಗೆ ಹೇಗೆ ಬಲಿ ತೆಗೆದುಕೊಳ್ಳುವ ಕ್ರೂರದೇವತೆಯಾದಳು ಎಂದು ವಿವರಿಸಿದ್ದೆ. ದೇವರ ಹೆಸರಿನಲ್ಲಿ ಇಷ್ಟು ಸುಳ್ಳು ಹೇಳಿದ್ದು ನನಗೂ ಸ್ವಲ್ಪ ಭಯ ಹುಟ್ಟಿಸಿತ್ತು.

"ನನಗೆ ಕಾಫಿ ಬೇಡ, ಅಪ್ಪಯ್ಯಾ! ಆದರೆ ನೀವು ಬೆವರತಾ ಇದೀರಿ. ಸುಸ್ತಾಗಿದೀರಿ. ನೀವು ಕಾಫಿ ಕುಡೀರಿ" ಅಂತ ಹೇಳುತ್ತಾ, "ಕಾಫಿ ತಂದುಕೊಡಿ ಅಂದ್ರೆ" ಅಂತ ಸೀತಪ್ಪನಿಗೆ ಸಲಹೆ ನೀಡಿದಳು.

ಚಿಕ್ಕಪುಟ್ಟಮ್ಮನ ಬಾಣಂತನ ಆಮೇಲೆ ಸುಸೂತ್ರವಾಗಿ ನಡೆಯಿತು.

* * *

## ಕಲಿತ ಪಾಠ

ಚಿಕ್ಕಪುಟ್ಟಮ್ಮ ಓದಿದ ಹುಡುಗಿ. ಆದರೂ ಅವಳ ಮನೆಯವರು, ಅವಳಿದ್ದ ಮನೆಯ ಸುತ್ತುಮುತ್ತಲಿದ್ದವರು, ಎಲ್ಲರೂ ಹಳೆಯ ಸಂಪ್ರದಾಯಗಳನ್ನು ಮೂಢನಂಬಿಕೆಯಿಂದ ನಡಸುತ್ತಿದ್ದವರು. ಬಾಲ್ಯದಿಂದಲೂ ಈ ಮೂಢರೂಢಿಗಳು ಅವಳ ತಲೆಯನ್ನು ಹೊಕ್ಕು ಸ್ಥಿರವಾಗಿ ನೆಲೆಗೊಂಡಿದ್ದುವು. ಕಾಟಾರಮ್ಮನಿಗೆ ಹಸಿಮೈಯವರನ್ನು ಕಂಡರೆ ರುಚಿ. ಅಂದರೆ ಬಾಣಂತಿಯರು,

ಹೊಸದಾಗಿ ಮದುವೆಯಾದವರು, ಎಳೆಯ ಪ್ರಾಯದವರು, ಇಂಥವರನ್ನು ಗೋಣುಮುರಿದು ಬಲಿ ತೆಗೆದುಕೊಳ್ಳಲು ಆಕೆಗೆ ಇಷ್ಟ–ಎನ್ನುವ ಮೂಢ ನಂಬಿಕೆಯು ಅವಳಲ್ಲಿ ಮಗುವಾಗಿದ್ದಾಗಿನಿಂದಲೂ ನೆಲೆಸಿತ್ತು.

ಮಾನವನು ಕಾಡುಜೀವನ ನಡೆಸುತ್ತಿದ್ದಾಗ, ಸಮಾಜದ ಸುರಕ್ಷತೆಗಾಗಿ ಇಂತಹ ಮೂಢನಂಬಿಕೆಗಳನ್ನು ಆ ಸಮಾಜದ ಹಿರಿಯರು ಹೂಡಿದ್ದರು. ಇಲ್ಲದಿದ್ದರೆ ಭಯವಿಲ್ಲದೆ ಒಂದೊಂದು ವ್ಯಕ್ತಿಯೂ ಸ್ವೇಚ್ಛೆಯಾಗಿ ವರ್ತಿಸಿ, ಸಮಾಜವನ್ನು ಮುರಿದುಬಿಡುತ್ತಿದ್ದರು. ಅಂದರೆ ತಮ್ಮ ರಕ್ಷಣೆಗಾಗಿ ಕಟ್ಟಿ ಕೊಂಡಿದ್ದ ಸಮಾಜದ ಮೂಲಭೂತ ಉದ್ದೇಶವೇ ನಿರರ್ಥಕವಾಗುತ್ತಿತ್ತು.

ಆದರೆ ಮಾನವನು ಪ್ರಗತಿಹೊಂದಿದಾಗ, ನಾಡು ಜೀವನಮಾಡಲು ಶುರುಮಾಡಿದಾಗಿನಿಂದ ಇಂತಹ ಮೂಢನಂಬಿಕೆಗಳು ಸ್ವಲ್ಪಸ್ವಲ್ಪವಾಗಿ ಮಾಯ ವಾಗಹತ್ತಿತು. ವಿದ್ಯಾಭ್ಯಾಸ, ಪ್ರಕೃತಿಯ ಅರಿವು, ವಿಜ್ಞಾನದ ಮುನ್ನಡೆ ಇವೆಲ್ಲವೂ ಹಳೆಯ ಮೂಢನಂಬಿಕೆಗಳನ್ನು ಸಡಿಲಗೊಳಿಸಿದುವು.

ಚಿಕ್ಕಪುಟ್ಟಮ್ಮನಿಗೆ ಸ್ವಲ್ಪ ವಿದ್ಯಾಭ್ಯಾಸವಾಗಿತ್ತು. ಆದರೆ ಅವಳಲ್ಲಿ ಹುದುಗಿದ್ದ ಮೂಢನಂಬಿಕೆಯನ್ನು ವಿಮರ್ಶಾತ್ಮಕವಿಚಾರಮಾಡಿ ಹೊರದೂಡು ವಷ್ಟು ವಿದ್ಯಾಭ್ಯಾಸವಿರಲಿಲ್ಲ. ಬೆಳೆದುಬಂದ ಮನೆಯಲ್ಲಿ ಆ ತೆರನಾದ ವಾತಾ ವರಣವಿರಲಿಲ್ಲ. ಹೀಗಾಗಿ ಆಕೆಗೆ, ಹೆತ್ತು ಸುಸ್ತಾಗಿರುವಾಗ ಅಜ್ಜಿ ಹೇಳಿದ ಕಾಟಾರಿಯ ವಿಷಯವು ದೊಡ್ಡದಾಗಿ ಕಾಣಿಸಿಕೊಂಡಿತು. ಡಂಗೂರ ಸಾರು ವವನು ಡಂಗೂರವನ್ನು ಕರ್ಕಶವಾಗಿ ಬಾರಿಸುತ್ತ ಕೂಗಿದ್ದು ಅವಳನ್ನು ಬೆದರಿ ಸಿತು. ಅವ್ಯಕ್ತವಾಗಿ ಹುದುಗಿದ್ದ ಮೂಢನಂಬಿಕೆಯು ರಾಕ್ಷಸತ್ವವನ್ನು ತಾಳಿ ಮನಸ್ಸನ್ನು ಅಲ್ಲಾಡಿಸಿತು. ತತ್ಕಾರಣ ಆಕೆಯು ಮೈ ಬೆವರಿಟ್ಟು, ಎದೆಯೊತ್ತಿ, ಕತ್ತು ಅದುಮಿದಂತಾಗಿ, ಗೋಣಿನ ಮೇಲೆ ಕಾಣದಿದ್ದ ಕಾಟಾರಿಯ ಕೈ ಇದೆ ಎನ್ನುವಂತಾಯಿತು.

ಅಂತಹ ಸಂದರ್ಭಗಳಲ್ಲಿ ಒಲವಿನಿಂದ ಮಮತೆಯಿಂದ ಮೊದಲಿನಿಂದಲೂ ಮಾತನಾಡಿಸಿದವರ ಶರಣುಹೋದರೆ ಒಳ್ಳೆಯದಾಗುತ್ತೆ ಎನ್ನುವ ನಂಬಿಕೆಯೂ ಇರುತ್ತದೆ. ಅದಕ್ಕೇ "ಅಪ್ಪಯ್ಯನ್ನ ಏನಾರೂ ಮಾಡಿ ಕರೆಸಿ" ಅಂತ ಬೊಬ್ಬೆ ಇಟ್ಟಿದ್ದು. ನನ್ನನ್ನು ಕಂಡಾಗಲೇ ಆಕೆಗೆ ಅರ್ಧ ಧೈರ್ಯ ಬಂದಿರಬೇಕು. ಮನಸ್ಸಿನ ಚಪಲತೆ ಕಡಮೆಯಾಗಿರಬೇಕು. ಪರೀಕ್ಷೆಮಾಡಿ 'ಎಲ್ಲಾ ಚೆನ್ನಾಗಿದೆ'

ಅಂತ ಹೇಳಿ ಕೂತು ಮಾತನಾಡಿದಾಗ ಮನಸ್ಸು ಸ್ತಿಮಿತಕ್ಕೆ ಬಂದಿದ್ದಿರಬೇಕು. "ಎಷ್ಟೆಲ್ಲಾ ಓದಿದ್ದೀರಿ, ಅಪ್ಪಯ್ಯಾ! ಏನೆಲ್ಲಾ ಸಾಮಂತಿ ಹೇಳತೀರಿ! ನಮ್ಮ ಪುರಾತನ ರೀತಿ ನೀತಿಗಳನ್ನು ಎಷ್ಟು ಚೆನ್ನಾಗಿ ಕಲಿತು ಹೇಳ್ತೀರಿ! ಇದಕ್ಕೆಲ್ಲ ನಿಮಗೆ ವ್ಯವಧಾನ ಎಲ್ಲಿ ಸಿಗಂತ್ತೆ?" ಎಂದು ಆಕೆ ಕಾಲೇಜಿಗೆ ಹೋಗುತ್ತಿದ್ದ ಕಾಲದಲ್ಲಿ ಹೇಳಿದ್ದುಂಟು. ಅಂದಮೇಲೆ ನನ್ನ ಮಾತಿನಲ್ಲಿ ಅಪಾರ ನಂಬಿಕೆ. ಇವೆಲ್ಲವೂ ಕೂಡಿ ಆಕೆಯ ಮನಸ್ಸಿನಲ್ಲಿ ಮನೆಮಾಡಿ ಕೊಂಡಿದ್ದ ಕ್ರೂರ ಕಾಟಾರಿಯನ್ನು ಸೌಮ್ಯಲಲಿತೆಯನ್ನಾಗಿ ಪರಿವರ್ತಿಸಿತು. ಮನಸ್ಸು ನಿರ್ಭಯದಿಂದ ನಿಶ್ಚಿಂತವಾಯಿತು. ದೇಹವು ಸಮಾಧಾನ ಹೊಂದಿತು. ಆಕೆಗೆ ಗುಣವಾಯಿತು.

ಕಾಟಾರಮ್ಮನ ಹೆಸರನ್ನೇ ಆ ದಿನದ ತನಕ ನಾನು ಕೇಳಿದ್ದಿಲ್ಲ. ಅವರ ಮನೆಗೆ ಹೋಗುವಾಗ ಸೀತಪ್ಪ ಯಃಕಶ್ಚಿತ್ ಕಾರಣದಿಂದ ಕಾಟಾರಮ್ಮನ ವಿಷಯ ತಿಳಿಸಿದ್ದ. ಮನೆಗೆ ಹೋದ ಮೇಲೆ ವಾಡಿಕೆಯ ಪ್ರಶ್ನೆಗಳನ್ನು ಕೇಳಿದಾಗ ನಿರೀಕ್ಷಿಸಿದ ಏನೊಂದೂ ಉತ್ತರವೂ ಬರಲಿಲ್ಲ. ಆಗ ಬೇಸತ್ತು. ಏನೋ ಔಷಧಿ ಕೊಟ್ಟು, ಇನ್ಜಕ್ಷನ್ ಚುಚ್ಚಿ ಹಿಂತಿರುಗಬೇಕಾಗಿತ್ತು ನಾನು. ಆದರೆ ಯಾವುದೋ ಮಮಂತೆ, ಯಾರದೋ ಕೈ ನನ್ನನ್ನು ಅಲ್ಲಿ ಕೂಡಿಸಿ, ಲೋಕಾಭಿರಾಮದ ಎರಡು ಮಾತನ್ನಾಡಿಸಿತು. ಆಗ ಚಿಕ್ಕಪುಟ್ಟಮ್ಮನ ಬಾಯಲ್ಲೇ ಕಾಟಾರಿಯ ವಿಷಯ ಹೊರಬಿತ್ತು. "ಅವನು ಡಂಗುರ ಬಾರಿ ಸಿದ್ದಕ್ಕೂ ನನ್ನ ಬೇನೆಗೂ ಏನು ಸಂಬಂಧ? ಇದನ್ನು ಹೇಳಿದರೆ ಡಾಕ್ಟರು ನಗುಲ್ಲವೇ?" ಎಂಬ ಸಂಕೋಚದಿಂದ ಆಕೆ ಡಂಗುರದವನು ಬಂದಿದ್ದುದನ್ನು ನೇರವಾಗಿ ಎಂದೂ ಹೇಳುತ್ತಿರಲಿಲ್ಲ. ಲೋಕಾಭಿರಾಮದ ಮಾತಿನ ಸರಸದಲ್ಲಿ ಆ ವಿಷಯವೂ ಹೊರಬಿತ್ತು. ಅದಾದನಂತರ ನಾನು ಪೋಣಿಸಿದ ಸುಳ್ಳಿನ ಸರವೇ ಅವಳಿಗೆ ಬೆಂಬಲವಾಯ್ತು. ಅವಳಿಗೆ ರಕ್ಷೆಯಾಯಿತು.

ದೇಹದ ವಿಷಯವನ್ನು ಸ್ಥೂಲವಾಗಿ ಅರಿತಿದ್ದೆ, ದಿಟ. ಆದರೆ ಈ ರೀತಿ ದೇಹವು ದಣಿದಾಗ, ಮಾನಸಿಕ ಕಾರಣವನ್ನು ಕಂಡುಹಿಡಿಯಲು ವಿಧಿವತ್ತಾದ ಹಲವಾರು ಮಾರ್ಗಗಳಿವೆ ಸರಿ. ಆ ಮಾರ್ಗಗಳಲ್ಲಿ ಹೋದರೆ ಕಾರಣವನ್ನು ತಿಳಿಯಲು ಮೂರು ತಿಂಗಳಾಗಬೇಕು. ಆ ಹೊತ್ತಿಗೆ ಪ್ರಕೃತಿಯೇ ಚಿಕಿತ್ಸೆ ನಡಸಿರುತ್ತೆ. ಇಲ್ಲವೇ ಬೇನೆ ಉಲ್ಬಣವಾಗಿರುತ್ತೆ.

ಆದರೆ ನನ್ನನ್ನು ಅಲ್ಲಿ ಕೂಡಿಸಿ, ಈ ರೀತಿ ಲೋಕಾಭಿರಾಮವಾಗಿ ಮಾತಾಡಿಸಿದ "ನಿಮಿತ್ತ" ಯಾವುದೋ ಕಾಣೆ.

ಆ **'ಹಿರಿಯ ನಿಮಿತ್ತ'** ಚಿಕ್ಕಪುಟ್ಟಮ್ಮನನ್ನು ಗುಣಪಡಿಸಿತು. ಆಕೆಯ ಮೇಲಿದ್ದ ಮಮತೆಯನ್ನು ಅರಿತೇ ನನ್ನನ್ನು ಗುಣಪಡಿಸುವ 'ನಿಮಿತ್ತ'ವನ್ನಾಗಿ ಬಳಸಿಕೊಂಡಿತು.

ಈ ಹಿರಿಯ ಪಾಠವನ್ನು ಚಿಕ್ಕಪುಟ್ಟಮ್ಮ ನನಗೆ ಕಲಿಸಿದಳು.

ಭಾಗ ೨

# ರೋಗಿಗಳಿಂದ ಕಲಿತ ದೊಡ್ಡ ಪಾಠ

ಒಮ್ಮೆ ಕಣ್ಮರೆಯಾಗಿ
ತಿರುಗಿ ಪ್ರತ್ಯಕ್ಷವಾಗಿ
ಈ ಭಾಗವನ್ನು ಬರೆಯಲು ಉತ್ಸಾಹ ನೀಡಿದ
'ಶಾಂಬು'ವಿಗೆ
ಒಲವಿನ ಬಳುವಳಿ

11605

# ಮೊದಲ ಮಾತು

ದೈಹಿಕ ಬೇನೆಗಳು ಮಾನಸಿಕ ತಾಪತ್ರಯಂಗಳ ವಿಕಟ ರೂಪಾಂತರ ಎಂಬುದನ್ನು ರೋಗಿಗಳ ಕತೆಗಳಿಂದ ತಿಳಿದದ್ದಾಯಿತು. ದೇಹದ ವಿಷಯವು ಸಾಕಷ್ಟು ಮಟ್ಟಿಗೆ ಹಲವಾರು ಪುಸ್ತಕಗಳಲ್ಲಿ ವಿವರಿಸಲ್ಪಟ್ಟಿದೆ. ಆದರೆ, ಮನಸ್ಸನ್ನು ಕುರಿತು, ಮನೋದೈಹಿಕ ಬೇನೆಗಳ ದೃಷ್ಟಿಯಿಂದ ವಿವರಣೆ ಕೊಡುವ ಕನ್ನಡ ಪುಸ್ತಕಗಳು ನನ್ನ ಕಣ್ಣಿಗೆ ಬಿದ್ದಿಲ್ಲ. ಆ ಕಾರಣದಿಂದ ಈ ಭಾಗವನ್ನು ಸರಳವಾದ ಭಾಷೆಯಲ್ಲಿ ಬರೆಯಲು ಯತ್ನಿಸಿದ್ದೇನೆ.

ರೋಗಿಗಳ ಕತೆಗಳಿಂದ ಕುತೂಹಲಗೊಂಡವರು, ಈ ಭಾಗವನ್ನು ಓದಿದರೆ ಪ್ರಯೋಜನ ಪಡೆಯುವರು ಎಂದು ನನ್ನ ನಂಬಿಕೆ.

ಹೇಗೇ ಆಗಲಿ, ಶಂಖ ಊದಿದವನಿಗಾದರೂ ಗೋವಿಂದನ ಪೂಜೆಯಲ್ಲಿ ನಂಬಿಕೆ ದೃಢವಾಗುತ್ತದಲ್ಲವೆ ! ಅಷ್ಟಾದರೂ ಸಾಕು.

ಎಂ. ಶಿವರಾಂ

ಅಧ್ಯಾಯ ಒಂದು

# ಮನೋದೈಹಿಕ ಬೇನೆಗಳು

## ನಿದರ್ಶನಗಳು

ಕೀರ್ತಿಶೇಷ ಕೈಲಾಸಂ ತಮ್ಮ ನಾಟಕವೊಂದರಲ್ಲಿ "ಪಾಪ! ಭೇದಿ ಆಗ್ತಾ ಇತ್ತು ಅವನಿಗೆ; ಆದರೆ ಕಾಲರಾ ಅಂತ ತಿಳ್ಕೊಂಡ್ಬಿಟ್ಟ. ಸತ್ತೇಹೋದ ಕಣ್ರೀ!" ಎಂದು ಕುಹಕಿಡಿಯನ್ನು ಹಾರಿಸಿದ್ದರು. ಆಗ ಜನ ಗಹಗಹಿಸಿ ನಕ್ಕಿದ್ದರು. ನಕ್ಕ ಜನದ ಮನಸ್ಸಿನಲ್ಲಿ "ಕಾಲರಾ ಅಂತ ಅಂದುಕೊಂಡಾಕ್ಷಣ ಸತ್ತುಹೋಗ್ತಾರ್ಯೆ? ಎಲ್ಲಾದರೂ ಹೀಗಾಗೋದುಂಟೆ?" ಎಂದೇ ಅನ್ನಿಸು ವುದು. ಆದರೆ ಕೈಲಾಸಂ ಹೇಳಿದ್ದು ಶತಾಂಶ ಸತ್ಯ. ಕಾಲರಾ ಬಂತು ಅಂತ ಭಯ ಮನಸ್ಸಿನಲ್ಲಿ ತುಂಬಿಕೊಂಡರೆ, ಆಗ ದೇಹದ ಸ್ವಯಂಚಾಲಿತ ರಕ್ಷಣಾ ವಿಧಾನಗಳೆಲ್ಲವೂ ಅಸ್ತವ್ಯಸ್ತವಾಗಿ ಪ್ರಾಣಕ್ಕೇ ಅಪಾಯ ಒದಗಬಹುದು.

ಕಾಲರಾ ಬೇನೆ ಒಂದು ಗ್ರಾಮದಲ್ಲಿ ಹರಡಿತು ಅನ್ನಿ, ಸಾಕಷ್ಟು ತೀವ್ರವಾದ ಕಾಲರಾ ಅನ್ನಿ. ಬೇನೆಯಿಂದ ಸಾಯುವವರಲ್ಲಿ ಹೆಚ್ಚು ಜನರು ದೃಢಕಾಯರಾದ ಮಧ್ಯವಯಸ್ಸಿನವರು. ಮುದುಕರು ಮಕ್ಕಳಲ್ಲಿ ಅಷ್ಟಾಗಿ ಸಾವುಗಳಿರುವುದಿಲ್ಲ. ಮುದುಕರಿಗೆ ಮೊದಲು ಕಾಲರಾ ಬಂದು ಬದುಕಿರ ಬಹುದು. ಹಾಗಾಗಿ ಅವರಿಗೆ ಈ ಸಾರಿ ಕಾಲರಾ ತಟ್ಟಲಿಲ್ಲ ಎಂದು ಕಾರಣ ವನ್ನು ಕೊಡಬಹುದು. ಅದೇ ರೀತಿ ಮಕ್ಕಳು ನೀರನ್ನಾಗಲಿ, ಹಸಿ ತರಕಾರಿ

ಯನ್ನಾಗಲಿ, ಕಾಲರಾ ಹರಡಬಹುದಾದಂತಹ ಇತರ ಸಂಪರ್ಕವನ್ನಾಗಲಿ ಹೆಚ್ಚಾಗಿ ಹೊಂದಿರುವುದಿಲ್ಲ ; ಆದುದರಿಂದಲೇ ಅವುಗಳಲ್ಲಿ ಸಾವು ಕಡಮೆ ಎಂದು ಕಾರಣ ವಿವರಿಸಬಹುದು.

ಹಾಗೂ ಇನ್ನೊಂದು ಕಾರಣ ಮುಖ್ಯವಾಗಿರಬಹುದು. ಕಾಲರಾ ಬೇನೆಯು, 'ಕಾಲರಾ ವಿಬ್ರಿಯೊ' ಎಂಬ ಕ್ರಿಮಿಯಿಂದ ಉಂಟಾಗುತ್ತದೆ. ಸೇವಿಸಲ್ಪಟ್ಟ ಆಹಾರದೊಡನೆ ಕಾಲರಾ ವಿಬ್ರಿಯೋ ಹೊಟ್ಟೆಗೆ ಹೋಗುತ್ತದೆ. ಅಲ್ಲಿರುವ ಹೈಡ್ರೊಕ್ಲೋರಿಕ್ ಆ್ಯಸಿಡ್‌ನಲ್ಲಿ ಕಾಲರಾ ವಿಬ್ರಿಯೋ ಸಾಮಾನ್ಯವಾಗಿ ಭಸ್ಮೀಭೂತವಾಗಬೇಕು. ಹೀಗೆ ಆಗುವುದರಿಂದಲೇ ಕಾಲರಾಜಾಡ್ಯ ಕಾಣಿಸಿ ಕೊಂಡಾಗ ಗ್ರಾಮದಲ್ಲಿರುವ ಎಲ್ಲರಿಗೂ ಕಾಲರಾ ತಾಕುವುದಿಲ್ಲ.

ಆದರೆ ಭಯವು ಮನಸ್ಸನ್ನು ಆವರಿಸಿಕೊಂಡಾಗ, ಹೊಟ್ಟೆಯಲ್ಲಿ ಹೈಡ್ರೊಕ್ಲೋರಿಕ್ ಆ್ಯಸಿಡ್ಡಿನ ಉತ್ಪನ್ನವು ಸ್ತಂಭಿತವಾಗುತ್ತದೆ. ಹಾಗಾದಾಗ ಕಾಲರಾ ವಿಬ್ರಿಯೋಗಳು ಹೊಟ್ಟೆಯಿಂದ ಕರುಳಿಗೆ ಸಾಗಿ ಅಲ್ಲಿ ಬೇಕಾಬಿಟ್ಟಿಯಾಗಿ ಬೆಳೆಯಲು ಸಾಧ್ಯ.

ಮುಂದುಕರಿಗೆ "ಕಾಲರಾ ನನಗೆ ಬಂದರೇನು, ನನ್ನ ಕೆಲಸ ಮುಗಿಯಿತು ; ಹುಡುಗರು ಚೆನ್ನಾಗಿದ್ದರೆ ಸಾಕು" ಎನ್ನುವ ಮನೋಭಾವವಿರುವುದರಿಂದ ಭಯಕ್ಕೆ ಹೆಚ್ಚು ಆಸ್ಪದವಿಲ್ಲ. ಮಕ್ಕಳಿಗಾದರೋ ಅಜ್ಞಾನದಿಂದಾಗಿ ಕಾಲರಾದ ಭಯವೇ ಇರುವುದಿಲ್ಲ. ಆದರೆ ಮಧ್ಯವಯಸ್ಸಿನವರಿಗೆ, 'ಬಾಳಬೇಕು, ಬಾಳಿನ ಜವಾಬ್ದಾರಿ ಹೆಚ್ಚು ಇದೆ' ಎಂದು ಅನ್ನಿಸುವ ಮಧ್ಯವಯಸ್ಸಿನವರಿಗೆ ಕಾಲರಾದ ಭಯ ತೀವ್ರವಾಗಿಯೇ ಇರುತ್ತದೆ. ಹಾಗಾಗಿ ಅವರ ಹೊಟ್ಟೆಯಲ್ಲಿ ಆ್ಯಸಿಡ್ ಉತ್ಪನ್ನವು ನಿಂತಿರುತ್ತದೆ. ಆದುದರಿಂದಲೇ ಅಂತಹ ವಯಸ್ಸಿನವರಲ್ಲೇ ಮರಣಗಳೂ ಹೆಚ್ಚಾಗಿ ಆಗುವುದು.

ಈ ರೀತಿಯಾಗಿ ಕಾಲರಾ ಬಂತು ಅಂತ ಭಯಬಿದ್ದರೆ, ಸತ್ತೇಹೊಗಬಹುದು ಎನ್ನುವುದಕ್ಕೆ ಸಾಕಷ್ಟು ವೈಜ್ಞಾನಿಕವಾದ ಕಾರಣಗಳಿವೆ. ಆದುದರಿಂದಲೇ ಕೈಲಾಸಂ ಹೇಳಿದ್ದರಲ್ಲಿ ಶತಾಂಶ ಸತ್ಯವಿದೆ ಎಂದದ್ದು. ಆದರೆ ಸತ್ಯವಾಗಿರುವುದು ಬಹಳ ಸರಳವಾಗಿಯೂ ಇರುತ್ತದೆ. ಅದಕ್ಕೇ ಜನ ಮೊದಲು ಮೊದಲು ನಗುತ್ತಾರೆಯೇ ವಿನಾ ನಂಬುವುದಿಲ್ಲ. ಆದ್ದರಿಂದಲೇ The

biggest joke is the simplest truth ಅಂತ ಜಾರ್ಜ್ ಬರ್ನಾರ್ಡ್ ಷಾ ಹೇಳಿದ್ದು.

ಮನೋದೈಹಿಕ ಬೇನೆಗಳಿಗೆ ಚಿಕಿತ್ಸೆಮಾಡಬೇಕಾದರೆ ರೋಗಿಯ ಸಂಪೂರ್ಣ ಸಹಕಾರ ಅತ್ಯಗತ್ಯ. ಅವನಿಗೆ ದೈಹಿಕವಾಗಿ ಕಾಣಿಸಿಕೊಂಡಿರುವ ಚಿಹ್ನೆಗಳೆಲ್ಲವೂ ಮನಸ್ಸಿನ ಯಾವುದೋ ಭಯದಿಂದ ಅಥವಾ ಕೊರಗಿನಿಂದ ಉಂಟಾಗಿದೆ ಎಂಬುದನ್ನು ಅವನು ತಿಳಿಯಬೇಕು. ಹಾಗೆ ಅವನು ಅರಿತ ಮೇಲೆ ಚಿಕಿತ್ಸೆಯು ಸಾರ್ಥಕವಾದೀತು. ಹಾಗಾಗಲು ಅವನಿಗೂ ಮನೋದೈಹಿಕ ಬೇನೆಗಳ ಸ್ವರೂಪ ಕಾಣಿಸಬೇಕು, ಅದರ ಸ್ವಭಾವ ತಿಳಿಯಬೇಕು. ಆ ಕಾರಣ-ದಿಂದಲೇ ಈ ಪುಸ್ತಕವನ್ನು ರೋಗಿಗಳ ಕೈಯಲ್ಲಿ ಇಡುತ್ತಿರುವುದು; ಓದಿಕೊಂಡು, ತಿಳಿದು, ಅವರು ತಮ್ಮ ವೈದ್ಯರೊಡನೆ ಸಹಕರಿಸಿ ಗುಣಹೊಂದಲಿ ಎಂದು.

ಆದರೆ, "ನಿನ್ನ ಹೊಟ್ಟೆ ನೋವಿಗೆ ನಿನ್ನ ಮನಸ್ಸಿನ ಆತಂಕವೇ ಕಾರಣ" ಎಂದು ವೈದ್ಯನು ಹೇಳಿದರೆ ರೋಗಿಯು ಸ್ವಾಭಾವಿಕವಾಗಿ ಎದುರು ಬೀಳು-ತ್ತಾನೆ. "ನಾನು ಇಷ್ಟು ಜಾಣ, ನನ್ನ ಕೆಲಸದಲ್ಲಿ ಶಹಣೆ ಅನ್ನಿಸಿಕೊಂಡಿದ್ದೀನಿ, ಬುದ್ಧಿವಂತ ಅಂತ ಅನ್ನಿಸಿಕೊಂಡಿದ್ದೀನಿ. ಅಂತಹ ನನಗೆ ಮನಸ್ಸಿನ ಆತಂಕ್ಯ ಅಂದರೇನು? ಅಷ್ಟು ದುರ್ಬಲವಾದದ್ದೇ ನನ್ನ ಮನಸ್ಸು?" ಎಂದ ಮಾನಸಿಕವಾಗಿಯಾದರೂ ತಿರುಗಿಬೀಳುತ್ತಾನೆ.

ರೋಗಿಯು ಮನಸ್ಸಿನ ಗುಣ, ಚಾಲೂಕು, ಕುಶಾಗ್ರಮತಿ, ಇದನ್ನು ವೈದ್ಯನು ಅಳೆಯುತ್ತಿಲ್ಲ. ಆದರೆ ರೋಗಿಗೆ ಅವ್ಯಕ್ತವಾಗಿರುವ, ಹಾಗಾಗಿರು-ವುದರಿಂದಲೇ ದೈಹಿಕ ಚಿಹ್ನೆಗಳನ್ನು ತೋರ್ಪಡಿಸುತ್ತಿರುವ ಆಳ ಮನಸ್ಸಿನ (subconscious) ಆತಂಕವೋ ಭಯವೋ ಅವನ ಬೇನೆಗೆ ಕಾರಣ ಎಂದು ವೈದ್ಯನು ಸೂಚಿಸಬಯಸುತ್ತಾನೆ.

ಆದರೆ ರೋಗಿಗಳು ಮೊದಲುಮೊದಲು, ಕೈಲಾಸಂನ ಕಾಲರಾ ಕುಹಕಿಡಿ-ಯನ್ನು ಕೇಳಿ ನಕ್ಕಂತೆ ನಗುತ್ತಾರೆಯೇ ಹೊರತು, ನಂಬುವುದಿಲ್ಲ. ಎದುರಿಗೆ ನಗದೇ ಇದ್ದರೂ, "ಈ ವೈದ್ಯನಿಗೆ ಎಲ್ಲೋ ಸ್ವಲ್ಪ 'ಕ್ರಾಕು' ಹಿಡಿದಿದೆ" ಎಂದಂದುಕೊಂಡು ಒಳಗೊಳಗೇ ನಗಬಹುದು. ಹಾಗಾಗಿ ಬೇರೆ ಡಾಕ್ಟರನ್ನು ಹುಡುಕಿಕೊಂಡು ಹೋಗಬಹುದು. ಅಲ್ಲಿ ಕೂಡ ಇದೇ ಪ್ರವರ. ಆದರೆ

ವಿಷಯವನ್ನು ತಿಳಿದುಕೊಂಡರೆ, ಮೊದಮೊದಲು ನಗುವಂತಾಗಿ ನುಬವೆ ಇದ್ದರೂ, ಆಮೇಲೆ, ಮನಸ್ಸಿನಲ್ಲಿ ಹುದುಗಿರುವ ಆತಂಕವು ಯಾವ ರೀತಿಯಲ್ಲಿ ದೈಹಿಕ ಚಿಹ್ನೆಗಳನ್ನು ಪ್ರದರ್ಶಿಸಬಹುದು ಎಂಬುದು ಅರ್ಥವಾಗುತ್ತದೆ. ಆಗ ರೋಗಿಗಳು ವೈದ್ಯರೊಡನೆ ಸಹಕರಿಸುವುದು ಸುಲಭ.

ಮನಸ್ಸಿನಲ್ಲಿ ಹುದುಗಿರುವ ಆತಂಕವು ಹೇಗೆ ವಿವಿಧ ರೀತಿಗಳಲ್ಲಿ ದೇಹದಲ್ಲಿ ಕಾಣಿಸಿಕೊಳ್ಳಬಹುದು ಎಂಬುದನ್ನು ರೋಗಿಗಳ ಕತೆಗಳಲ್ಲಿ ಕಂಡದ್ದಾಗಿದೆ. ಹಾಗೂ ಮನಸ್ಸಿಗೆ ಸಂಕಟವಾಗುತ್ತಿರುವಾಗ (ಉದಾ : ಸಾವು ನೋವು ಉಂಟಾದಾಗ) ದೇಹದ ಸಾಮಾನ್ಯ ಕಾರ್ಯಕ್ರಮಗಳಿಗೆ ಅಡಚಣೆ ಉಂಟಾಗುತ್ತದೆ. (ಉದಾ : ಊಟ ಬೇಡವಾಗುವುದು, ಹಸಿವಾಗದಿರುವುದು ಇತ್ಯಾದಿ) ಇದನ್ನು ನಿತ್ಯಜೀವನದಲ್ಲಿ ಕಾಣುತ್ತಿರುತ್ತೇವೆ.

ಅಂದಮೇಲೆ ಮನಸ್ಸಿನಲ್ಲಿರುವ ಭಯವೋ ಅಥವಾ ಕೊರಗೋ ದೇಹದಲ್ಲಿ ವಿಧವಿಧವಾದ ಬೇನೆಗಳನ್ನು ಉಂಟುಮಾಡಬಹುದು ಎಂದು ತಿಳಿದದ್ದಾಯಿತು. ಅಲ್ಲದೆ ದೇಹದ ವಿಧವಿಧವಾದ ಬೇನೆಗಳು ಮನಸ್ಸಿನ ಮೇಲೆ ಪರಿಣಾಮವನ್ನುಂಟುಮಾಡುವುದನ್ನು ಕಾಣಬಹುದು. ಜ್ವರ ಬಂದು ಸನ್ನಿ ತಾಕಿದಾಗ ಮನಸ್ಸಿನ ಅವ್ಯವಸ್ಥೆಯನ್ನು ಸುಲಭವಾಗಿ ಕಾಣಬಹುದು. ದೇಹದಲ್ಲಿ ನೋವು ಕಾಣಿಸಿಕೊಂಡಾಗ, (ಉದಾ : ಹಲ್ಲುನೋವು ಬಂದಾಗ) ಪುಸ್ತಕವನ್ನು ಓದುವುದೂ ಓದಿ ಅರ್ಥಮಾಡಿಕೊಳ್ಳುವುದೂ ಕಷ್ಟವಾಗುತ್ತದೆ. ಈ ವಿಷಯವನ್ನು ಬೇರೆ ಅಧ್ಯಾಯದಲ್ಲಿ ವಿವರವಾಗಿ ವಿಚಾರ ಮಾಡಲಾಗುವುದು.

ಮಾನಸಿಕ ಅಂತರ್ಭಯವಾಗಲಿ, ಕೊರಗಾಗಲಿ, ಎಲ್ಲರಲ್ಲಿಯೂ ಒಂದೇ ತೆರನಾದ ದೈಹಿಕ ಪರಿಣಾಮವನ್ನು ಉಂಟುಮಾಡುವುದಿಲ್ಲ. ಜನರಲ್ಲಿ ಸಾಮಾನ್ಯವಾಗಿ ಎರಡು ತರಹ ಜಾಯಮಾನದವರನ್ನು ಕಾಣಬಹುದು. ಒಂದು ಗುಂಪಿನವರು ಬಂದ ಕಷ್ಟವನ್ನೆಲ್ಲಾ ಎದುರಿಸಿ ಹೋರಾಡಿ, ಸಮಾಜದಲ್ಲಿ ಒಂದು ಅಂತಸ್ತನ್ನು ಗಳಿಸಿಕೊಳ್ಳುತ್ತಾರೆ. ಇವರಿಗೆ ಆಸೆ ಆಕಾಂಕ್ಷೆಗಳು ಹೊರವಾಗಿರುತ್ತವೆ. ಒಂದೊಂದು ಸಾಧನೆಯೂ ಮುಂದಿನ ಸಾಧನೆಗೆ ಮೆಟ್ಟಲು ಎಂದೇ ತಿಳಿಯುತ್ತಾರೆ. ಇಂದಿನ ಪರಿಸ್ಥಿತಿಯನ್ನು ಕೂಲಂಕಷವಾಗಿ ವಿಚಾರ ಮಾಡಿ, ಮುಂದೆ ಹೀಗೆ ಆಗಬಹುದು ಎಂದು ಊಹಿಸಿ, ತಮ್ಮ ಉದ್ಯಮದಲ್ಲಿ ಮುನ್ನುಗ್ಗುತ್ತಾರೆ. ತಾತ್ಕಾಲಿಕ ಏರುಪೇರುಗಳನ್ನು ಇವರು

ಸಮಾಧಾನದಿಂದ ಎದುರುಗೊಳ್ಳುತ್ತಾರೆ. ಮನಸ್ಸಿನಲ್ಲಿರುವ ಉದ್ವೇಗವನ್ನಾಗಲಿ, ಅತಿಯಾದ ಆಸೆ ಆಕಾಂಕ್ಷೆಗಳನ್ನಾಗಲಿ ಇವರು ಎಂದೂ ಮುಖದಲ್ಲಿ ತೋರ್ಪಡಿಸುವುದಿಲ್ಲ. ಅವಮಾನದ ಪ್ರಸಂಗ ಒದಗಿದಾಗಲೂ ತತ್‌ಕ್ಷಣ ತಿರುಗಿಬೀಳುವುದಿಲ್ಲ. ಮನಸ್ಸಿನಲ್ಲಿಯೇ ಹುದುಗಿಸಿಕೊಂಡು, ಶಕುನಿಯಂತೆ ಯೋಜನೆ ಹೂಡಿ, ಅವಮಾನಪಡಿಸಿದವನ ವಂಶವನ್ನೇ ಬೇರುಸಹಿತ ನಾಶ ಮಾಡುತ್ತಾರೆ. ಈ ಗುಂಪಿನ ಜನರಿಗೇ ಮನೋದೈಹಿಕ ಬೇನೆಗಳು ಹೆಚ್ಚಾಗಿ ತಾಕುತ್ತವೆ ಎಂದು ಹೇಳಬಹುದು.

ಇನ್ನೊಂದು ಗುಂಪಿನವರು ಮಾತಿಗೆ ಮುಂಚೆ ಎಗರಾಡುವ ಜಾಯಮಾನವನ್ನು ಹೊಂದಿರುತ್ತಾರೆ. ಎತ್ತು ಈದಿತು ಅಂದರೆ ಕೊಟ್ಟಿಗೆಗೆ ಕಟ್ಟುವುದಕ್ಕೇ ನುಗ್ಗುತ್ತಾರೆ. ಈ ಗುಂಪಿನವರು ಹೆಚ್ಚಾಗಿ ಮುಂದಾಲೋಚನೆ ಮಾಡುವುದಿಲ್ಲ. ಮಾಡುವ ಸ್ವಭಾವವೇ ಇರುವುದಿಲ್ಲ. ರೇಗಿದಾಗ ಹಿಂದು ಮುಂದು, ಆಗುಹೋಗುಗಳನ್ನು ನೋಡದೆ ಭೀಮಸೇನನ ತರಹಾ ಗದೆಯ ಮೇಲೆ ಕೈಹಾಕುತ್ತಾರೆ. ಇಂತಹ ಜಾಯಮಾನವಿದ್ದವರು ಮನೋದೈಹಿಕ ಬೇನೆಗಳಿಂದ ಹೆಚ್ಚಾಗಿ ನರಳುವುದಿಲ್ಲ ಎಂದು ಹೇಳಬಹುದು.

ಇತ್ತೀಚಿನ ಸಂಶೋಧನೆಗಳಿಂದ, ಈ ರೀತಿ ಜಾಯಮಾನದ ದೃಷ್ಟಿಯಿಂದ, ಎರಡು ಗುಂಪುಗಳಾಗಿ ವಿಂಗಡಿಸುವುದು ಅಸಾಧು ಎಂದು ತಿಳಿಯು ಬಂದಿದೆ. ಎರಡೂ ತೆರನ ಜಾಯಮಾನದವರೂ ಮನೋದೈಹಿಕ ಬೇನೆಗಳಿಗೆ ತುತ್ತಾಗಬಹುದೆಂದೂ. ಅದಕ್ಕೆ ಕಾರಣ ಅವರುಗಳ ವ್ಯಕ್ತಿತ್ವದ ರೂಪರೇಖೆಗಳೆಂದೂ, ಹೊರಗಿನ ಆಚರಣಾ ವಿಧಾನವು ಮುಖ್ಯವಾದುದಲ್ಲವೆಂದೂ ಕಂಡುಬಂದಿವೆ.

ಸಾವಧಾನವಾಗಿ ಯೋಚಿಸಿ ಶಕುನಿಯಂತೆ ಕೆಲಸ ಮಾಡುವವನು ತನ್ನ ಧ್ಯೇಯವನ್ನು ಸಾಧಿಸುವವನು. ಆಂತರಿಕ ಮನಸ್ಸಿನಲ್ಲಿ ಪುಕ್ಕಲುಪುಕ್ಕಲು ಹೆಣ್ಣಿನಂತೆ ಇರುವವನು ಈ ಅತಿ ಹೆಂಗರುಳಂತನವನ್ನು ಮುಚ್ಚಿಡಲೋಸುಗ ಯೋಜನೆ ಹೂಡಿ ತನ್ನ ಜೋರನ್ನು ತೋರ್ಪಡಿಸಿ ಜಯಗಳಿಸುತ್ತಾನೆ ಎಂದು ಹೇಳಲು ಸಾಕಷ್ಟು ಕಾರಣಗಳು ಕಂಡುಬಂದಿವೆ.

ಸಾಕಷ್ಟು ಕಾರಣವಿಲ್ಲದೆ ಹಾರಾಡುವವನಾದರೂ ತನ್ನ ಆಂತರಿಕ ಪುಕ್ಕಲುತನವು, ಹೆಂಗರುಳು, ಪ್ರದರ್ಶಿತವಾದರೂ ಆಗಿಹೋಗಲಿ ಎಂಬ

ಜಾಯಮಾನದವನು. ಆದರೆ ಹಾಗಾದ ಮೇಲೆ "ಅಯ್ಯೋ! ಸಾಕಷ್ಟು ಕಾರಣವಿಲ್ಲದೆ ರೇಗಬಾರದಾಗಿತ್ತು. ಅನಂತರ ಸೋಲನ್ನೊಪ್ಪಿ ನನ್ನ ಪುಕ್ಕಲು ತನವನ್ನು ಪ್ರದರ್ಶಿಸಬಾರದಾಗಿತ್ತು" ಎಂದು ವಿಷಾದಪಡುವನು.

ಹೀಗಾಗಿ ಎರಡು ಗುಂಪಿನವರಿಗೂ ಮನೋದೈಹಿಕ ಬೇನೆಗಳು ತಾಕ ಬಹುದು ಎನ್ನಬೇಕು. ಆದರೆ ಸಾಮಾನ್ಯವಾಗಿ ಮೊದಲ ಗುಂಪಿನವರಿಗೆ, ಆಸೆ ಆಕಾಂಕ್ಷೆಗಳು ಅತಿಯಾಗಿದ್ದವರಿಗೆ, ಮನೋದೈಹಿಕ ಬೇನೆಗಳ ಕಾಟ ಹೆಚ್ಚು ಎನ್ನಬಹುದು.

'ಮನೋದೈಹಿಕ ಬೇನೆಗಳು ಎಂದರೆ ಯಾವುಯಾವುವು? ಸುಲಭವಾಗಿ ಗುರುತಿಸಲು ಸಾಧ್ಯವೆ?' ಎಂದು ಓದುಗರು ಕೇಳುವುದು ಸಹಜ. ಇತ್ತೀಚಿನ ಸಂಶೋಧನೆಗಳಿಂದ ಹೆಚ್ಚುಹೆಚ್ಚಾಗಿ ಸುಮಾರು ಬೇನೆಗಳೆಲ್ಲ ಈ ಗುಂಪಿಗೆ ಸೇರಿವೆಯೆಂದು ಕಂಡುಬರುತ್ತಿದೆ. ಆದುದರಿಂದ ಮನೋದೈಹಿಕ ಬೇನೆಗಳ ಪಟ್ಟಿ ಮಾಡುವುದಕ್ಕಿಂತಲೂ, ಯಾವ ಬೇನೆಗಳು ಮನೋದೈಹಿಕವಾದುವಲ್ಲ ಎಂದು ಪಟ್ಟಿ ಮಾಡುವುದು ಸುಲಭ. ಅವುಗಳಲ್ಲಿ ಮುಖ್ಯವಾದುವು ಮೂರು:

೧. ಹುಟ್ಟುವಾಗಲೇ ಕೂಡುಬಂದ ದೇಹರಚನೆಯಲ್ಲಿನ ಲೋಪದೋಷ ಗಳು. ಉದಾ: ಸೀಳುವಾಯಿ (Hare-Lip); ಹೃದಯರಚನೆಯ ದೋಷ ದಿಂದಾದ ನೀಲಿ ಬಣ್ಣದ ಮಕ್ಕಳು (Congenital Heart Diseases). ಇತ್ಯಾದಿ; ಮತ್ತು ಆನುವಂಶಿಕವಾಗಿ ಬಂದ ಬೇನೆಗಳು.

೨. ಕಾಡುಮೃಗಗಳಲ್ಲಿ ಕಂಡುಬಂದ, ಹಾಗೂ ಮನುಷ್ಯರಿಗೂ ಬರ ಬಹುದಾದ ಕಾಯಿಲೆಗಳು. ಉದಾ: ಜಂತುಹುಳುಗಳು, ಹೇನು, ಕೂರೆ, ಇತ್ಯಾದಿಗಳು.

೩. ಹೊರ ವಾತಾವರಣದಿಂದ ಆಗುವ ಆಕಸ್ಮಿಕಗಳು. ಉದಾ: ಬೆಟ್ಟ ಹತ್ತುವಾಗ ಮೇಲಿನಿಂದ ಬಂಡೆ ಬೀಳುವುದು. ರಸ್ತೆಯಲ್ಲಿ ನಡೆಯುವಾಗ ಸಾಲು ಮರದ ರೆಂಬೆ ಮೇಲೆ ಬೀಳುವುದು. ಭೂಕಂಪದ ಅನಾಹುತಗಳು ಇತ್ಯಾದಿ.

ಮನುಷ್ಯನಿಗೆ ಬರುವ ಮಿಕ್ಕ ಬೇನೆಗಳೆಲ್ಲಾ, ನೇರವಾಗಿಯೋ ಅಥವಾ ಬಳಸಿಯಾಗಿಯೋ, ಮನೋದೈಹಿಕ ಬೇನೆಗಳು ಎಂದು ಹೇಳಬಹುದು.

ದೇಹವು ಪ್ರಕೃತಿಯಲ್ಲಿ ಹೇಗೆ ಬೆಳೆದುಬಂದಿತು, ಯ[illegible] ಹೊಂದಿತು, ಹಾಗೂ ಮನಸ್ಸು ಹೇಗೆ ಬೆಳೆದು ಬಂದಿತು, ಅ[illegible] ಪ್ರಗತಿ ಹೊಂದುತ್ತಿದೆ—ಇದನ್ನು ತಿಳಿದರೆ ಮನೋದೈಹಿಕ ವ್ಯಸನಗಳ ಮೂಲವನ್ನು ತಿಳಿಯಬಹುದು. ತಿಳಿದರೆ ಗುಣ ಮಾಡಿಕೊಳ್ಳಲೂ ಸುಲಭ.

ಆದ್ದರಿಂದ ಜೀವದ ಪ್ರಗತಿ ಹೇಗೆ ಆಗಿದೆ ಎಂಬುದನ್ನು ಸ್ಥೂಲವಾಗಿ ತಿಳಿಯೋಣ.

## ಜೀವದ ಪ್ರಗತಿ

ಪ್ರಕೃತಿಯಲ್ಲಿ ಮೊದಲು ಕಾಣಿಸಿಕೊಂಡ ಜೀವಂತ ವಸ್ತು ವೈರಸ್. ಧಡಾರ, ಸೀತಾಳೆಸಿಡುಬು, ದೊಡ್ಡಸಿಡುಬು, ಅಗ್ನಿಸರ್ಪ ಮೊದಲಾದ ಕಾಯಿಲೆಗಳಿಗೆಲ್ಲ ವೈರಸ್ಸುಗಳೇ ಕಾರಣ. ಸಾಮಾನ್ಯವಾಗಿ ವೈರಸ್ಸುಗಳೆಲ್ಲಾ ಇತರ ಜೀವಂತ ವಸ್ತುಗಳು, ಅಂದರೆ ಪ್ರಾಣಿವರ್ಗದ ಜೀವಿಗಳು ಅಥವಾ ಸಸ್ಯವರ್ಗದ ಗಿಡಬಳ್ಳಿಗಳು, ಇವುಗಳ ಜತೆಯಲ್ಲೇ ಬಾಳಿ ಬದುಕುತ್ತವೆ. ಪ್ರಯೋಗಶಾಲೆಗಳಲ್ಲಿ ಮಾತ್ರ ಅವನ್ನು ರಾಸಾಯಿನಿಕ ವಸ್ತುಗಳ ಮೇಲೆ ಬೆಳಸಬಹುದು. ಪ್ರಕೃತಿಯಲ್ಲಿ ವೈರಸ್ಸುಗಳು ಇತರ ಜೀವಂತವಸ್ತುಗಳೊಡನೆ, ಹಾಗೂ ಅವುಗಳನ್ನು ಅವಲಂಬಿಸಿಯೇ. ಬಾಳಿ ಬದುಕುತ್ತವೆ.

ವೈರಸ್ಸು, ಒಂದು ಒಡೆದು ಎರಡಾಗಿ, ಎರಡು ನಾಲ್ಕಾಗಿ, ಸಂತಾನ ವೃದ್ಧಿಯನ್ನು ಮಾಡಿಕೊಳ್ಳುತ್ತದೆ. ಎಲೆಕ್ಟ್ರಾನ್ ಮೈಕ್ರೊಸ್ಕೋಪ್ ಸಹಾಯದಿಂದ ವೈರಸ್ಸುಗಳನ್ನೂ ಅವುಗಳ ಜೀವನಮಾರ್ಗವನ್ನೂ ಅಭ್ಯಸಿಸಲಾಗಿದೆ.

ವೈರಸ್ಸುಗಳಾದ ಮೇಲೆ ಪ್ರಕೃತಿಯಲ್ಲಿ ಕಾಣಬರುವ ಏಕಾಣುಜೀವಿಯೆಂದರೆ ಅಮೀಬಾ (Amœba). ಕೊಚ್ಚೆನೀರಿನಲ್ಲಿ ವಾಸಿಸುವ ಈ ಏಕಾಣುಜೀವಿಯು, ಹೊರಪೊರೆಯನ್ನು (ನಮಗೆ ಚರ್ಮ ಇರುವಂತೆ) ಹೊಂದಿರುತ್ತದೆ. ಅಮೀಬಾದ ಒಳದೇಹವೆಲ್ಲಾ ಪ್ರೊಟೊಪ್ಲಾಸಂ ಎಂಬ ವಸ್ತುವಿನಿಂದ ತುಂಬಿಕೊಂಡಿದೆ. ನ್ಯೂಕ್ಲಿಯಸ್ ಎಂಬ ಒಂದು ಭಾಗವು, ಅಮೀಬಾದ ಕೆಲಸಕಾರ್ಯಗಳನ್ನೆಲ್ಲಾ ನಡೆಸಿಕೊಡುತ್ತದೆ, (ನಮಗೆ ನಮ್ಮ ಮೆದುಳು ಇದ್ದಹಾಗೆ.) ಅಷ್ಟೇ ಅಲ್ಲ, ಆನುವಂಶಿಕವಾಗಿ ಮುಂದಿನ ಪೀಳಿಗೆಯ ರಚನೆಗೆ ಅವಶ್ಯಕವಾದ

ಸಹಾಯವನ್ನು ಮಾಡುತ್ತದೆ. ಹಾಗೂ ತಾನು ಕಲಿತದ್ದೆಲ್ಲವನ್ನೂ ಮುಂದಿನ ಪೀಳಿಗೆಗೆ ನೆನಪಿನ ಬಳುವಳಿಯಾಗಿ ಕೊಡುವುದಕ್ಕೋಸ್ಕರ ನ್ಯೂಕ್ಲಿಯಸ್ಸಿನಲ್ಲಿರುವ ಜೀನ್ಸ್ (Genes) ಅನ್ನು ಬಳಸಿಕೊಳ್ಳುತ್ತದೆ. ಸುತ್ತಲಿನ ನೀರಿನಿಂದ ತನಗೆ ಬೇಕಾದ ಆಹಾರವನ್ನು ಹೊರಪೊರೆಯಿಂದ ಹೀರಿಕೊಂಡು, ಜೀರ್ಣಿಸಿ ಮಿಕ್ಕ ಅಂಶಗಳನ್ನು ಕನ್ಟ್ರಾಕ್ಟೈಲ್ ವ್ಯಾಕ್ಯುಯೋಲ್–(Contractile Vacuole) ಎಂಬ ಖಾಲಿಯಾಗಿರುವ ಜಾಗದಲ್ಲಿ ವಿಸರ್ಜಿಸುತ್ತದೆ. ಅಮೀಬವು ಒಡಲನ್ನೇ ಅಲ್ಲಿ ಇಲ್ಲಿ ಚಾಚಿ ಓಡಾಡಲೂ ಸಾಧ್ಯವಾಗಿದೆ. ಒಡಲಿನ ಒಂದು ಭಾಗದ ಈ ಚಾಚುವಿಕೆಯನ್ನು Pseudo Podia ಅಥವಾ ಸಬೂಬು ಪಾದಗಳು ಎಂದು ಕರೆಯುತ್ತಾರೆ. ಎಳೆಯ ಮಕ್ಕಳ ತೆವಳಾಟವೂ ಹಾವಿನ ಪರಿದಾಟವೂ ಒಂದು ದೃಷ್ಟಿಯಲ್ಲಿ ಇದೇ ರೀತಿಯದು. ಸುತ್ತಲಿರುವ ನೀರಿನಲ್ಲಿ ವಿಷಪದಾರ್ಥಗಳಿವೆ ಎಂದು ಅಮೀಬಾಕ್ಕೆ ತಿಳಿದರೆ, ಅದು ದೂರ ಓಡಿಹೋಗುತ್ತದೆ. ಹಾಗಾಗಲು ಸಾಧ್ಯವಾಗದೆ ಇದ್ದಾಗ, ಮೃತ್ಯುವು ಖಚಿತವಾದಾಗ, ಹತ್ತರಲ್ಲಿ ಒಂದೋ ಎರಡೋ ಅಮೀಬಾಗಳು ಬೀಜಗಳಂತೆ ಹೆತ್ತುಕೊಂಡು ಗಡುಸಾಗುತ್ತವೆ. ಇವನ್ನು Spores ಎನ್ನುತ್ತಾರೆ. ಈ Spores ತಮ್ಮ ಜೀವನಕ್ರಮವನ್ನು ಅಮೀಬಾಗಳಂತೆ ನಡಸುವುದಿಲ್ಲ. ಒಂದು ರೀತಿಯಾಗಿ ಸಮಾಧಿಸ್ಥಿತಿಯಲ್ಲಿರುತ್ತವೆ. ಸರಿಯಾದ ವಾತಾವರಣ ದೊರಕಿದರೆ, ಹಿತವಾದ ಸರೆಹೊರೆ ಸಿಕ್ಕಿದರೆ, ಆಗ ಪುನಃ Spores ಗಳು ಅಮೀಬಾಗಳಂತೆ ಪರಿವರ್ತನೆಹೊಂದಿ ಬಾಳುತ್ತವೆ. ಬೀಜಗಳಂತೆಯೇನೇ !

ಅಮೀಬಾದ ಒಡಲಿನಲ್ಲಿ ಪ್ರೋಟೀನ್, ಸಕ್ಕರೆ ಪದಾರ್ಥಗಳು, ನೀರು ಇವೆಲ್ಲದರ ರಾಸಾಯನಿಕ ಜೀರ್ಣಕಾರ್ಯಗಳು, ಹೆಚ್ಚು ಕಡಮೆ ನಮ್ಮ ದೇಹದಲ್ಲಿ ನಡೆಯುವಂತೆಯೇ ನಡೆಯುತ್ತದೆ. ಆದರೆ ನಮಗಿರುವಂತೆ ಅಮೀಬಾಕ್ಕೆ 'ಮನಸ್ಸು' ಇದೆಯೇ? ಇಲ್ಲ. ನಮಗೆ ಮೆದುಳಿರುವಂತೆ ಅದಕ್ಕೂ ನ್ಯೂಕ್ಲಿಯಸ್ ಎಂಬ ಕೇಂದ್ರ ಹತೋಟಿಯನ್ನು ಹೊಂದಿರುವ ಅಂಗವಿದೆ. ಆದರೆ ಅನುಭವಗಳನ್ನು ನೆನಪಿನಲ್ಲಿಟ್ಟುಕೊಂಡು ಮುಂದಿನ ದಿನಗಳ ಬಾಳ್ವೆಗೆ ಅನುಕೂಲಮಾಡಿಕೊಳ್ಳುತ್ತದೆಯೇ ? ನಮಗೆ ತಿಳಿದಂತೆ ಅದನ್ನೂ ನ್ಯೂಕ್ಲಿಯಸ್ ನಡಸಿಕೊಡುತ್ತದೆ. ಹೊರಗಿರುವ ವಾತಾವರಣದ ಅರಿವು ಸ್ವಲ್ಪವಾದರೂ ಇರಲೇಬೇಕು. ಆ ಅರಿವಿನ ಸಹಾಯದಿಂದಲೇ ಅದು ಓಡಿಹೋಗುವುದನ್ನಾಗಲಿ,

Spore ಆಗಿ ಗಡೀಸಂಗೊಳ್ಳುವುದನ್ನಾಗಲಿ ಸಾಧಿಸುತ್ತಿರಬೇಕು. ಜೀವ ಶಾಸ್ತ್ರಜ್ಞರು ಈ ಗುಣವನ್ನು Sentience ಎಂದು ಕರೆಯುತ್ತಾರೆ. ಅರಿವು, ಅಸ್ಪಷ್ಟ ಅರಿವು ಎಂಬ ಅರ್ಥಬರುವ ಶಬ್ದವಿದು.

ಜೀವನದ ಪ್ರಗತಿಯಲ್ಲಿ 'ಅಮೀಬಾ'ದ ಅನಂತರ ಕ್ರಾಂತಿಕಾರಕ ಮಾರ್ಪಾಡನ್ನು ಹೊಂದಿದ ಏಕಾಣುಜೀವಿ Paramecium ಅನ್ನು ಕಾಣ ಬಹುದು. ಇದು ಒಡಲಿನ ಸುತ್ತಲಿಂದೆಲ್ಲ ಆಹಾರವನ್ನು ಸೇವಿಸುವುದರ ಬದಲು ಒಂದು ಭಾಗದಿಂದ ಮಾತ್ರ ಸೇವಿಸುವಂತೆ ಏರ್ಪಡಿಸಿಕೊಂಡಿದೆ. ಒಂದು ರೀತಿಯಾಗಿ ಇದನ್ನೇ ಬಾಯಿ ಎನ್ನಬಹುದು.

ಅಮೀಬಾ, ಒಂದು ಇದ್ದುದು ಎರಡಾಗಿ ಒಡೆದು, ಎರಡಾದ ತುಂಡು ಗಳೆರಡೂ ಅಮೀಬಾಗಳಾಗಿ, ಬಾಳುತ್ತ, ಸಂತಾನವೃದ್ಧಿಯನ್ನು ಮಾಡಿಕೊಳ್ಳು ತ್ತದೆ. ಪ್ಯಾರಮಿಸಿಯಂ ಕೂಡ ಇದೇ ರೀತಿ ಬಾಳನ್ನು ನಡೆಸುತ್ತದೆ. ಆವರೆ ಹಲವಾರು ಸಂತಾನಗಳಾದ ಮೇಲೆ Clone ಆಗುತ್ತದೆ. ಏನೋ ಬೇಸರ ತುಂಬಿದಂತೆ ಪ್ಯಾರಮಿಸಿಯಂ ಸ್ತಬ್ಧಗೊಳ್ಳುತ್ತವೆ. ಚಟುವಟಿಕೆಯನ್ನು ತೋರದೆ ಬೆಪ್ಪಾಗುತ್ತದೆ. ಆಗ ಕ್ರಾಂತಿಕಾರಕವಾದ ಪವಾಡವೊಂದು ನಡೆಯು ತ್ತದೆ. ಬೆಪ್ಪುಬಡಿದಿರುವ ಎರಡು ಕ್ಲೋನ್‌ಗಳು ಒಂದನ್ನೊಂದು ಅಪ್ಪಿಕೊಂಡು, ಹೊರಪೊರೆಯನ್ನು ಅಲ್ಲಲ್ಲಿ ವಿಸರ್ಜಿಸಿ, ಒಂದರೊಳಗೆ ಒಂದಾಗಿ, ಕಡೆಗೆ ಒಂದೇ ಆಗುತ್ತದೆ. ಕಾಯಕಲ್ಪಮಾಡಿದಂತಾದ ಈ ಪ್ಯಾರಮಿಸಿಯುಮ್ಮು ಮೊದಲಿನಂತೆ ಅತಿ ಚಟುವಟಿಕೆಯಿಂದ ಬಾಳನ್ನು ನಡೆಸುತ್ತದೆ.

ಎರಡು ಏಕಾಣುಜೀವಿಗಳು ಒಂದಾಗಿ ಮುಂದೆ ಬಾಳುವ ಪ್ರಕೃತಿಯ ರೀತಿನೀತಿಯಲ್ಲಿ, ಪ್ಯಾರಮಿಸಿಯಂ ಮೊದಲನೆಯದು. ಅದಕ್ಕಾಗಿಯೇ ಪ್ಯಾರಮಿಸಿಯಮ್ಮಿನ ಜೀವನವನ್ನು ವೈಜ್ಞಾನಿಕರು ಅತಿ ಸೂಕ್ಷ್ಮವಾಗಿ ಪರಿಶೀಲಿಸುತ್ತಿದ್ದಾರೆ. ಬೆಪ್ಪುಬಡಿವ ಮುಪ್ಪಿನ ಪ್ಯಾರಮಿಸಿಯಂ Clone ಆಗುವುದರ ಮರ್ಮ ತಿಳಿದರೆ, ನಮ್ಮ ಮುಪ್ಪಿನ ಮೂಲಭೂತ ಕಾರಣವನ್ನು ತಿಳಿದಂತಾಗುತ್ತದೆ. ಅಂದರೆ ನಾವುಗಳೂ ಶಾಸ್ತ್ರೀಯವಾಗಿ ಕಾಯಕಲ್ಪ ಮಾಡಿಕೊಂಡು ಯಯಾತಿಯ ತರಹ ಆಗಬಹುದಲ್ಲ!

ಇಂತಹ ಕ್ರಾಂತಿಕಾರಕ ಪವಾಡವನ್ನು ನಡಸಿದ ಪ್ಯಾರಮಿಸಿಯು

ಅಮೀಬಾಕ್ಕಿಂತ ಹೆಚ್ಚಾಗಿ Sentience, ಅಸ್ಪಷ್ಟ ಅರಿವನ್ನು ತೋರಿಸು ತ್ತದೆಯೆ? ಇಲ್ಲ. ಹಾಗೇನಾದರೂ ವ್ಯತ್ಯಾಸವಿದ್ದರೆ, ಅದು ಇಂದಿನ ವೈಜ್ಞಾನಿಕ ಉಪಕರಣಗಳಿಂದ ಕಂಡುಹಿಡಿಯಲು ಸಾಧ್ಯವಾಗಿಲ್ಲ ಎನ್ನಲೂಬಹುದು.

ಏಕಾಣುಜೀವಿಗಳು, ಜೀವನದ ಪ್ರಗತಿಯಲ್ಲಿ ಮುಂದುವರಿದಾಗ ತಮ್ಮ ಒಂಟಿತನದ ವೈಶಿಷ್ಟ್ಯವನ್ನು ಉಳಿಸಿಕೊಂಡು, ಹಾಗೂ ಗುಂಪುಗೂಡಿ ಜೀವನ ನಡೆಸುವ ಏರ್ಪಾಡನ್ನೂ ಮಾಡಿಕೊಂಡವು. ಪಕ್ಷಿಗಳು ವಲಸೆಹೋಗುವಾಗ ಹಿಂಡುಹಿಂಡಾಗಿ ಹಾರಿಹೋಗುವುದಿಲ್ಲವೆ ? ಆದರೂ ಒಂದೊಂದು ಪಕ್ಷಿಯೂ ತನ್ನ ಜೀವನವನ್ನು ತಾನೇ ಮಾಡಿಕೊಳ್ಳುವುದಿಲ್ಲವೆ ? ಆ ರೀತಿಯಲ್ಲಿ ಏಕಾಣು ಜೀವಿಗಳು ಗುಂಪುಜೀವನ ನಡೆಸಲು ಶುರುಮಾಡಿದುವು. ಜೀವನ ಪ್ರಗತಿಯಲ್ಲಿ ಮೊದಲುಮೊದಲು ಕಂಡ ವಿಧಾನವೇ ಅನಂತರವೂ ಮರುಕಳಿಸಿ ಮರುಕಳಿಸಿ ಕಾಣಿಸಿಕೊಳ್ಳುತ್ತದೆ.

ಅನಂತರ ಗುಂಪುಕಟ್ಟಿಕೊಂಡ ಏಕಾಣುಜೀವಿಗಳಲ್ಲಿ ಕೆಲವು ಒಂದು ನಿಯಮಿತ ಕಾರ್ಯವನ್ನು ಮಾಡಲು ಮೀಸಲಾದುವು. ಅವುಗಳು ಆ ಕೆಲಸದಲ್ಲಿ ನೈಪುಣ್ಯವನ್ನು ಪಡೆದುವು. ಹೀಗೆ ಜೀವನಕ್ಕೆ ಬೇಕಾದ ಕಾರ್ಯಗಳನ್ನೆಲ್ಲಾ ಹಂಚಿಕೊಂಡು ಕೆಲಸಮಾಡಲು ಕಲಿತವು.

ಜೇನಿನ ಗೂಡಿನಲ್ಲಿ ಕೆಲವು ಜೇನುಹುಳುಗಳು ಮಧುವನ್ನು ಶೇಖರಿಸುವ ಕೆಲಸಮಾಡುತ್ತವೆ. ಕೆಲವು ಗಂಡುಗಳು ಸಂತತಿಯ ಬೆಳವಣಿಗೆಯ ಕೆಲಸಕ್ಕೆ ಮೀಸಲಾಗಿರುತ್ತವೆ. ಧಡೂತಿಯಾಗಿ ಬೆಳೆದ ಹೆಣ್ಣೊಂದು ಮಕ್ಕಳನ್ನು ಹೆತ್ತು ಗೂಡನ್ನು ತುಂಬಿಡುವ ಕೆಲಸವೊಂದರಲ್ಲೇ ಮಗ್ನವಾಗಿರುತ್ತದೆ. ಅದೇ ರೀತಿ ಏಕಾಣುಜೀವಿಗಳಲ್ಲೂ ಗುಂಪುಜೀವನ ಅನ್ನುವುದಕ್ಕಿಂತ ಸಂಘಜೀವನ ಪ್ರಾರಂಭ ವಾಯಿತು ಎನ್ನಬಹುದು. ಆಗ ಒಂಟಿತನದ ವೈಶಿಷ್ಟ್ಯವನ್ನು ಸ್ವಲ್ಪ ಮಟ್ಟಿಗೆ ಕಳೆದುಕೊಂಡತಾಯಿತು. ಪ್ರಕೃತಿಯಲ್ಲಿ ಪ್ರಗತಿಯನ್ನು ಹೊಂದುತ್ತ ಹೊಂದುತ್ತ ಸಂಘಜೀವನ ನಡಸಿದ ಏಕಾಣುಗಳಲ್ಲಿ, ಎರಡು ಕೂಡಿಕೊಂಡು ಒಂದೇ ಅಣು ಜೀವಿಯಂತೆ ಬಾಳಲು ಶುರುಮಾಡಿತು. ಅದೇ ರೀತಿ ಮುಂದುವರಿದು ಹಲವಾರು ಅಣುಗಳು ಒಂದು ಅಣುಜೀವಿಯಂತೆ ಹೊರಪೊರೆಯೊಂದರಲ್ಲಿ ಆವರಿಸಲ್ಪಟ್ಟು ಬಾಳಲು ಆರಂಭಿಸಿದುವು. ಹೀಗಾದಮೇಲೆ ನಿಯಮಿತ ಕೆಲಸಗಳನ್ನು ಮಾತ್ರ ಮಾಡಲು ಕಲಿತ "ಅಂಗಾಂಗಗಳ" ಬೆಳವಣಿಗೆಯೂ ಆರಂಭವಾಯಿತು.

ನೀರಿನಲ್ಲಿ ವಾಸಮಾಡುತ್ತಿದ್ದ ಮೊದಮೊದಲಿನ ಜೀವಿಗಳು ಈ ರೀತಿ ಪ್ರಗತಿಹೊಂದಿ, ಅಮೀಬಾ ಪ್ಯಾರಮೀಶಿಯಂಗಳಿಂದ ಹಿಡಿದು ಸಸ್ತನಿಗಳಾದ ತಿಮಿಂಗಿಲಗಳ ತನಕ, ವಿಧವಿಧ ದೇಹರಚನೆಯ ವಿಧವಿಧ ರೂಪವುಳ್ಳ ಪ್ರಾಣಿಗಳ ಜನ್ಮಕ್ಕೆ ಕಾರಣವಾದುವು. ಎಂಟುಂ ಕಾಲುಳ್ಳ ಪುಟಾಣಿ ಏಡಿಕಾಂಗ್, ಮನುಷ್ಯ ನನ್ನು ಅಪ್ಪಿ ಪ್ರಾಣ ತೆಗೆಯುವ ಶಕ್ತಿಸಾಮರ್ಥ್ಯವುಳ್ಳ ಎಂಟು ಬಾಹುಗಳ ಆಕ್ಟೋಪಸ್. ೮೦-೧೦೦ ಅಡಿ ಉದ್ದವಿರುವ ಅನಕೊಂಡಾ ಹಾವುಗಳು, ವಿದ್ಯುಚ್ಛಕ್ತಿಯನ್ನು ಉತ್ಪಾದಿಸಿ ಅದರಿಂದ ಮೀನುಗಳಿಗೆ ಷಾಕ್ ಹೊಡೆಸಿ ಸುಸ್ತುಮಾಡಿ ತಿನ್ನುವ ಎಲೆಕ್ಟ್ರಿಕ್ ಈಲ್ ಎಂಬ ಮೀನುಗಳು, ತಲೆತಗ್ಗಿಸದೆ ಮನುಷ್ಯನು ನಡೆದು ಹೋಗಬಹುದಾದಷ್ಟು ದೊಡ್ಡದಾಗುವ ಬಾಯುಳ್ಳ ರಾಕ್ಷಸಮೀನುಗಳು, ಮೊಸಳೆಗಳು ! ನೀರಿನಲ್ಲಿ ಬೆಳೆದುಬಂದ ಜೀವಿಗಳ ವಿವಿಧತೆಗೆ ಬಡತನವುಂಟೇ ?

ಕಾಲಾನುಕ್ರಮದಲ್ಲಿ ನೀರಿನಲ್ಲಿದ್ದ ಜೀವಿಗಳು ನೆಲದ ಮೇಲೆ ವಲಸೆ ಹೋಗಿ ಬಾಳಲಾರಂಭಿಸಿದುವು. ಕೆಲವು ಕಾಲ ನೀರಿನಲ್ಲಿ ಸಹಜವಾಗಿರುವಂತೆ ನೆಲದ ಮೇಲೆ ಕೂಡ ಸಹಜವಾಗಿ ಜೀವಿಸಲು ಕಲಿತ ಪ್ರಾಣಿಗಳು ಪ್ರಕೃತಿಯಲ್ಲಿ ಕಂಡುಬಂದುವು. ಉದಾಹರಣೆಗೆ ಕಪ್ಪೆಗಳು, ಬಾತುಕೋಳಿಗಳು, ಕೆಲವು ಜಾತಿಯ ಹಾವುಗಳು.

ನೆಲದ ಮೇಲೆ ಉಳಿದುಕೊಂಡು ಅಲ್ಲೇ ಪ್ರಗತಿಹೊಂದಿದ ಮೇಲೆ ನಮ್ಮ ಸುತ್ತಮುತ್ತಲೂ ಇರುವ ಪ್ರಾಣಿಗಳು ಕಾಣಿಸಿಕೊಂಡವು. ಎರೆಹುಳು ಅಥವಾ ಮಣ್ಣುಹುಳುವಿನಿಂದ ಕಾಳಿಂಗಸರ್ಪದ ತನಕ, ಚಿಟ್ಟೆಗಳಿಂದ ಗಿಡಗನ ತನಕ, ಅಳಿಲಿನಿಂದ ಆನೆಯ ತನಕ, ಮಂಗದಿಂದ ಮನುಷ್ಯನ ತನಕ, ವೈವಿಧ್ಯದ ಸೊಬಗಿಗೆ ನೆಲದ ಜೀವಿಗಳಲ್ಲಿ ಬಡತನವೇ ?

ಈ ಎಲ್ಲ ಪ್ರಾಣಿಗಳಲ್ಲೂ, ವಾತಾವರಣಕ್ಕೆ ಹೊಂದಿಕೊಂಡು, ಸಿಗಬಹು ದಾದುದನ್ನು ಆಹಾರವನ್ನಾಗಿ ಬಳಸಿಕೊಳ್ಳುವ ಜಾಣತನ ಕಂಡುಬರುತ್ತದೆ. ಆ ಜಾಣತನವಿರದಿದ್ದರೆ. ಅವು ಈತನಕ ಉಳಿಯುತ್ತಲೇ ಇರಲಿಲ್ಲ. ಜಾಣತನ ವಿಲ್ಲದೆ ನಾಶವಾದ ಪ್ರಾಣಿಗಳ ಸಂಖ್ಯೆ ಎಷ್ಟೋ ! ಹಾಗಾಗಿದೆ ಎಂದು ತಿಳಿಸು ವುದಕ್ಕೆ ಈಗ ಸಿಕ್ಕಿರುವ ನಿದರ್ಶನಗಳೇ ಸಹಸ್ರಾರು ಇವೆ. ಸುತ್ತಮುತ್ತಲಿರುವ ವಾತಾವರಣದಲ್ಲಿ ಶತ್ರುಗಳು ಯಾರು, ಯಾವುದನ್ನು -ಸಸ್ಯವರ್ಗದ್ದೇ ಆಗಿರಲಿ,

ಪ್ರಾಣಿವರ್ಗಕ್ಕೆ ಸೇರಿರಲಿ, ಅವನ್ನು-ಆಹಾರವನ್ನಾಗಿ ಉಪಯೋಗಿಸಬಹುದು. ಸ್ವಂತ ರಕ್ಷಣೆಗಾಗಿ ಯಾವ ಯಾವ ಏರ್ಪಾಡನ್ನು ಮಾಡಿಕೊಳ್ಳಬಹುದು. ಇವೆಲ್ಲವನ್ನೂ ಪ್ರಾಣಿಗಳು ಸ್ವಾಭಾವಿಕವಾಗಿ ಕಲಿತವು, ಕಲಿಯಲೇ ಬೇಕಾಯ್ತು.

ಈ ಜಾಣತನವೆಲ್ಲಾ ಪ್ರಾಣಿಗಳ ಯಾವ ಅಂಗಗಳಲ್ಲಿದೆ? ಜೀವನ ಪ್ರಗತಿಯಲ್ಲಿ ಮುಂದುವರಿದಂತೆಲ್ಲಾ ಈ ಜಾಣತನವು ಹೆಚ್ಚುಹೆಚ್ಚಾಗಿ ಕಂಡು ಬಂದಿದೆಯೆ? ಹಾಗಾದರೆ ಜಾಣತನವು ಇರಬಹುದಾದ ಅಂಗ ಯಾವುದು? ಅದು ಪ್ರಗತಿ ಹೊಂದುತ್ತ ಹೋಗಿದೆಯೇ? ಇವೆಲ್ಲಾ ಸಹಜವಾದ ಪ್ರಶ್ನೆಗಳು. ಅಂತಹ ಅಂಗವೇ ಮೆದುಳು, ಜನ್ಮಜನ್ಮಾಂತರದ ಅನುಭವಗಳನ್ನೂ ಆ ಅನುಭವಗಳಿಂದ ಕಲಿತ ಪಾಠಗಳನ್ನೂ ನೆನಪಿನಲ್ಲಿಟ್ಟುಕೊಂಡು ಮುಂದುವರಿದ ಅಂಗವೆಂದರೆ ಮೆದುಳು! ಮೆದುಳಿನ ವಿವರಗಳೇನು? ಅದು ಪ್ರಕೃತಿಯಲ್ಲಿ ಹೇಗೆ ಮುಂದುವರಿಯುತ್ತಿದೆ ನೋಡೋಣ.

## ಮೆದುಳು

ಪ್ರಕೃತಿಯಲ್ಲಿರುವ ಪ್ರಾಣಿಗಳಲ್ಲಿ ನೂರಕ್ಕೆ ೯೫ರಷ್ಟು ಬೆನ್ನೆಲುಬುಗಳನ್ನು ಹೊಂದಿರುವುದಿಲ್ಲ. ಅಂದರೆ ಬೆನ್ನೆಲುಬು ಇರುವ ಪ್ರಾಣಿಗಳು ಪ್ರಕೃತಿಯಲ್ಲಿ ನೂರಕ್ಕೆ ೫ರಷ್ಟು ಮಾತ್ರ.

ಬೆನ್ನೆಲುಬು ಇಲ್ಲದ ಪ್ರಾಣಿಗಳಲ್ಲಿ ದೇಹದ ಅಂಗಾಂಗಗಳಿಗೆ ಶೀಘ್ರ ಸಂಪರ್ಕವನ್ನು ಉಂಟುಮಾಡಲು ನರಗಳೂ, ನರದ ಕೇಂದ್ರಗಳೂ ದೇಹದಲ್ಲೆಲ್ಲಾ ಇರುತ್ತವೆ. ಆದರೆ ಪ್ರಗತಿ ಹೊಂದಿದ ಹಾಗೆಲ್ಲಾ ಎರಡೋ ಒಂದೋ ದೊಡ್ಡ ನರಗಳು ದೇಹದುದ್ದಕ್ಕೂ ಹಾದು, ಅಕ್ಕಪಕ್ಕಕ್ಕೆ ಕಿರುನರಗಳನ್ನು ಹಾಯಿಸುತ್ತವೆ. ಹಾಗಾಗಿ ದೇಹದ ಎಲ್ಲ ಭಾಗಗಳಿಗೂ ಸಂಪರ್ಕವನ್ನು ಕಲ್ಪಿಸಿಕೊಡುತ್ತದೆ.

ಆದರೆ ಬೆನ್ನೆಲುಬು ಇರುವ ಪ್ರಾಣಿಗಳಲ್ಲಿ, ಬೆನ್ನೆಲುಬಿನಲ್ಲಿ ದೊಡ್ಡನರವು ಸುರಕ್ಷಿತವಾಗಿರಿಸಲ್ಪಟ್ಟು, ಶಾಖೆಗಳೆಲ್ಲವೂ ಬೆನ್ನೆಲುಬುಗಳ ಮಧ್ಯದಲ್ಲಿರುವ ಕಂಡಿಗಳಿಂದ ದೇಹದೊಳಕ್ಕೆ ಒದಗಿಸಲ್ಪಟ್ಟವು. ಈ ನರವೇ ಸ್ಪೈನಲ್ ಕಾರ್ಡ್ (Spinal Cord).

ಪ್ರಗತಿಯು ಮುಂದುವರಿದಂತೆಲ್ಲಾ ಸ್ಪೈನಲ್ ಕಾರ್ಡಿನ ತಲೆಯ ತುದಿಯಲ್ಲಿರುವ ಕೆಲವು ನರಕೇಂದ್ರಗಳು ತಲೆಯೊಳಗೇ ಸುರಕ್ಷಿತವಾಗಿರಿಸಲ್ಪಟ್ಟವು. ಮೆದುಳಿನ ಮೂಲವನ್ನೇ ಇಲ್ಲಿ ಕಾಣಬಹುದು. ದೇಹದ ಅಂಗಾಂಗಗಳಿಗೆ ಸಂಪರ್ಕಮಾಡಿಕೊಡುವ ಹಿರಿಯ ಹೊಣೆಯನ್ನು ತಲೆಯಲ್ಲಿರುವ ಈ ನರದ ಕೇಂದ್ರಗಳು ವಹಿಸಿಕೊಂಡವು. ದೇಹದ ಹೊರಗಿನ ವಾತಾವರಣದ ಸುದ್ದಿಯನ್ನು ಪಂಚೇಂದ್ರಿಯಗಳ ಮೂಲಕ ಪಡೆದು, ದೇಹದಲ್ಲಿ ಅಗತ್ಯವಾದ ಸಿದ್ಧತೆಗಳನ್ನು ಮಾಡಿಸಲು ಈ ಮೆದುಳು ಹೊಣೆ ಹೊತ್ತಿತ್ತು. ಹಾಗೂ ದೇಹದೊಳಗಿರುವ ಎಂಡೋಕ್ರೈನ್ ಗ್ಲಾಂಡ್ಸ್ (Endocrine Glands) ಗಳ ದ್ರವದಿಂದ ರಾಸಾಯನಿಕ ಸಂಪರ್ಕವನ್ನು ಪಡೆದು ಮೆದುಳು ಸೂಕ್ತಕ್ರಮಗಳನ್ನು ತೆಗೆದುಕೊಳ್ಳುತ್ತಿತ್ತು.

ನೀರಿನಲ್ಲಿ ವಾಸಿಸುವ ಮೀನುಗಳು, ನೀರಿನಲ್ಲಿಯೂ ನೆಲದಲ್ಲಿಯೂ ವಾಸಿಸುವ ಕಪ್ಪೆ ಇತ್ಯಾದಿಗಳು, ನೆಲದ ಮೇಲೆ ವಾಸಿಸುವ ಹಲ್ಲಿ, ಹಾವು ಇತ್ಯಾದಿಗಳು, ಇವುಗಳ ಮೆದುಳಿನ ರಚನೆಯು ಸುಮಾರು ಒಂದೇ ರೀತಿಯಾಗಿದೆ. ಹೊರಗಿನ ವಾತಾವರಣದೊಡನೆ ಅಹರ್ನಿಶಿ ಹೋರಾಟ ನಡಸಿ ಪ್ರಕೃತಿಯು ಈ ಮೆದುಳನ್ನು ರಚಿಸಿಕೊಂಡಿತು. ಹಾಗೆ ಮಾಡುವಾಗ ಲಕ್ಷಗಟ್ಟಲೆ ಪ್ರಯೋಗಗಳನ್ನು ಅಯಶಸ್ವಿಯಾದ ಕಾರಣ ಬಲಿಕೊಟ್ಟಿತು.

ಆದರೆ ಪ್ರಕೃತಿಯಲ್ಲಿ ಸಸ್ತನಿಗಳು (Mammals) ಆರಂಭವಾದಾಗ ಮಕ್ಕಳ ಪೋಷಣೆಯನ್ನು ತಾವೇ ಸ್ವಲ್ಪ ಹೆಚ್ಚು ಕಾಲ ನೋಡಿಕೊಳ್ಳುವಂತಾದಾಗ ಮೆದುಳಿನ ಹೊಣೆಗಾರಿಕೆಯೂ ಹೆಚ್ಚಾಯಿತು. ಅಥವಾ ಮೆದುಳು ಪ್ರಗತಿ ಹೊಂದಿ ಪ್ರಾಣಿಗಳಿಗೆ ಹೆಚ್ಚು ರಕ್ಷಣೆ ಕೊಟ್ಟಿದ್ದರಿಂದಲೇ, ಅವು ಸಸ್ತನಿಗಳಾಗಿ. ಮಕ್ಕಳು ಮರಿಗಳ ಹೊಣೆಯನ್ನು ಸ್ವಲ್ಪ ಹೆಚ್ಚು ಕಾಲ ವಹಿಸಿಕೊಳ್ಳುವಂತಾಯಿತು ಎನ್ನಬಹುದು. ಈ ಪ್ರಗತಿಯು ಮೆದುಳಿನಲ್ಲಿ ಹೇಗೆ ಸಾಧಿಸಲ್ಪಟ್ಟಿತು ?

ಒಂದು ಉದಾಹರಣೆಯಿಂದ ಇದನ್ನು ತಿಳಿಯೋಣ.

ಕಾಡಿನಲ್ಲಿ ಹುಲ್ಲೆಯೊಂದು ಗರಿಕೆಯನ್ನು ತಿನ್ನುತ್ತಿದೆ ಅನ್ನೋಣ. ದೂರದಲ್ಲಿ ಯಾವುದೋ ಪಟ್ಟೆಪಟ್ಟೆಯು ಅಲ್ಲಾಡಿದಂತೆ ಕಾಣಿಸಿತು ಅನ್ನಿ. ಹುಲಿ ಇರಬಹುದು ಅಂತ, ಅದಕ್ಕೆ ಆನುವಂಶಿಕವಾಗಿ ಬಂದಿದ್ದ ನೆನಪು ಎಚ್ಚರ

ಕೊಡುತ್ತದೆ. ಆಗ ಹುಲ್ಲೆಯು ಸತ್ತೆನೋ ಕೆಟ್ಟೆನೋ ಎಂದು ಬೇರೆ ದಿಕ್ಕಿನ ಕಡೆಗೆ ಓಡಿಹೋಗಬೇಕು. ಪಟ್ಟೆಪಟ್ಟೆ ಅಲ್ಲಾಡಿದಂತೆ ಕಾಣಿಸಿದ್ದೆಲ್ಲಾ ಹುಲಿಯೇ ಆಗಿರ ಬೇಕಾಗಿಲ್ಲವಲ್ಲ ! ಕೆಲವು ಪೊದೆಗಳ ಎಲೆಗಳು ಗಾಳಿಗೆ ಅಲ್ಲಾಡಿದರೂ ಹಾಗೆಯೇ ಕಾಣಿಸಬಹುದಲ್ಲ ! ಅನುವಂಶಿಕವಾಗಿ ಈ ನೆನಪು ಕೂಡ ಹುಲ್ಲೆಗೆ ಬಂದಿರುತ್ತದೆ. ಆದುದರಿಂದ ಹುಲ್ಲೆಯು ಜಟ್ಟಂತ ಓಡಿಹೋಗದೆ, ಓಡುವುದಕ್ಕೆ ಬೇಕಾದ ಎಲ್ಲ ಸಿದ್ಧತೆಗಳನ್ನು ದೇಹದಲ್ಲಿ ಮಾಡಿಕೊಂಡಿದ್ದರೂ ನಿಮಿರಿ ನಿಂತು, ಕಣ್ಣು, ಕಿವಿ, ಮೂಗು ಮೂರನ್ನೂ ಪಟ್ಟೆಪಟ್ಟೆ ಕಾಣಿಸಿದ ಕಡೆಗೆ ಚಾಚಿರುತ್ತದೆ. ಹುಲಿ ಎನ್ನುವ ಇನ್ನು ಯಾವುದಾದರೂ ಸಾಕ್ಷ್ಯವು ಅದರ ಮೆದುಳಿಗೆ ದೊರಕುವತನಕ ನಿಂತಲ್ಲಿಯೇ ಸ್ತಬ್ಧವಾಗಿ ನಿಂತಿರುತ್ತದೆ. ಹುಲಿ ಅಲ್ಲ ಎಂದು ಖಂಡಿತವಾದರೆ, ಹುಲ್ಲು ಮೇಯಲು ತೊಡಗುತ್ತದೆ. ವಾಸನೆಯಿಂದಲೋ, ಸಪ್ಪಳದಿಂದಲೋ, ಅಥವಾ ಮುಖವೇ ಕಾಣಿಸುವುದರಿಂದಲೋ, ಅದು ಹುಲಿ ಎಂದು ತಿಳಿದರೆ. ತಕ್ಷಣ ಹುಲ್ಲೆಯು ಬೇರೆ ದಿಕ್ಕಿನತ್ತ ನಾಗಾಲೋಟ ಓಡಿಬಿಡುತ್ತೆ. ಅಂದರೆ ಪಂಚೇಂದ್ರಿಯಗಳ ಮೂಲಕ ಹುಲಿ ಎಂದು ಅನುಮಾನ ಬಂದಕೂಡಲೆ ಓಡುವುದಿಲ್ಲ.

ಸಸ್ತನಿಗಳ ಹಿಂದಿನ ಪೀಳಿಗೆಯ ಪ್ರಾಣಿಗಳು ಕಣ್ಣಿಗೆ ಪಟ್ಟೆಪಟ್ಟೆಗಳು ಕಂಡಕೂಡಲೆ ಓಡಿಬಿಡುತ್ತಿದ್ದುವು. ಆದರೆ ಸಸ್ತನಿಗಳ ಮೆದುಳು, ಅನುಮಾನ ಖಂಡಿತವಾಗುವ ತನಕ, ಸ್ವಾಭಾವಿಕವಾಗಿ ಓಡುವ ದೇಹದ ಕಾರ್ಯಕ್ರಮವನ್ನು ತಡೆಯುತ್ತದೆ. ಈ ಹತೋಟಿ ಕಾರ್ಯಕ್ರಮದಿಂದ ಸಸ್ತನಿಗಳ ಬಾಳು ಎಷ್ಟೋ ಸಂಧಾರಿತವಾಯಿತು. ತಮ್ಮ ದೈನಂದಿನ ಕಾರ್ಯಗಳನ್ನು ಮಾಡಲು, ಅಂದರೆ ಊಟಕ್ಕೆ ಹಾಗೂ ಕೂಟಕ್ಕೆ, ಹೆಚ್ಚು ಕಾಲ ದೊರಕಿತು.

ಈ ರೀತಿಯಾಗಿ ದೇಹದಲ್ಲಿ ಸ್ವಾಭಾವಿಕವಾಗಿ ಸ್ವಯಂಚಾಲಿತವಾಗಿ ನಡೆಯುತ್ತಿದ್ದ ಕಾರ್ಯಕ್ರಮಗಳ ಮೇಲೆ ಹತೋಟಿ ಹೊಂದಿದುದು, ಮೆದುಳಿನ ಪ್ರಗತಿಯಲ್ಲಿ ದೊಡ್ಡ ಹೆಜ್ಜೆ.

ಮೆದುಳು ಇಂತಹ ಹತೋಟಿಯನ್ನು ಯಶಸ್ವಿಯಾಗಿ ನಡೆಸಬೇಕಾದರೆ ಹಳೆಯ ನೆನಪುಗಳನ್ನೂ ಹಿಂದಿನ ಅನುಭವಗಳನ್ನೂ ಸಂಗ್ರಹಿಸಿಟ್ಟುಕೊಂಡು, ಅವುಗಳ ನೆರವನ್ನು ಶೀಘ್ರವಾಗಿ ಪಡೆಯುವ ವ್ಯವಸ್ಥೆಯನ್ನು ಮಾಡಿಕೊಳ್ಳ ಬೇಕಾಯಿತು. ಹೀಗಾಗಿ ನೆನಪುಗಳನ್ನು ಸಂಗ್ರಹಿಸಿಡುವ ಮೆದುಳಿನ ಭಾಗವು

ಹೆಚ್ಚುಹೆಚ್ಚಾಗಿ ಬೆಳೆಯುತೊಡಗಿತು. ಅದರಿಂದ ಮೆದುಳಿನ ಮುಂಭಾಗವು ಹಾಗೂ ಮೇಲ್ಭಾಗಗಳು ಹೆಚ್ಚುಹೆಚ್ಚಾಗಿ ಪ್ರಗತಿಹೊಂದಿ ಬೆಳೆದಿವೆ.

ಆದರೆ ಇದೇ ಅಂತರದಲ್ಲಿ ದೇಹದ ಎಲ್ಲ ಕಾರ್ಯಕ್ರಮಗಳನ್ನು ಸಮನ್ವಯಗೊಳಿಸಿ ನಡಸುವ ಮೆದುಳಿನ ಭಾಗವು ಹಿಂದಿನ ಪೀಳಿಗೆಯ ಪ್ರಾಣಿಗಳಲ್ಲಿರುವಂತೆಯೇ ಇದೆ. ಆ ಭಾಗದಲ್ಲಿ ಪ್ರಗತಿಯು ಆಗಬೇಕಾದ ಪ್ರಮೇಯವಿರಲಿಲ್ಲ. ಏಕೆಂದರೆ ದೈಹಿಕಕಾರ್ಯಗಳ ಮೇಲೆ ಹತೋಟಿ ಇಡಬೇಕಾದ ಸಮಯ ಬಂದಾಗ, ಪ್ರಗತಿಹೊಂದಿದ ಮೆದುಳಿನ ಮುಂಭಾಗ ಮತ್ತು ಮೇಲ್ಭಾಗಗಳು ಯಶಸ್ವಿಯಾಗಿ ಕಾರ್ಯಮಾಡಲು ಅಣಿಯಾಗಿದ್ದವು.

ಮೆದುಳಿನ ಪ್ರಗತಿಹೊಂದಿದ ಮೇಲ್ಭಾಗ ಮತ್ತು ಮುಂಭಾಗಗಳು; ಸೆರಿಬ್ರಂ ಅಥವಾ ಸೆರಿಬ್ರಲ್ ಕಾರ್ಟೆಕ್ಸ್, ದೇಹದ ಎಲ್ಲ ಕಾರ್ಯಗಳನ್ನೂ ಸಮನ್ವಯಗೊಳಿಸಿ, ಸುಗಮವಾಗಿ ನಡಸಿಕೊಂಡುಹೋಗುವ ಭಾಗವೇ ಮೆದುಳಿನ ಬುಡ (Brain stem). ಮೆದುಳಿನ ಬುಡದ ಕಾರ್ಯಕ್ರಮವು ಎಂಡೋಕ್ರೀನ್ ಗ್ರಂಥಿಗಳ ನೆರವಿನಿಂದ ಯಶಸ್ವಿಯಾಗಿ ನಡೆಯುತ್ತಿದೆ.

ಪ್ರಕೃತಿಯಲ್ಲಿ ಮೆದುಳಿನ ಪ್ರಗತಿಯು, ಒಂದು ರೀತಿಯ ಪರಮಾವಧಿ ಸ್ಥಿತಿಯನ್ನು ಮಾನವನಲ್ಲಿ ಮುಟ್ಟಿದೆ. ಸೆರಿಬ್ರಲ್ ಕಾರ್ಟೆಕ್ಸ್‌ನಿಂದಾಗಿ ಮಾನವನು ಪ್ರಾಣಿವರ್ಗದ ಉನ್ನತ ಸ್ಥಾನದಲ್ಲಿದ್ದು ಪ್ರಕೃತಿಯ ಮೇಲೆ ಕೂಡ ಹತೋಟಿ ಹೊಂದುವ ಸ್ಥಿತಿಗೆ ಏರಿದ್ದಾನೆ. ಆದರೆ ಮೆದುಳಿನ ಬುಡವು ಇತರ ಸಸ್ತನಿ ಪ್ರಾಣಿಗಳಲ್ಲಿರುವ ಮಟ್ಟದಲ್ಲಿಯೇ ಇದೆ. ಮೆದುಳಿನ ಬುಡದ ಕಾರ್ಯಕ್ರಮಗಳ ಮೇಲೆ ಹೆಚ್ಚುಹೆಚ್ಚು ಹತೋಟಿಯನ್ನು ಸೆರಿಬ್ರಲ್ ಕಾರ್ಟೆಕ್ಸ್ ಹೇರಲಾರಂಭಿಸಿದೆ, ಈ ಹತೋಟಿಯನ್ನು ತಡೆಯಲಾರದೆ ಮೆದುಳಿನ ಬುಡವು ತಿರುಗಿಬಿದ್ದರೆ ಆಗ ಮನೋದೈಹಿಕ ಬೇನೆಗಳು ಒಂದಲ್ಲ ಒಂದು ರೀತಿಯಲ್ಲಿ ಕಾಣಿಸಿಕೊಳ್ಳುತ್ತವೆ ಆದುದರಿಂದ ಮಾನವನ ಮೆದುಳಿನ ವಿಷಯವನ್ನು ಸ್ವಲ್ಪ ವಿವರವಾಗಿ ತಿಳಿಯೋಣ.

ಮಾನವನಲ್ಲಿ ಅತಿ ಪ್ರಗತಿಹೊಂದಿರುವ ಮೆದುಳು ಅತಿ ಸೂಕ್ಷ್ಮವಾದ ಅಂಗ. ಆದುದರಿಂದಲೇ ಅದು ತಲೆಯ ಮೂಳೆಗಳಿಂದ ಸುರಕ್ಷಿತವಾಗಿ ಇರಿಸ

ಲ್ಪಟ್ಟಿದೆ. ಮೆದುಳನ್ನು ಪಕ್ಕದಿಂದ ನೋಡಿದರೆ ಮೂರು ಸ್ಥೂಲವಾದ ಭಾಗಗಳನ್ನು ಕಾಣಬಹುದು.

ಅ. ಮೆದುಳಿನ ಬುಡ (Brain Stem).

ಆ. ಸೆರಿಬ್ರಂ ಅಥವಾ ಮೇಲ್ಮೆದುಳು ಮತ್ತು ಮುಮ್ಮೆದುಳು.

ಇ. ಸೆರಿಬೆಲ್ಲಂ ಅಥವಾ ಹಿಂಮೆದುಳು.

## ಅ) ಮೆದುಳಿನ ಬುಡ (Brain Stem)

ಬೆನ್ನೆಲುಬಿನೊಳಗೆ ಸ್ಪೈನಲ್ ಕಾರ್ಡ್ ಎಂಬ ನರಸಮೂಹಗಳ ಹುರಿಯಿದೆ. ದೇಹದ ಎಲ್ಲ ಅವಯುವಗಳಿಂದಲೂ (Sensory) ವೇದನಾತ್ಮಕ ನರಗಳು ಸ್ಪೈನಲ್ ಕಾರ್ಡಿಗೆ ಹೋಗುತ್ತವೆ. ಅದೇ ರೀತಿ ಸ್ಪೈನಲ್ ಕಾರ್ಡಿನಿಂದ ದೇಹದ ಎಲ್ಲೆಲ್ಲಿಗೂ (Motor) ಸಂಚಾಲಕ ನರಗಳು ಹರಡಿಕೊಂಡಿರುತ್ತವೆ. ಬೆನ್ನೆಲುಬಿನಿಂದ ತಲೆಯನ್ನು ಸೇರಿದಾಗ ಸ್ಪೈನಲ್ ಕಾರ್ಡ್ ಮೆದುಳಿನ ಬುಡದೊಂದಿಗೆ ಕೂಡಿಕೊಳ್ಳುತ್ತದೆ.

ಎದೆಯ ಬಡಿತ, ಉಸಿರಾಡುವಿಕೆ, ಜೀರ್ಣಕಾರಕಕಾರ್ಯಗಳು ಇತ್ಯಾದಿ ಇತ್ಯಾದಿ ಕೋಟ್ಯಂತರ ರಾಸಾಯನಿಕ, ಭೌತ ಮೊದಲಾದ ಕಾರ್ಯಕ್ರಮಗಳು ದೇಹದಲ್ಲಿ ನಡೆಯುತ್ತಲೇ ಇರುತ್ತವೆ. ಮಾನವನ ಮನಸ್ಸಿನ ನೇರ ಹತೋಟಿಗೆ ಇವು ಒಳಪಟ್ಟಿಲ್ಲ. ದೇಹದ ಅತ್ಯವಶ್ಯಕವಾದ ಕಾರ್ಯಗಳೆಲ್ಲವೂ ಯಶಸ್ವಿಯಾಗಿ ನಡೆಯಲು ಮೆದುಳಿನ ಬುಡದಲ್ಲಿರುವ ಹಲವಾರು ನರವ್ಯೂಹ ಕೇಂದ್ರಗಳೇ ಜವಾಬ್ದಾರಿ ಹೊತ್ತಿವೆ. ಉದಾಹರಣೆಗೆ ಉಗುರುಸುತ್ತು (Whitlow) ಎದ್ದಿದೆ ಅನ್ನಿ. ಉಗುರುಸುತ್ತು ಏಕೆ ಏಳುತ್ತದೆ? ಉಗುರು ಕತ್ತರಿಸಿಕೊಳ್ಳುವಾಗ ಉಗುರುಕಣ್ಣನ್ನು ಕತ್ತರಿಸಿಕೊಂಡಿರಬಹುದು. ಹಸಿಯಾದ ಆ ಸ್ಥಳದಲ್ಲಿ ಗಾಳಿಯಲ್ಲಿರುವ ಬ್ಯಾಕ್ಟಿರೀಯಾಗಳು ನೆಲಸುತ್ತವೆ. ಅಲ್ಲಿ ವೃದ್ಧಿಯಾಗುತ್ತವೆ. ಏಕೆಂದರೆ ಅವುಗಳಿಗೆ ಬೇಕಾದ ಆಹಾರವು ಗಾಯಗೊಂಡ ಆ ಸ್ಥಳದಲ್ಲಿ ಸಿಗುತ್ತದೆ. ದೇಹರಕ್ಷಣೆಯ ಹೊಣೆ ಹೊತ್ತು, ರಕ್ತದಲ್ಲಿ ಯಾವಾಗಲೂ ಪಹರೆ ನಡೆಸುತ್ತಿರುವ ಬಿಳಿಯ ರಕ್ತಕಣಗಳು, ಹೆಚ್ಚು ಹೆಚ್ಚಾಗಿ ಗಾಯಗೊಂಡ ಸ್ಥಳಕ್ಕೆ ಧಾವಿಸುತ್ತವೆ. ಬ್ಯಾಕ್ಟೀರಿಯಾ ನೆಲೆಸಿರುವ ಸ್ಥಳದ ಸುತ್ತಲೂ




## ಮೆದುಳು

(ಪುಟಗಳು ೧೬೪ರಿಂದ ೧೭೦, ೧೮೧ರಿಂದ ೧೯೦ ನೋಡಿ)

ಮನುಷ್ಯನ ತಲೆಯನ್ನು ಮುಂದಿನಿಂದ ಹಿಂದಕ್ಕೆ ಮಧ್ಯದಲ್ಲಿ ಸೀಳಿದರೆ, ಪಕ್ಕದಿಂದ ಹೀಗೆ ಕಾಣುತ್ತದೆ.

ಸೆರಿಬ್ರಂನ ಮುಂಭಾಗದಲ್ಲೂ ಪಕ್ಕಗಳಲ್ಲೂ 'ನೆನಪು' (ಎಂದರೆ ಜನ್ಮಜನ್ಮಾಂತರಗಳ ನೆನಪು ಮತ್ತು ಜನ್ಮದಲ್ಲಿ ಕಲಿತಿದ್ದರ ನೆನಪು) ಟೇಪ್‌ರೆಕಾರ್ಡಿನಲ್ಲಿ ಆಗುವಂತೆ ದಾಖಲಾಗುತ್ತದೆ.

ಲಿಂಬಿಕ್ ಸಿಸ್ಟಂನಲ್ಲಿ ದೇಹದ ಅತ್ಯಗತ್ಯ ಕಾರ್ಯಕ್ರಮಗಳ ಕೇಂದ್ರಗಳು, ಭಾವನಾಕೇಂದ್ರಗಳು, ಅಮಿತಾನಂದ ಕೇಂದ್ರ, ಇವು ಪರಸ್ಪರ ಸಂಪರ್ಕವನ್ನು ಹೊಂದಿ ಇವೆ.

ಸೆರಿಬೆಲ್ಲಂನಲ್ಲಿ ದೇಹದ ಸ್ಥಿಮಿತತೆಯನ್ನು ಸಾಧಿಸಿಕೊಡುವ ಕೇಂದ್ರಗಳು ಇವೆ.

ಇಂದಿಗೂ ಎಂದಿನಂತೆಯೇ ಇರುವ ಮೆದುಳಿನ ಬುಡದಲ್ಲಿರುವ ದೈಹಿಕ ಅಗತ್ಯಗಳ ವ್ಯಕ್ತ ಹಾಗೂ ಅವ್ಯಕ್ತ ಸೆಳೆತ ಒಂದು ಕಡೆ ; ಅಸಾಧ್ಯ ಪ್ರಗತಿ ಹೊಂದಿರುವ ಸೆರಿಬ್ರಂನಲ್ಲಿರುವ ಮಾನಸಿಕ ಅಗತ್ಯಗಳ ವ್ಯಕ್ತ ಹಾಗೂ ಅವ್ಯಕ್ತ ಎಳೆತ ಇನ್ನೊಂದು ಕಡೆ ; ಇವೆರಡರ ಜಗ್ಗಾಟವೇ ಮನೋದೈಹಿಕ ಬೇನೆಗಳಿಗೆ ಕಾರಣ. [ಚಿತ್ರ : ಚಿ॥ ಡಾ॥ ಆರ್. ವಿಶ್ವನಾಥ್ ಅವರ ಸೌಜನ್ಯದಿಂದ]

ಮೊದಲು ದಿಗ್ಬಂಧನವನ್ನು ಹಾಕುತ್ತವೆ. ಅನಂತರ ಕೆಲವು ಬಿಳಿಯ ರಕ್ತಕಣಗಳು ಒಳನುಗ್ಗಿ, ಸಿಕ್ಕಿದ ಬ್ಯಾಕ್ಟೀರಿಯಾಗಳನ್ನು ಧ್ವಂಸ ಮಾಡುತ್ತವೆ.

ಬ್ಯಾಕ್ಟೀರಿಯಾಗಳ ಕೈ ಮೇಲಾಯಿತು ಅಂದರೆ, ಆಗ ಈ ಕೆಟ್ಟ ಸುದ್ದಿಯು ಮೆದುಳಿನ ಬುಡಕ್ಕೆ ತಾಕುತ್ತದೆ. ಮೆದುಳಿನ ಬುಡದಲ್ಲಿರುವ (Thermo Taxic Centre) ಶಾಖದ ಹತೋಟಿಯ ಕೇಂದ್ರವು ಉದ್ರೇಕವಾಗುತ್ತದೆ. ತತ್ಪರಿಣಾಮವಾಗಿ ದೇಹದಲ್ಲಿ ಶಾಖವು ಹೆಚ್ಚು ಉತ್ಪನ್ನವಾಗುತ್ತದೆ. ಆಗಲೇ ಜ್ವರ ಕಾಣಿಸಿಕೊಳ್ಳುವುದು. ಜ್ವರ ಬಂದಾಗ ಬ್ಯಾಕ್ಟೀರಿಯಾಗಳು ಬೇಯಿಸಲ್ಪಟ್ಟಂತಾಗಿ, ಬಿಳಿಯ ರಕ್ತಕಣಗಳು ಅವುಗಳನ್ನು ನಾಶಮಾಡುವುದು ಸುಲಭ. ಮೊದಮೊದಲು ಬ್ಯಾಕ್ಟೀರಿಯಾಗಳ ಕೈ ಮೇಲಾಗದೆ ಇದ್ದರೆ ಉಗುರುಸುತ್ತು ಎದ್ದ ಜಾಗದಲ್ಲಿ ಮಾತ್ರ ಬಿಸಿ ಹೆಚ್ಚಾಗುತ್ತದೆ.

ಈ ಎಲ್ಲ ಕಾರ್ಯಗಳೂ ಸ್ವಯಂಪ್ರೇರಿತವಾಗಿ ನಡೆಯುತ್ತವೆ. ನಾವು ಯೋಚನೆ ಮಾಡಿ, ಜ್ವರ ಬರಲಿ, ಬ್ಯಾಕ್ಟೀರಿಯಾಗಳು ಸಾಯಲಿ ಎಂದು ಯಾವ ಯೋಜನೆಯನ್ನೂ ತೋರ (Conscious) ಮನಸ್ಸಿನಲ್ಲಿ ಹೂಡುವುದಿಲ್ಲ. ದೇಹದ ಮುಖ್ಯ ರಕ್ಷಣಾಕಾರ್ಯಗಳನ್ನೆಲ್ಲಾ ಸ್ಪೈನಲ್‌ಕಾರ್ಡ್‌ನಲ್ಲಿರುವ ಕೇಂದ್ರಗಳು ಹಾಗೂ ಮೆದುಳಿನ ಬುಡದಲ್ಲಿರುವ ಕೇಂದ್ರಗಳು ನಡೆಸಿಕೊಡುತ್ತವೆ.

## (ಆ) ಸೆರಿಬೆಲ್ಲಂ

ತಲೆಯೊಳಗಡೆ ಹಿಂದಿನ ಭಾಗದಲ್ಲಿ ಸೆರಿಬೆಲ್ಲಂ ಇದೆ. ದೇಹದ ಸ್ಥಿಮಿತತೆಗೆ (Balance) ಬೇಕಾದ ಕಾರ್ಯಕ್ರಮಗಳನ್ನೆಲ್ಲ ಸೆರಿಬೆಲ್ಲಂ ನಡಸಿಕೊಡುತ್ತದೆ.

ನಡೆಯುತ್ತಿರುವಾಗ ಕಾಲು ಜಾರಿತು ಅಂತ ಇಟ್ಟುಕೊಳ್ಳಿ. ಜಾರಿದ ಮುಂದಿನ ಕಾಲು ನಮ್ಮ ಹತೋಟಿಯನ್ನು ಮೀರಿ ಮುಂದಕ್ಕೆ ಸಾಗಿರುತ್ತೆ. ಆಗ ನಾವು ಬೀಳಬೇಕು. ಆದರೆ ಎಷ್ಟೋ ಬಾರಿ ದೊಂಬರಾಟ ಆಡಿದ ಹಾಗೆ ಹಿಂದಿನ ಕಾಲನ್ನು ಸರ್ರಂತ ಎಳೆದು ನಾಚ್‌ಮಾಡಿದ ಹಾಗೆ ಮಾಡಿ ತಿರುಗಿ ನಿಂತುಕೊಳ್ಳುತ್ತೇವೆ. ಇಂತಹ ಕಾರ್ಯಕ್ರಮವನ್ನೆಲ್ಲಾ, ಆಯತಪ್ಪಿದಾಗ ಸರಿಪಡಿಸಿಕೊಳ್ಳುವ ಕೆಲಸವನ್ನೆಲ್ಲಾ ಸೆರಿಬೆಲ್ಲಂ ಮಾಡುತ್ತದೆ. ಮನಸ್ಸಿನ ನೇರ ಆಜ್ಞೆಗಳಿಗಾಗಿ ಸೆರಿಬೆಲ್ಲಂ ಕಾಯುವುದಿಲ್ಲ. ಸ್ವಯಂಪ್ರೇರಿತವಾಗಿ, ಮೆದುಳಿನ ಬುಡದ

ಕೇಂದ್ರಗಳಂತೆ ಸೆರಿಬೆಲ್ಲಂ ಕೂಡ ಕಾರ್ಯವಾಡುತ್ತದೆ. ಸರ್ಕಸ್ ಪ್ರದರ್ಶನ ಗಳಲ್ಲಿ, ದೊಂಬರಾಟದಲ್ಲಿ, ನಾವು ನೋಡುವ ಅಚ್ಚರಿತರುವಂತಹ (Balancing Feats) ಎಲ್ಲವೂ ಸೆರಿಬೆಲ್ಲಂನ ಚಾಕಚಕ್ಯತೆಯಿಂದಲೆ ಸಾಧ್ಯವಾಗಿದೆ.

(೪) **ಸೆರಿಬ್ರಂ** (Serebrum)

ಮುಂಪೇಲ್ಭಾಗದಲ್ಲಿ ಹಾಗೂ ಎರಡೂ ಪಕ್ಕಗಳಲ್ಲಿ, ಕೊಡೆಯಂತೆ ಮೆದುಳಿನ ಬುಡದ ಮೇಲೆ ಹರಡಿರುವ ಮೆದುಳಿನ ಭಾಗವೇ ಸೆರಿಬ್ರಂ. ನಮ್ಮ ಮನಸ್ಸಿನ ಇಚ್ಛಾನುಸಾರವಾಗಿ ನಡೆಯುವ ದೇಹದ ಕಾರ್ಯಕ್ರಮಗಳೆಲ್ಲಾ ಸೆರಿಬ್ರಂನಲ್ಲಿರುವ ಹತೋಟಿಕೇಂದ್ರಗಳಿಂದಲೇ ನಡಸಲ್ಪಡುತ್ತದೆ.

ಕಾಲಿನ ಮೇಲೆ ಏನೋ ಒಂದು ಹರಿದ ಹಾಗಾಯ್ತು ಅನ್ನಿ. ಏನೋ ಹರಿದಾಡಿದೆ ಎಂಬ ತಿಳಿವು Sensory ನರಗಳ ಮೂಲಕ ಸ್ಪೈನಲ್ ಕಾರ್ಡನ್ನು ತಲಪುತ್ತವೆ. ತತ್‌ಕ್ಷಣವೇ 'ಕಾಲನ್ನು ಝಾಡಿಸು' ಎಂದು ಕಾಲಿನ ಮಾಂಸ ಖಂಡಗಳಿಗೆ ಆಜ್ಞೆ ಬರುತ್ತದೆ. ಕಾಲನ್ನು ಝಾಡಿಸುತ್ತೇವೆ. ಇಷ್ಟು ಕೆಲಸವು ನಮ್ಮ ವ್ಯಕ್ತಮನಸ್ಸಿನ ಆಜ್ಞೆಯಂತೆ ನಡೆದುದಲ್ಲ. ಸ್ವಯಂಪ್ರೇರಿತವಾಗಿ ಸಾಧಿಸಲ್ಪಡುವ ಈ ಕೆಲಸವನ್ನು ಸ್ಪೈನಲ್‌ಕಾರ್ಡ್‌ನಲ್ಲಿರುವ ಹತೋಟಿಕೇಂದ್ರ ಗಳೇ ನಡಸುತ್ತವೆ.

ಕಾಲನ್ನು ಝಾಡಿಸುವ ಹೊತ್ತಿಗೆ ಈ ಸುದ್ದಿ ಸೆರಿಬ್ರಂಅನ್ನು ಮುಟ್ಟಿರುತ್ತದೆ. ಆಗ ಸೆರಿಬ್ರಂ ಸೂಕ್ತವಾದ ಪಂಚೇಂದ್ರಿಯಗಳ ಮೂಲಕ 'ಅದೇನು ಹರಿದದ್ದು ನೋಡು ?' ಎಂದು ಆಜ್ಞೆಮಾಡುತ್ತದೆ. ತಲೆ ಬಗ್ಗಿಸಿ, ದೃಷ್ಟಿ ಹಾಯಿಸಿ 'ಏನದು ?' ಎಂದು ನೋಡುತ್ತೇವೆ. ಅದು ಚೇಳು ಎಂದು ಕಂಡಿತು ಅನ್ನಿ. ಆಗ ಸೆರಿಬ್ರಂನಲ್ಲಿ ಹುದುಗಿರುವ ನೆನಪು ಎಚ್ಚರಿಕೆ ಕೊಡುತ್ತದೆ. 'ಚೇಳು ವಿಷಜಂತು, ಕುಟುಕಿದರೆ ತ್ರಾಸು, ಇದನ್ನು ನಿರ್ಮೂಲನಮಾಡಬೇಕು' ಎಂದು ಹುಷಾರುಕೊಡುತ್ತದೆ. ಆಗ ಚಪ್ಪಲಿಯನ್ನು ತೆಗೆದುಕೊಂಡು, ಚೇಳನ್ನು ಅಪ್ಪಚ್ಚಿ ಮಾಡಲು, ಅದು ತಪ್ಪಿಸಿಕೊಳ್ಳದ ಹಾಗೆ ದಿಗ್ಬಂಧನ ಹಾಕಲು, ನಡಸುವ ಎಲ್ಲಾ ಕಾರ್ಯಕ್ರಮಗಳನ್ನೂ ಅತಿ ಜರೂರಾಗಿ ನಡಸುತ್ತದೆ ಅಥವಾ ಬೊಬ್ಬೆಯಿಟ್ಟು ನೆರೆಯಲ್ಲಿ ಇರಬಹುದಾದ ಹಿರಿಯ ಅನುಭವಸ್ಥರನ್ನು ಬರ ಮಾಡಿಕೊಂಡು, ಚೇಳಿನ ಸಂಹಾರಕಾರ್ಯವನ್ನು ಮಾಡಿಸುತ್ತದೆ.

ಅಂದರೆ ನಮ್ಮ ಇಚ್ಛಾನುವರ್ತಿಗಳಾದ ದೇಹದ ಮಾಂಸಖಂಡಗಳನ್ನು 'ಹೀಗೆ ಹೀಗೆ ಮಾಡು' ಎಂದು ಯೋಜನೆ ಹೂಡಿ ಮಾಡಿಸುವ ಈ ಕಾರ್ಯಕ್ರಮಕ್ಕೆ ಸೆರಿಬ್ರಂನಲ್ಲಿರುವ ಐಚ್ಛಿಕಮಾಂಸಖಂಡಗಳ ಹತೋಟಿಕೇಂದ್ರಗಳು ನೆರವಾಗುತ್ತವೆ. 'ಚೇಳು ವಿಷಜಂತು. ನೋವನ್ನುಂಟುಮಾಡಬಹುದಾದ ಪ್ರಾಣಿ. ನಮಗೆ ವೈರಿ' ಎಂಬ ತಿಳಿವಳಿಕೆಯು ಅದನ್ನು ಕೊಲ್ಲಿಸುವಂತೆ ಮಾಡುತ್ತದೆ. ಈ ತಿಳಿವಳಿಕೆ ಕೂಡ ಸೆರಿಬ್ರಂನಲ್ಲಿ ನೆನಪಾಗಿ ಹುದುಗಿಕೊಂಡಿರುತ್ತದೆ. ಚೇಳನ್ನು ಕಣ್ಣುಗಳು ಕಂಡಕೂಡಲೆ, ಪರಸ್ಪರವಾಗಿ ಅಂತರ ಸಂಬಂಧವನ್ನು ಹೊಂದಿರುವ ಸೆರಿಬ್ರಂನ ಕೇಂದ್ರಗಳು, ಎಂದೋ ಕಂಡುಕೇಳಿದ್ದ ಚೇಳಿನ ನೆನಪನ್ನು ಎಚ್ಚರಿಸುತ್ತವೆ.

ಅಂದರೆ ಸೆರಿಬ್ರಂನಲ್ಲಿ ಎರಡು ಮುಖ್ಯ ಕಾರ್ಯಕ್ರಮಗಳು ಅಡಕಗೊಂಡಿವೆ. ಒಂದು : ದೇಹದ ಇಚ್ಛಾನುವರ್ತಿ ಕೆಲಸಗಳನ್ನು ಸುಸೂತ್ರವಾಗಿ ಮಾಡಿಸುವ ಏರ್ಪಾಟು. ಎರಡು : ಹಿಂದಿನ ಅನುಭವಗಳನ್ನು ನೆನಪಾಗಿ ಸಂಗ್ರಹಿಸಿ ಇಟ್ಟುಕೊಂಡು, ಅಗತ್ಯಬಿದ್ದಾಗ ಈ ಅನುಭವಗಳ ನೆನಪನ್ನು ಪ್ರತ್ಯಕ್ಷಮಾಡಿಸುವುದು.

ಹಿಂದಿನ ಅನುಭವಗಳನ್ನು ನೆನಪಾಗಿ ಸಂಗ್ರಹಿಸಿ ಇಟ್ಟುಕೊಳ್ಳುವುದು ಎಂದೆವು. ಅಂದರೆ ನಾವು ಈ ಜನ್ಮದಲ್ಲಿ ಅನುಭವಿಸುವುದರ ನೆನಪು ಎಂದು ಸುಲಭವಾಗಿ ತಿಳಿಯಬಹುದು.

ಆದರೆ ಅಷ್ಟೇ ಮಾತ್ರವಲ್ಲ, ಸೆರಿಬ್ರಂನ ನೆನಪು ಸಂಗ್ರಹಿಸಿಡುವ ಕಾರ್ಯಕ್ರಮ ಆನುವಂಶಿಕವಾಗಿ, ಜನ್ಮಜನ್ಮಾಂತರಗಳಿಂದಲೂ ಪಡೆದು ಬಂದ ಅನುಭವಗಳ ನೆನಪನ್ನೂ ಅದು ಸಂಗ್ರಹಿಸಿ ಇಟ್ಟುಕೊಂಡಿರುತ್ತದೆ.

ಉದಾಹರಣೆಗೆ : ಕಾಡಿನಲ್ಲಿ ಹುಲಿ ವಾಸಮಾಡುತ್ತದೆ. ಜಿಂಕೆಯನ್ನೋ ದನವನ್ನೋ ಅದು ಶಿಕಾರಿಮಾಡಿ, ತನ್ನ ಹಸಿವನ್ನು ಇಂಗಿಸಿಕೊಳ್ಳಬೇಕು. ಶಿಕಾರಿಮಾಡುವಾಗ ಜಿಂಕೆಗೆ ಹುಲಿಯು ಹಿಂದೆ ಬರುವ ಸಪ್ಪುಳ ಕೇಳಿಸಬಾರದು. ಕೇಳಿಸಿದರೆ ಜಿಂಕೆ ತಪ್ಪಿಸಿಕೊಂಡು ಓಡಿಹೋಗುತ್ತದೆ. ಆದಕ್ಕೋಸ್ಕರ ಹುಲಿಯು ತನ್ನ ಉಗುರುಗಳನ್ನು ಪಂಜದೊಳಕ್ಕೆ ಸೆಳೆದುಕೊಂಡು ಸಪ್ಪುಳ ಮಾಡದೆ, ಸುಪ್ಪತ್ತಿಗೆಯ ಮೇಲೆ ನಡೆದಂತೆ ನಡೆಯುತ್ತದೆ. ಜಿಂಕೆಯು ಸರಿಯಾದಷ್ಟು ಹತ್ತಿರದಲ್ಲಿದೆ ಎಂದು ತಿಳಿದಾಗ, ಛಂಗಿ, ಒಂದೇ ಏಟಿನಿಂದ

ಜಿಂಕೆಯ ಗೋಣು ಮುರಿದು ಕೊಂದು ಕೆಡವುತ್ತದೆ. ಅನಂತರ ಜಿಂಕೆಯನ್ನು ಪೊದೆಗಳ ಮಧ್ಯೆ ಯಾರಿಗೂ ಕಾಣದಂತೆ ಇರುವ ಗೋಪ್ಯವಾದ ಸ್ಥಳಕ್ಕೆ ಸಾಗಿಸಿ ಕೊಂಡು ಹೋಗಿ ಆರಾಮವಾಗಿ ತಿನ್ನುತ್ತದೆ. ಈ ಅನುಭವಗಳು, ಈ ಅನುಭವ ಗಳಿಂದ ಕಲಿತ ಎಚ್ಚರಿಕೆಯ ಕಾರ್ಯಕ್ರಮಗಳು, ಇವೆಲ್ಲವನ್ನೂ ಹುಲಿಯ ಮರಿಯು ಹುಟ್ಟುವಾಗಲೇ ಸ್ವಾಭಾವಿಕವಾಗಿ ತಿಳಿದಿರುತ್ತದೆ.

ಅಂದರೆ ಹುಲಿಯ ಮರಿಯು, ತಂದೆತಾಯಿ ಹುಲಿಗಳ ಅನುಭವದ ಫಲ ವನ್ನು 'ನೆನಪಾಗಿ' ಪಡೆಯುವುದು, ತಂದೆತಾಯಿ ಹುಲಿಗಳು ತಮ್ಮ ಪಿತೃವರ್ಗ ದಿಂದ ಈ ನೆನಪನ್ನು ಆನುವಂಶಿಕವಾಗಿ ಪಡೆದಿರುತ್ತವೆ. ಜೀವನ ಪ್ರಗತಿಯಲ್ಲಿ ಮೊದಲ ಹುಲಿ ಕಾಣಿಸಿಕೊಂಡಾಗ, ಅದಕ್ಕೆ ಮೂಲಭೂತವಾದ ಪ್ರಾಣಿಗಳಿಂದ ಅದು ಒಡಲಿನ ರಚನೆಯನ್ನೂ ಅನುಭವದಿಂದ ಕಲಿತುದರ ನೆನಪುಗಳನ್ನೂ ಹುಟ್ಟಿನಿಂದಲೇ ಬಳುವಳಿಯಾಗಿ ಪಡೆದಿರಬೇಕು. ಅಂದರೆ ಜನ್ಮಜನ್ಮಾಂತರಗಳ ಅನುಭವದ ಕಲಿಕೆಗಳೆಲ್ಲಾ ನೆನಪಾಗಿ ಬಹುಶಃ ಮಿದುಳಿನ ಸೆರಿಬ್ರಂ ಭಾಗದಲ್ಲಿ ಸಂಗೃಹೀತವಾಗಿರಬೇಕು. ಹೀಗಾಗಿರಬಹುದು ಎನ್ನುವುದಕ್ಕೆ ಸಾಕಷ್ಟು ಸಾಕ್ಷ್ಯ ಗಳು ವೈಜ್ಞಾನಿಕರಿಗೆ ದೊರೆತಿವೆ.

ಆನುವಂಶಿಕವಾಗಿ, ಜನ್ಮಜನ್ಮಾಂತರಗಳಿಂದ ಪಡೆದುಬಂದ ಈ ಪ್ರಾಣಿಗಳ ಜಾಣತನಕ್ಕೆ ಹಾಗೂ ಜಾಣತನದ ಕಾರ್ಯಕ್ರಮವನ್ನು ಪ್ರಾಣಿಗಳು ನಡೆಸು ವುದಕ್ಕೆ ಈ ನೆನಪುಗಳೇ ಕಾರಣ.

## ಜಾಣತನ

ಮೃಗಗಳ ಜಾಣತನಕ್ಕೂ ಮನುಷ್ಯನ ಜಾಣತನಕ್ಕೂ ಇರುವ ವ್ಯತ್ಯಾಸ ಗಳೇನು ? ಹೋಲಿಕೆಗಳು ಯಾವುವು ? ಮನುಷ್ಯನು ಪ್ರಕೃತಿಯಲ್ಲಿ ಹಿರಿಯ ಸ್ಥಾನವನ್ನು ಗಳಿಸಿಕೊಂಡಿದ್ದಾನೆ ಎನ್ನುವುದಕ್ಕೆ ಬೇರೆ ಸಾಕ್ಷ್ಯ ಗಳು ಇವೆಯೆ ?

ಕಾಡಿನಲ್ಲಿ ಮೊತ್ತಮೊದಲು ಮಾನವನು ಕಾಣಿಸಿಕೊಂಡಾಗ, ಅವನೂ ಕಾಡುಮೃಗಗಳ ತರಹದ ಜೀವನವನ್ನೇ ನಡಸುತ್ತಿದ್ದ. ಗುಹೆಗಳಲ್ಲಿ ಇದ್ದು, ಸಿಕ್ಕಿದ ಗೆಡ್ಡೆಗೆಣಸುಗಳನ್ನೂ ಚಿಕ್ಕ ಪುಟ್ಟ ಪ್ರಾಣಿಗಳನ್ನೂ ಹಣ್ಣುಹಂಪಲು

ಗಳನ್ನೂ ತಿಂದು ಜೀವನ ನಡಸುತ್ತಿದ್ದ. ಕಾಡಿನಲ್ಲಿದ್ದ ಇತರ ಮೃಗಗಳಿಗಿದ್ದಂತೆಯೇ ಇವನ ಮೆದುಳಿನಲ್ಲೂ ಅನುವಂಶೀಯವಾಗಿ, ಜನ್ಮಜನ್ಮಾಂತರಗಳಿಂದ ಬಳುವಳಿಯಾಗಿ ಬಂದ 'ನೆನಪು'ಗಳೆಲ್ಲವೂ ಸಂಗ್ರಹಿಸಲ್ಪಟ್ಟಿದ್ದುವು. ಹುಲಿಯು ಷಿಕಾರಿಮಾಡುವಾಗ ಸ್ವಾಭಾವಿಕವಾಗಿ ತೋರುತ್ತಿದ್ದ ಜಾಣತನವನ್ನು ಆದಿಮಾನವನಲ್ಲಿಯೂ ಕಾಣಬಹುದಾಗಿತ್ತು. ಷಿಕಾರಿಮಾಡುತ್ತಿರುವ ಬೇಟೆಗೆ ತನ್ನ ವಾಸನೆ ತೋರದಂತೆ, ಬೇಟೆಯಿಂದ ತನ್ನ ಕಡೆಗೆ ಗಾಳಿ ಬೀಸುತ್ತಿರುವ ದಿಕ್ಕನ್ನು ಸ್ವಾಭಾವಿಕವಾಗಿ ಗುರ್ತಿಸಿ, ಆ ದಿಕ್ಕಿನಲ್ಲೇ ಬೇಟೆಗೆ ಹೊಂಚು ಹಾಕುವ ಜಾಣತನ; ಶಕ್ತಿಯುತವಾದ ಶತ್ರುಮೃಗಗಳ ಜಾಡನ್ನು ಗುರುತಿಸಿ ಅವುಗಳಿಂದ ಪಾರಾಗುವ ರಕ್ಷಣಾಕ್ರಮಂಗಳನ್ನು ಕೈಗೊಳ್ಳುವುದು, ಇತ್ಯಾದಿಯಾಗಿ ಆದಿಮಾನವನೂ ಅನುವಂಶೀಯವಾಗಿ ಜೀವನದ ಜಾಣತನವನ್ನು ಪಡೆದುಕೊಂಡಿದ್ದ.

ಆದರೆ ಆದಿಮಾನವನು ತನ್ನ ನೆರೆಯ ಮಾನವರ ಅನುಭವಗಳನ್ನೂ ಉಪಯೋಗಿಸಿಕೊಂಡು ಪಾಠಗಳನ್ನು ಕಲಿತ. ಹೇಗೆ ? ನೋಡೋಣ.

## ಭಾಷೆ

ಹಳೆಯ ಗುಹೆಗಳಲ್ಲಿ ಕಾಡುಮಾನವರು ಮಣ್ಣಿನ ಬಣ್ಣದಿಂದ ಬರೆದ ದನಗಳ, ಜಿಂಕೆಗಳ, ಹುಲಿ ಸಿಂಹಗಳ ರೇಖಾಚಿತ್ರಗಳಿವೆ. ಆ ಚಿತ್ರಗಳಲ್ಲಿ ಮೃಗಗಳ ದೇಹದ ಮೇಲೆ ಐದಾರು ಕಡೆ ಗುರ್ತಿಸುವ ಚಿಹ್ನೆಯನ್ನು ಬಳಸಲಾಗಿದೆ. ಆಯಾ ಮೃಗಗಳ ದೇಹದ ಮೇಲೆ ಗುರ್ತಿಸಿದ ಸ್ಥಳಗಳಲ್ಲಿ ಪೆಟ್ಟು ಹಾಕಿದರೆ ಆ ಮೃಗವು ಕೂಡಲೆ ಸಾಯುತ್ತದೆ ಎಂಬುದನ್ನು ಅನುಭವದಿಂದ ಕಲಿತ ಆದಿಮಾನವನು ಗುಹೆಯ ಗೋಡೆಗಳ ಮೇಲೆ ಈ ಚಿತ್ರಗಳನ್ನು ಚಿತ್ರಿಸಿದ. ತನ್ನ ಮುಂದಿನ ಪೀಳಿಗೆಯವರು ಕೂಡ, ತನ್ನ ವಂಶೀಯರೇ ಆಗದಿದ್ದರೂ ಕೂಡ, ಈ ಚಿತ್ರಗಳನ್ನು ನೋಡಿ, ಷಿಕಾರಿಗೆ ಸಹಾಯಕವಾಗುವ ವಿದ್ಯೆಯನ್ನು ಕಲಿಯುವ ಸೌಲಭ್ಯವನ್ನು ಮಾಡಿಟ್ಟ.

ಭಾಷೆ—ಸಾಂಕೇತಿಕವಾದ ಭಾಷೆಯೇ ಆಗಿರಲಿ,—ಆಗ ಶುರುವಾಯಿತು ಎನ್ನಬಹುದು. ಒಬ್ಬನ ಅನುಭವಗಳನ್ನು, ಕಲಿತ ಪಾಠಗಳನ್ನು ಅವನು

ಸಾಂಕೇತಿಕವಾಗಿ ರೇಖಾಚಿತ್ರಗಳ ಮೂಲಕ ಇತರರಿಗೆ ತಿಳಿಸುವ ವ್ಯವಸ್ಥೆಯು ಹೀಗೆ ಪ್ರಾರಂಭವಾಯಿತು. ರೇಖಾಚಿತ್ರಗಳ ಬದಲು ಅಕ್ಷರಗಳು. ಒಂದೊಂದು ಅಕ್ಷರಕ್ಕೂ ಒಂದೊಂದು ಸಂಕೇತ, ಹೀಗೆ ಕಾಲಕ್ರಮೇಣ ಭಾಷೆಯು ಪ್ರಗತಿ ಹೊಂದಿತು. ಕೆಲವು ಭಾಷೆಗಳಲ್ಲಿ ಮೂರು ನಾಲ್ಕು ಅಕ್ಷರಗಳಿಂದ ಕೂಡಿದ ಒಂದು ಮಾತು ಒಂದು ವಸ್ತುವನ್ನು ಸೂಚಿಸಲು ಸಾಧ್ಯವಾಯಿತು. ಸಂಪಿಗೆ ಎಂದರೆ ಈ ಬಣ್ಣದ, ಈ ರೂಪಿನ, ಹೀಗಿರುವ ಹೂವು ಎಂದು ಅರ್ಥ ಬರು ವಂತೆ ಆ ಮಾತು ಬಳಕೆಗೆ ಬಂದಿತು. ಇನ್ನೂ ಕೆಲವು ಭಾಷೆಗಳಲ್ಲಿ ಒಂದೊಂದು ಅಕ್ಷರವೂ ಒಂದೊಂದರ ಚಿತ್ರವನ್ನೇ ಸೂಚಿಸುವಷ್ಟು ಪ್ರಗತಿಹೊಂದಿತು. ಉದಾಹರಣೆಗೆ : ಚೀನೀಭಾಷೆಯಲ್ಲಿ ಒಂದು ಅಕ್ಷರ ಬರೆದರೆ ಒಂದು ಚಿತ್ರವೇ ಕಣ್ಣುಮುಂದೆ ಬರುತ್ತದೆ.

ಮಾನವನು ಇಂದಿನ ತನಕ ಸಾಧಿಸಿರುವ ಅಸಾಧಾರಣ ಪ್ರಗತಿಗೆ ಈ ಭಾಷೆಯ ನೆರವು ಅತಿ ಮುಖ್ಯವಾದುದು.

ಮಾನವನು ಭಾಷೆಯನ್ನು ಬಳಸುವುದಕ್ಕೆ ಶುರುಮಾಡಿದ. ಈ ಅಂತರ ದಲ್ಲಿ ಇತರ ಕಾಡುಮೃಗಗಳು. (ಉದಾ : ಹುಲಿ) ಏನು ಪ್ರಗತಿಯನ್ನು ಸಾಧಿ ಸಿದೆ ? ಒಂದು ಹುಲಿಯ ಈ ಜನ್ಮದ ಅನುಭವವು ಆನುವಂಶಿಕವಾಗಿ ಅದರ ಮರಿಗಳಲ್ಲಿ ಸಂಗ್ರಹಿಸಲ್ಪಡಬಹುದು. ಆದರೆ ಮಿಕ್ಕ ಹುಲಿಗಳಿಗೆ ಈ ಅನುಭವ ವನ್ನು ತಿಳಿಸಲಾಗದೆ ಇದ್ದುದರಿಂದ ಹುಲಿಯ ಪ್ರಗತಿಯು ಮೊಟಕಾಯಿತು. ಅದು ಅಂದು ಕಾಡಿನಲ್ಲಿ ಬೇಟೆಯಾಡಿದ ರೀತಿಯಲ್ಲೇ ಇಂದೂ ಬೇಟೆ ಯಾಡುತ್ತಿದೆ.

ಭಾಷೆಯನ್ನು ಮಾನವನು, ತನ್ನ ಮನಸ್ಸಿನ ವಿವೇಚನಾಶಕ್ತಿಯಿಂದ ಯಾವಾಗ ನಿರ್ಮಾಣಮಾಡಿಕೊಂಡನೋ, ಆಗಲೇ ಅವನು ಇತರ ಪ್ರಾಣಿಗಳ ಮೇಲೆ, ಹಾಗೂ ಪ್ರಕೃತಿಯ ಆಗುಹೋಗುಗಳ ಮೇಲೆ ತನ್ನ ಹತೋಟಿಯನ್ನು ಹೊಂದಲು ನಾಂದಿಯನ್ನು ಹಾಡಿದಂತಾಯಿತು. ಭಾಷಾನಿರ್ಮಾಣದಿಂದ, ಹಿಂದಿನವರ ಅನುಭವಗಳನ್ನೂ ಅವರು ಹೂಡಿದ ಉಪಾಯಗಳನ್ನೂ ಕಲಿಯಲು ಸಾಧ್ಯವಾಯಿತು. ತನ್ನ ನೆರೆಹೊರೆಯವರ ಸಂಪರ್ಕವನ್ನು ನಿಕಟವಾಗಿ ಮನಸ್ಸಿ ನಲ್ಲಿ ಪಡೆದು, ಅವರೆಲ್ಲರ ಅನುಭವಗಳನ್ನೂ ಅವರು ರಚಿಸಿಕೊಂಡ ಪರಿಹಾರ ಕ್ರಮಗಳನ್ನೂ ಅರಿಯಲು ಸಾಧ್ಯವಾಯಿತು, ಹಿಂದಿನವರ ಹಾಗೂ ಇಂದಿನವರ

ಅನುಭವಗಳ ಅರಿವನ್ನು ತಿಳಿದು, ತನ್ನ ವಿವೇಚನಾಶಕ್ತಿಯಿಂದ, ಅದನ್ನು ತನ್ನ ವಾತಾವರಣಕ್ಕೆ ಸಮನ್ವಯಮಾಡಿಕೊಂಡು ಮುಂದಿನ ಪೀಳಿಗೆಯವರ ಬಾಳಿಗೆ ಅನುಕೂಲವಾಗುವಂತಹ ಕಾರ್ಯಕ್ರಮಗಳನ್ನೂ ಯೋಜನೆಗಳನ್ನೂ ಹೂಡಲು ಅವನು ಸಮರ್ಥನಾದನು.

ಹೀಗಾಗಿ, ಮೊದಲುಮೊದಲು ಕಾಡುಮಾನವನು ತನ್ನ ವಿವೇಚನಾ ಶಕ್ತಿಯನ್ನು ಉಪಯೋಗಿಸಿಕೊಂಡು, ಸುತ್ತಲೂ ದೊರಕುತ್ತಿದ್ದ ಕಲ್ಲಿನ ಚೂರು ಗಳನ್ನು ತಂದು, ಅವುಗಳನ್ನು ಕಲ್ಲುಗಳ ಮೇಲೆ ಉಜ್ಜಿ, ಹರಿತವಾದ ಕಲ್ಲಿನ ಆಯುಧಗಳನ್ನು ನಿರ್ಮಿಸಿಕೊಂಡ. ಆಹಾರದ ಸಂಪಾದನೆಗೂ ಹಾಗೂ ಆತ್ಮ ರಕ್ಷಣೆಗೂ ಕಲ್ಲಿನ ಚೂಪುಆಯುಧಗಳನ್ನು ಬಳಸಿಕೊಂಡ ಅನಂತರ ಸುತ್ತ ಮುತ್ತಲಿದ್ದ ಕಲ್ಲುಗಳಲ್ಲಿ ಒಲೆಯನ್ನು ಕಟ್ಟಿ ಬೆಂಕಿ ಹತ್ತಿಸಿ ಅಡುಗೆಮಾಡಲೆತ್ನಿಸಿ ದಾಗ, ಕರಗಿ ಹರಿದ ಲೋಹವನ್ನು ಕಂಡ. ಲೋಹವು ಕಲ್ಲಿಗಿಂತ ಗಟ್ಟಿಯಾಗಿ ಇದ್ದುದನ್ನು ಕಂಡ. ಲೋಹವನ್ನೇ ತನ್ನ ಆಯುಧಗಳಿಗೆ ಬಳಸಿಕೊಂಡ, ಬಿಲ್ಲು ಬಾಣಗಳನ್ನೂ ಈಟಿಭರ್ಜಿಗಳನ್ನೂ ನಿರ್ಮಿಸಿಕೊಂಡ. ಕೆಲವು ಕಾಲದ ನಂತರ ತನ್ನ ವಿಚಾರಶಕ್ತಿಯಿಂದ, ಹಿಂದಿನ ಪೀಳಿಗೆಯವರ ಅನುಭವಗಳ ಪ್ರಯೋಗದ ಫಲಿತಾಂಶಗಳಿಂದ, ವೈಜ್ಞಾನಿಕ ಅರಿವನ್ನು ಹೆಚ್ಚುಮಾಡಿಕೊಂಡಾಗ ಕೋವಿ ಗುಂಡು ಮದ್ದುಗಳನ್ನು ಸೃಷ್ಟಿಸಿಕೊಂಡ. ಕಾಲಕ್ರಮದಲ್ಲಿ ವಿದ್ಯುಚ್ಛಕ್ತಿಯ ಬಳಕೆಯನ್ನು ಮಾಡಿಕೊಂಡ. ಈಗೀಗ ಅಣುಶಕ್ತಿಯನ್ನೂ ಬಳಸಿಕೊಳ್ಳುತ್ತಿ ದ್ದಾನೆ. ರಕ್ಷಣಾಕ್ರಮಕ್ಕೆಂದು ನೆಪ ಹೂಡಿ ಅದನ್ನೂ ವೃದ್ಧಿಮಾಡಿಕೊಳ್ಳು ತ್ತಿದ್ದಾನೆ.

ಭಾಷೆಯ ನೆರವಿನಿಂದ ಯಾವಯಾವ ಕಾಲದಲ್ಲಿ ಯಾರುಯಾರ ಅನುಭವ ಗಳಿಂದ ಪಾಠಗಳನ್ನು ಕಲಿತನೋ ಆ ಪ್ರಾಣಿಗನ್ನೆಲ್ಲಾ ಮಾನವನು ಬಳಸಿ ಕೊಂಡು ಬಾಳಲು ಸಾಧ್ಯವಾಯಿತು. ಹಾಗಾಗಿ, ಪ್ರಕೃತಿಯಲ್ಲಿರುವ ಇತರ ಚೇತನ ಅಚೇತನಗಳ ಮೇಲೆ ಮಾನವನು ತನ್ನ ಹತೋಟಿಯನ್ನು ಸಾಧಿಸು ವಂತಾದನು.

## ಮಾನವ ಮಧ್ಯಮ

ಗಾತ್ರದಲ್ಲಿ ಇಂದು ಮಾನವನು ಅತಿ ಸೂಕ್ಷ್ಮಪ್ರಾಣಿಗಿಂತ ಎಷ್ಟು ದೊಡ್ಡ ದಾಗಿರುವನೋ, ಅತಿದೊಡ್ಡ ಪ್ರಾಣಿಗಿಂತ ಅಷ್ಟೇ ಮಟ್ಟಿಗೆ ಸಣ್ಣದಾಗಿರುವನು. ಅಂದರೆ ಮನುಷ್ಯನು ಮಧ್ಯಮಗಾತ್ರದವನು ಎನ್ನಬಹುದು.

ವೇಗದಲ್ಲಿಯೂ ಹೀಗೆಯೇ. ಅತಿ ಮಂದಗತಿಯ ಆಮೆಯು ಗಂಟೆಗೆ ಅರ್ಧ ಅಥವಾ ಒಂದು ಮೈಲಿ ಸಾಗಬಹುದು. ಕುದುರೆ ಗಂಟೆಗೆ ೨೫–೩೦ ಮೈಲು ವೇಗದಲ್ಲಿ ಓಡಬಹುದು. ಮಾನವನು ೧೨–೧೫ ಮೈಲು ವೇಗದಲ್ಲಿ ಸಾಮಾನ್ಯವಾಗಿ ಓಡಬಲ್ಲನು. ಪ್ರಾಣಿಗಳೆಲ್ಲದರ ವೇಗದಲ್ಲಿ ಇದೂ ಮಧ್ಯ ಮಾರ್ಗವೆ.

ದೃಷ್ಟಿಯಲ್ಲಿಯೂ ಹೀಗೆಯೆ. ೪೦೦೦-೭೫೦೦ ಅಂಗ್‌ಸ್ಟ್ರಾಮ್ ಯೂನಿಟ್ಸ್ ಬೆಳಕಿನ ಅಲೆಗಳ ಅಂತರವಿದ್ದರೆ ಮನುಷ್ಯನಿಗೆ ಕಾಣಿಸುತ್ತದೆ. ಅಂದರೆ ಮಾಸಲುಕೆಂಪು ಅಥವಾ ಎಣ್ಣೆಗೆಂಪಿನಿಂದ ತಿಳಿನೇರಳೆಬಣ್ಣದ ತನಕ ಮಾನವನು ಕಾಣಬಲ್ಲ. ಕೆಂಪಿಗಿಂತ ಕಡಮೆಯಾದರೆ, ನೇರಳೆವರ್ಣಕ್ಕಿಂತ ಹೆಚ್ಚಾದ ಅಲೆಗಳಿರುವ ಬೆಳಕಾದರೆ, ಮನುಷ್ಯನು ನೋಡಿ ಅರಿಯಲಾರ. ಇತರ ಪ್ರಾಣಿಗಳು ನಮಗಿಂತ ಚುರುಕುದೃಷ್ಟಿಯನ್ನು ಹೊಂದಿವೆ. ಇನ್ನೂ ಕೆಲವು ಪ್ರಾಣಿಗಳು ನಮಗಿಂತ ಕುರುಡಾಗಿವೆ. ಪ್ರಾಣಿವರ್ಗದಲ್ಲಿ ಮನುಷ್ಯನ ದೃಷ್ಟಿಯು ಮಧ್ಯಮವಾದ ಚುರುಕನ್ನು ಹೊಂದಿದೆ.

ವಾಸನೆಯಲ್ಲಿಯೂ ಹೀಗೆಯೇ. ಚುರುಕುವಾಸನೆ ಹಿಡಿದು ಬೇಟೆ ಯಾಡುವ ಕಾಡುಮೃಗಗಳಿಗಿಂತ ಮಾನವನ ವಾಸನಾಗ್ರಹಣಶಕ್ತಿ ಬಹಳ ಕಡಮೆ. ಸಮುದ್ರದಲ್ಲಿರುವ ಭಾರಿ ಪ್ರಾಣಿಗಳಲ್ಲಿ ಹಲವಾರು ವಾಸನೆಯನ್ನು ಹಿಡಿಯ ಲಾರವು. ಮಾನವನು ಇದರಲ್ಲಿ ಕೂಡ ಅತಿಯಾಗಿರದೆ, ಮಧ್ಯವರ್ತಿ ಯಾಗಿದ್ದಾನೆ.

ಪ್ರಕೃತಿಯಲ್ಲಿ, ಅಂದರೆ ಪ್ರಾಣಿವರ್ಗದಲ್ಲಿ, ಮಾನವನು ಯಾವುದೇ ದೃಷ್ಟಿಯಿಂದ ನೋಡಿದರೂ, ಮಧ್ಯವರ್ತಿಯಾಗಿದ್ದಾನೆ. ಮನಸ್ಸಿನ ಪ್ರಗತಿ ಯಿಂದಾಗಿ, ವಿವೇಚನಾಶಕ್ತಿಯನ್ನು ಪಡೆದಾಗ ಮಾತ್ರ ಮಿಕ್ಕ ಯಾವ ಪ್ರಾಣಿ ಗಳಲ್ಲೂ ಕಾಣಬರದೇ ಇದ್ದ ಬುದ್ಧಿ, ಪ್ರಾಜ್ಞತೆ, ಅಥವಾ Intelligence ಅನ್ನು ಮಾನವನು ಬಳಸಿಕೊಂಡ.

ಭಾಷಾಸಂಪರ್ಕದಿಂದ, ವಿವೇಚನಾಶಕ್ತಿಯಿಂದ, ಮಾನವನು ಇಂದು ಯಂತ್ರಗಳನ್ನು ನಿರ್ಮಿಸಿ, ಟ್ಯಾಂಕ್‌ಗಳನ್ನು ತಯಾರಿಸಿ, ಆನೆಗಳನ್ನು ಮೀರಿಸಿದ್ದಾನೆ–ಗುಂಮ್ಮುವ ಶಕ್ತಿಯಲ್ಲಿ. ಅದೇ ರೀತಿಯಲ್ಲಿ ವಿಮಾನಗಳನ್ನು ಸೃಷ್ಟಿಸಿ ಗಿಡಗಹದ್ದುಗಳಿಗಿಂತ ಬಲುದೂರ ಹಾರಿದ್ದಾನೆ. ರೇಡಿಯೋ ಟೆಲಿವಿಷನ್‌ಗಳನ್ನು ಸಾಧಿಸಿ, ಎಲ್ಲೆಲ್ಲಿನ ವಿಷಯಗಳನ್ನು ಕೇಳಿತಿಳಿದುಕೊಳ್ಳಲೂ ನೋಡಿ ತಿಳಿಯಲೂ ಅಣಿಮಾಡಿಕೊಂಡಿದ್ದಾನೆ. ಸೂರ್ಯಮಂಡಲದಲ್ಲಿ ಶಕ್ತಿಯ ಉತ್ಪಾದನೆಯೂ ಅಹರ್ನಿಶಿ ಅಮೋಘವಾಗಿ ಯಾವ ರೀತಿ ಆಗುತ್ತಿದೆ ಎಂಬ ರಹಸ್ಯವನ್ನು ಈಗ ಮಾನವನು ಭೇದಿಸಿ, ಅಣುಶಕ್ತಿಯ ಉತ್ಪಾದನೆಯನ್ನು ಯಶಸ್ವಿಯಾಗಿ ಮಾಡಿದ್ದಾನೆ. ಬೇಕಾದಲ್ಲಿ ಮಳೆ ಬೀಳಿಸಬಲ್ಲ. ಒಂದು ತೆನೆ ಬೆಳೆಯುವಲ್ಲಿ ಎರಡು ತೆನೆ ಬೆಳಸಿ ತೆಗೆಯುತ್ತಾನೆ. ಇಬ್ಬಂದಿ ಬೆಳೆಗಳನ್ನು ಯಶಸ್ವಿಯಾಗಿ ಸಾಧಿಸಿ ರಾಕ್ಷಸತರಕಾರಿಗಳನ್ನು ಬೆಳಸಿದ್ದಾನೆ.

ಈ ರೀತಿಯಾಗಿ, ಮಾನವನು ಇಂದು ಪ್ರಕೃತಿಯಲ್ಲಿ ಅತ್ಯುನ್ನತ ಸ್ಥಾನವನ್ನು ಹೊಂದಿದ್ದಾನೆ. ಪ್ರಕೃತಿಯ ಗರ್ಭಗುಡಿಯನ್ನು ಹೊಕ್ಕಿದ್ದಾನೆ.

ತನ್ನ ಮನಸ್ಸಿನ ಪ್ರಗತಿಯಿಂದ ಇದೆಲ್ಲವನ್ನೂ ಮಾನವನು ಬಲು ಬೇಗ ಸಾಧಿಸಿದ್ದಾನೆ. ಈ ಮನಸ್ಸು ಯಾವುದು ? ಎಲ್ಲಿದೆ ? ಇದರ ವಿವರಗಳೇನು ! ನೋಡೋಣ.

## ಅಧ್ಯಾಯ ಎರಡು

# ಮನಸ್ಸು

ಮಾನವನ ಇಂದಿನ ಅತ್ಯುನ್ನತ ಸ್ಥಾನಕ್ಕೆ ಮನಸ್ಸೇ ಕಾರಣ ಎಂದೆವು. ಈ ಮನಸ್ಸು ಎಂದರೆ ಏನು ? ಎಲ್ಲಿದೆ ? ಇದರ ಸ್ವಭಾವವೇನು ? ಸ್ವರೂಪ ವೇನು ? ಇದು ಹೇಗೆ ಬೆಳೆಯುತ್ತದೆ ? ಇದರ ಉದ್ದೇಶವಾದರೂ ಪ್ರಕೃತಿಯ ಸೃಷ್ಟಿಯಲ್ಲಿ ಏನು ? ದೇಹದ ಅತ್ಯವಶ್ಯಕವಾದ ಕಾರ್ಯಗಳು ಮನಸ್ಸಿನ ನೇರ ಹತೋಟಿಯಿಂದ ಏಕೆ ಹೊರತಾಗಿವೆ ? ಇವುಗಳ ಸೂಕ್ಷ್ಮ ಪರಿಚಯವನ್ನು ಮಾಡಿಕೊಳ್ಳೋಣ.

### ಮನಸ್ಸು ಎಂದರೆ ಏನು ?

ಮನಸ್ಸು ಎಂದರೆ ಏನು ಎಂಬುದನ್ನು ವಿವರಿಸುವುದು ಬಲು ಕಷ್ಟ. ಮನಸ್ಸು ಎಂದರೆ ನಾವು ಯೋಚಿಸಲು ಉಪಯೋಗಿಸುವ ವಸ್ತು ಎಂದು ಎಲ್ಲರಿಗೂ ಗೊತ್ತು. ಆದರೆ ಒಂದು ಕ್ಷಣ ಯೋಚಿಸಿದರೆ, 'ಮನಸ್ಸು ವಸ್ತುವೇ ?' ಎಂಬ ಸಂದೇಹ ಬರುತ್ತದೆ. ವಸ್ತು ಎಂದರೆ ರಾಸಾಯನಿಕವಾಗಿ, ಅಥವಾ ಭೌತವಾಗಿ ವಿವರಿಸಬಹುದಾದುದು. ಹಾಗೆ ಮನಸ್ಸನ್ನು ವಿವರಿಸಲು ಸಾಧ್ಯವೆ ? ಇಲ್ಲ.

ಮನಸ್ಸು ಒಂದು ರೀತಿಯ ಶಕ್ತಿ. ಶಾಖ, ಬೆಳಕು, ವಿದ್ಯುತ್, ಗುರುತ್ವಾಕರ್ಷಣ ಶಕ್ತಿಗಳಂತೆ ಮನಸ್ಸು ಒಂದು ತೆರನಾದ ಶಕ್ತಿ. ಆದರೆ ಉಳಿದೆಲ್ಲ ಶಕ್ತಿಗಳನ್ನು ಪ್ರಯೋಗಕ್ಕೆ ಈಡುಮಾಡುವಂತೆ, ಮನಸ್ಸನ್ನು ಸುಲಭವಾಗಿ ಈಡುಮಾಡಲಾಗುವುದಿಲ್ಲ. ಆದುದರಿಂದ ಇಂದಿನ ವೈಜ್ಞಾನಿಕ ಹಂತದಲ್ಲಿ ಮನಸ್ಸು ಯಾವ ರೀತಿಯ ಶಕ್ತಿ ಎಂಬುದು ತಿಳಿದುಬಂದಿಲ್ಲ ಎಂದೆನ್ನಬೇಕು.

ಆದರೆ, ಮನಸ್ಸು ಎಂದರೆ ಎಲ್ಲರಿಗೂ ಒಂದು ರೀತಿಯ ಕಲ್ಪನೆ ಮನಸ್ಸಿನಲ್ಲಿ ಮೂಡುತ್ತದೆ. ಅದು ಏನು ಹೇಳಿ ಎಂದರೆ ಸದ್ಯಕ್ಕೆ ಸಾಧ್ಯವಾಗುವುದಿಲ್ಲ. ದೇವರು ಎಂದ ಹಾಗೆ. ಕಷ್ಟಗಳೂ ಸಂಕಟಗಳೂ ಬಂದಾಗ 'ಅದು' ಇದೆ ಎಂಬ ಅರಿವು ಬರುತ್ತದೆ. ಆದರೆ 'ಅದು' ಏನು ಎಂದರೆ 'ವರ್ಣಿಸಲು ಸಾಧ್ಯವಿಲ್ಲ' ಎಂದು ಅನ್ನಲೇಬೇಕು. ವರ್ಣಿಸಲು ಅಸಾಧ್ಯವಾದರೂ ನಾವು ವೈಯಕ್ತಿಕವಾಗಿ ಅದನ್ನು ಅರಿತಿದ್ದೇವೆ ; ಆದರೆ ವರ್ಣಿಸಿ ತಿಳಿಸಲು ಸಾಧ್ಯವಿಲ್ಲ. 'ನೀವೂ ನಮ್ಮಂತೆಯೇ ಒದ್ದಾಡಿದರೆ ನಿಮಗೂ ತಿಳಿಯುತ್ತದೆ' ಎನ್ನಬೇಕು.

ಬೆಲ್ಲವನ್ನು ತಿಂದವನು ನಾಲಗೆಯನ್ನು ತುಟಿಗಳ ಮೇಲೆ ಆಡಿಸುತ್ತಾ ಅಲ್ಪ ಸ್ವಲ್ಪ ಸೋಂಕು ಉಳಿದಿದ್ದರೂ ಅದನ್ನು ಚಪ್ಪರಿಸುತ್ತಾ ಸುಖಪಡುತ್ತಾನೆ. ಮಂದಸ್ಮಿತನಾಗುತ್ತಾನೆ. ಮುಖದ ಮೇಲಿನ ಗೆರೆಗಳೆಲ್ಲಾ ಮಾಯವಾಗುತ್ತವೆ. 'ಯಾಕಯ್ಯಾ ? ಇಷ್ಟು ಹಿಗ್ಗುತ್ತಾ ಇದ್ದೀ ?' ಎಂದು ಕೇಳಿದರೆ, ಅವನು ಪೂರ್ಣ ವೈಜ್ಞಾನಿಕ ಪ್ರಾಜ್ಞನಾಗಿದ್ದರೂ ಹೇಳಬಹುದಾದರೂ ಏನು ?

ಬೆಲ್ಲದಲ್ಲಿ ಸಿಹಿ ಕೊಡುವ ಅಂಶವು ಮೂಲಭೂತವಾದ ಗ್ಲೂಕೋಸ್ ಇರುವ, ಅಂದರೆ (Carbon) ಇಂಗಾಲದ ಆಸರೆ ಪಡೆದ, ಆರು ತೋಳುಗಳೋ ಕಾಲುಗಳೋ ಇರುವ ಷಟ್ಪದಿಯಾದ ಮಾಲಿಕ್ಯೂಲ್ (Molecule). ಮಾಲಿಕ್ಯೂಲ್ ಎಂದರೆ ಅಣುಗಳು ತಮ್ಮ ಸುರಕ್ಷತೆಗೆ ರಚಿಸಿಕೊಂಡ ಸಂಘ. ಶಕ್ತಿಯನ್ನು ಹೆಪ್ಪಿಟ್ಟು, ವಸ್ತುವಾಗಿ ಬಾಳಲು ಬಯಸಿದ ಆದಿಯಲ್ಲಿ ಕಂಡ ಸಂಘ– ಎಂದೆನ್ನಬಹುದು Physical Sciences ಪಂಡಿತರು.

ಅದು ಏನೇ ಇರಲಿ, ಅದು ನಾಲಗೆಗೆ ನೀರಿನೊಡನೆ ತಾಕಿದಾಗ, ಅವೂ ಕೆಲವು ತಾಣಗಳಲ್ಲಿ ಎಚ್ಚರಗೊಳ್ಳಬಹುದಾದ ತಾಣಗಳಲ್ಲಿ, ಅಂದರೆ Taste-budಗಳ ಮೇಲೆ ಹರಿದಾಗ. ಎಂಥದೋ ರಾಸಾಯನಿಕ ಜೀವನವು ಆರಂಭವಾಗಿ

ಆ ಜೀವನ ನಾಶವಾಗುವ ಮೊದಲು, ನಾಲಗೆಯ ಹಿಂದಿರುವ Tastebuds ಗಳಲ್ಲಿ ಅಡಕವಾಗಿರುವ ನರಗಳ ಕೊನೆಯಲ್ಲಿರುವ ಎಲೆಯಂತಹವನ್ನು ಕಂಪಿಸುತ್ತವೆ. ಆಗ ಇದರ ಜತೆಗೆ ಅನುಕಂಪ ಹೂಡುತ್ತ ನರಗಳು. ರಾಸಾಯನಿಕ ಶಕ್ತಿಯನ್ನು ವಿದ್ಯುತ್ ಶಕ್ತಿಯನ್ನಾಗಿ ಹೇಗೋ ಪರಿವರ್ತಿಸಿ, ಮೆದುಳಿಗೆ ಸಾಗಿಸುತ್ತವೆ. ಮೆದುಳು ಎಚ್ಚರಗೊಂಡು, ಅದೇ ತೆರನಾದ ಹಿಂದಿನ ನೆನಪುಗಳನ್ನು ಸ್ಮರಿಸಿಕೊಂಡು ಸುಖಪಡುತ್ತದೆ

ಹೀಗೆ ಸುಖಪಡಲು ದೇಹವು ದಣಿದಿರುವುದೂ ಒಂದು ಕಾರಣ. ಏಕೆಂದರೆ ದೇಹದಲ್ಲಿ ಶಕ್ತಿಯ ಉತ್ಪಾದನೆಗೆ ಗ್ಲೂಕೋಸೇ ಸುಲಭ ಚಲಾವಣೆಯ ನಾಣ್ಯ, ಎಂದೂ ಹೇಳಬಹುದು, Natural Sciences ಪಂಡಿತರು.

ಹೀಗೆ ಸುಖಪಡಲು ಮನಸ್ಸು ಖುಷಿಯಾಗುವುದೂ ಮುಖ್ಯವಾದ ಇನ್ನೊಂದು ಕಾರಣ ಎಂದೂ ಹೇಳಬಹುದು. ಆನುವಂಶಿಕವಾಗಿ ಅನುಭವಿಸಿದ ಈ ಬೆಲ್ಲದ ರುಚಿಯ ನೆನಪು ಮನಸ್ಸಿನಲ್ಲಿ ಹುದುಗಿರುತ್ತದೆ. ಬೆಲ್ಲವನ್ನು ಈಗ ತಿಂದಾಗ ಆ ನೆನಪುಗಳೆಲ್ಲಾ ಎಚ್ಚರಗೊಂಡು, ಸ್ಮರಣೆಗೆ ಬಂದು, ಸುಖವನ್ನು ಕೊಡುತ್ತವೆ, ಎಂದು ಹೇಳಬಹುದು, ಮನಶ್ಶಾಸ್ತ್ರ ಪಂಡಿತರು.

ಆದರೆ ಈ ಜ್ಞಾನವನ್ನೆಲ್ಲಾ ಎಷ್ಟೋ ವಿಶದವಾಗಿ ತಿಳಿಸಿದರೂ ಕೇಳಿಸಿಕೊಂಡವನ ನಾಲಿಗೆಗೆ ಸಿಹಿ ಹತ್ತುತ್ತದೆಯೆ ? ಅವನ Teste Buds ಎಚ್ಚರಗೊಳ್ಳುತ್ತವೆಯೆ ? ಅವನು ತುಟಿಗಳ ಮೇಲೆ ನಾಲಿಗೆಯನ್ನು ಆಡಿಸಿ ಚಪ್ಪರಿಸಲು ಸಾಧ್ಯವೆ ?

ಎಷ್ಟೋ ವಿವರಗಳನ್ನು ಯಾರು ಯಾರಿಂದಲೇ ಕೇಳಲಿ, ಯಾವ ಒಬ್ಬನು ಕೂಡ ಸಿಹಿ ರುಚಿಯನ್ನು ಅನುಭವಿಸಲಾರ. ನೆನಪಿನ ಮೆಲುಕಿನಿಂದ ತುಟಿಗಳ ಮೇಲೆ ನಾಲಿಗೆಯನ್ನಾಡಿಸಿ ಚಪ್ಪರಿಸಬಹುದು, ಅಷ್ಟೇ.

ಆದರೆ ಸಿಹಿಯನ್ನು ಅನುಭವಿಸಬೇಕಾದರೆ, ಅವನೇ ಬೆಲ್ಲವನ್ನು ತನ್ನ ಬಾಯಿಗೆ ಹಾಕಿಕೊಂಡು ನಾಲಿಗೆಯ ಮೇಲೆ ಕರಗಿಸಿ, ಚಪ್ಪರಿಸುತ್ತಾ ನುಂಗಬೇಕು. ಆಗಲೇ ಅವನಿಗೆ ಸಿಹಿಯ ಅನುಭವ ಸಾಧ್ಯ !

ಅದೇ ರೀತಿ, ಈಗಿರುವ ವೈಜ್ಞಾನಿಕ ಪ್ರಗತಿಯ ಅರಿವಿನಲ್ಲಿ ಮನಸ್ಸು ಏನು ಎಂಬುದನ್ನು ಪೂರ್ಣವಾಗಿ ತಿಳಿಯಬೇಕಾದರೆ ಆ ವೈಜ್ಞಾನಿಕ ದರ್ಶನ

ಗಳಿಂದ ಅಸಾಧ್ಯ. ಸ್ವಂತ ಅನುಭವದಿಂದ, ಮಾನಸಿಕ ಚಟುವಟಿಕೆಯಿಂದಲೇ ಮನಸ್ಸು ಏನು ಎಂದು ಅರಿಯಬಹುದು.

ಆ ತನಕ ಮನಸ್ಸು ಏನು ಎಂದು ಯಾರೂ ವೈಜ್ಞಾನಿಕವಾಗಿ ತಿಳಿಸಲು ಅಸಾಧ್ಯ. ಆದರೆ ಎಲ್ಲರಿಗೂ ಮನಸ್ಸು ಏನು ಎಂಬುದರ ಅರಿವು ತುಸು ಮಾತ್ರ ವಾದರೂ ಸ್ಪಷ್ಟವಾಗಿ ಇದ್ದೇ ಇದೆ.

ಮನಸ್ಸು ಎಂಬುದನ್ನು ಪೂರ್ಣವಾಗಿ ತಿಳಿಸಲು ಅಸಾಧ್ಯವಾದರೂ ಅದರ ಬೆಳವಣಿಗೆ, ಅದರ ಚಟುವಟಿಕೆಗಳು, ಇವುಗಳನ್ನು ಸಾಕ್ಷ್ಯಗಳಿಂದ ಕಂಡು, ಪ್ರಯೋಗಗಳಿಂದ ಸಮರ್ಥಿಸಿ, ಆದಷ್ಟುಮಟ್ಟಿಗೆ ಅದರ ಸ್ವಭಾವ ವನ್ನೂ ಸ್ವರೂಪವನ್ನೂ ತಿಳಿಯಬಹುದು.

ಹಾಗೆ ಮಾಡಿದಾಗಲೂ ಮನಸ್ಸಿನಲ್ಲಿ ಹುದುಗಿರುವ ಒಂದು ಅಂಶದ ತಿಳಿವಳಿಕೆಯನ್ನು ವಿವರಿಸಲು ಅಸಾಧ್ಯವಾಗುತ್ತದೆ. ಅದನ್ನು ಅನುಭವಿಸಿಯೇ ತಿಳಿಯಬೇಕು. ಮನಸ್ಸಿನೊಳಗಿನ ಈ ಅಂಶದ ಅನುಭವವನ್ನು ಹೊಂದಿದ ಹಲವಾರು ಹಿರಿಯರು ಹೇಳಿರುವುದನ್ನು ಕೇಳಿದರೆ ಈ ಅಂಶವೇ ಆನಂದಮಯ ವಾಗಿರುತ್ತದೆಂದೂ, ದ್ವಂದ್ವಾತೀತವಾದ ಅನುಭವವೆಂದೂ ಅನಿಸುತ್ತದೆ. ಈ ಅಂಶದ ಅನುಭವದತ್ತ ಮಾನವನನ್ನು ಕೈತೋರಿ ಕರೆದೊಯ್ಯುವುದಕ್ಕಾ ಗಿಯೇ ಪ್ರಕೃತಿಯಲ್ಲಿ 'ಮನಸ್ಸು' ಆವಿರ್ಭವಿಸುವುದು ಎನಿಸುತ್ತದೆ.

## ಮನಸ್ಸು ಎಲ್ಲಿದೆ ?

ಮನಸ್ಸು ಮಿದುಳಿನಲ್ಲಿ ಮನೆ ಮಾಡಿಕೊಂಡಿದೆ ಎಂದು ಸಾಧಾರಣವಾಗಿ ಎಲ್ಲರೂ ನಂಬುತ್ತಾರೆ. ಏಕೆಂದರೆ ಮಿದುಳಿನ ಯಾವುದಾದರೂ ಒಂದು ಭಾಗವು ಆಘಾತಕ್ಕೆ ಒಳಗಾದರೆ ಅಥವಾ ಸಾಂಕ್ರಾಮಿಕ ಜಾಡ್ಯಗಳಿಂದ ಕೆಟ್ಟು ಹೋದರೆ. ಅಂತಹವರ ಮನಸ್ಸು ಎಲ್ಲರ ಮನಸ್ಸಿನ ಹಾಗೆ ಅಥವಾ ಮೊದಲಿ ದ್ದಂತೆ ಚೂಟಿಯಾಗಿ ಇರುವುದಿಲ್ಲ. ಹುಟ್ಟುವಾಗಲೇ ಕೆಲವು ಮಕ್ಕಳ ಮಿದುಳು ಸರಿಯಾಗಿ ಬೆಳೆದಿರುವುದಿಲ್ಲ. ಇಂತಹ ಮಕ್ಕಳು ಬೆಳೆದ ಮೇಲೆ ಕೂಡ ಅವರ ಮನಸ್ಸು ಎಲ್ಲರಂತಿರದೆ ಬೆಪ್ಪುಬೆಪ್ಪಾಗಿರುತ್ತದೆ. ಅಂದರೆ ಮಿದುಳು ಚೆನ್ನಾಗಿ

ಸುವ್ಯವಸ್ಥಿತವಾಗಿದ್ದರೆ. ಆಗ ಮನಸ್ಸೂ ಕೆಲಸ ಮಾಡಲು ಸಾಧ್ಯ, ಬೆಳೆಯಲೂ ಸಾಧ್ಯ ಎನ್ನಬಹುದು.

ಕೆಲವು ಪ್ರಾಣಿಗಳ ಮೇಲೆ ಪ್ರಯೋಗಶಾಲೆಯಲ್ಲಿ ನಡಸಿದ ಮೆದುಳಿನ ಮೇಲಿನ ಶಸ್ತ್ರಕ್ರಿಯೆಗಳಿಂದ ಅವುಗಳ ಮನಸ್ಸು ಅಸ್ತವ್ಯಸ್ತವಾಗುವುದನ್ನು ಕಂಡು, ಮೆದುಳಿನಲ್ಲಿ ಮನಸ್ಸು ಮನೆ ಮಾಡಿಕೊಂಡಿದೆ ಎಂದು ಗ್ರಹಿಸಬಹುದು.

ಆದರೆ ಹುಚ್ಚರ ಮೆದುಳನ್ನು ಪರೀಕ್ಷೆ ಮಾಡಿದರೆ, ನೂರಕ್ಕೆ ತೊಂಭತ್ತರಲ್ಲಿ, ಯಾವ ವ್ಯತ್ಯಾಸವಾಗಲಿ. ದೋಷವಾಗಲಿ ಕಾಣಬರುವುದಿಲ್ಲ. ನಮ್ಮ ಪರೀಕ್ಷಾಮಾರ್ಗಗಳ ಚಾಕಚಕ್ಯತೆಯು ಅತಿ ಮಂದವಾದುದರಿಂದ. ಇರಬಹುದಾದ ದೋಷಗಳೋ ವ್ಯತ್ಯಾಸಗಳೋ ನಮಗೆ ಕಾಣದೆ ಇರಬಹುದು ಅಥವಾ ಮೆದುಳಿನ ಆಯಾ ಹೊತ್ತಿನ ಕಾರ್ಯಕ್ರಮದಲ್ಲಿ ರಾಸಾಯನಿಕ ವ್ಯತ್ಯಾಸಗಳೋ. ಭೌತವಾದ ಏರುಪೇರುಗಳೋ ಉಂಟಾಗಿ, ಆಗ ಹುಚ್ಚು ಕಾಣಿಸಿಕೊಳ್ಳಬಹುದು. ಆದರೆ ಅಂತಹವರನ್ನು ನಾವು ಪರೀಕ್ಷೆಮಾಡುವ ಸಮಯದಲ್ಲಿ ಮನಸ್ಸು ಹತೋಟಿಯಲ್ಲಿರುವುದರಿಂದ, ವ್ಯತ್ಯಾಸಗಳು ಮೆದುಳಿನಲ್ಲಿ ಕಾಣಬರದೇ ಇರಬಹುದು.

'ಮೆದುಳಿನ ಯಾವ ಭಾಗದಲ್ಲಿ ಮನಸ್ಸು ಇದೆ ?' ಎಂದು ಕೇಳಿದರೆ, 'ಸೆರಿಬ್ರಂ ಭಾಗವೇ ಮನಸ್ಸಿನ ಕಾರ್ಯಕ್ಷೇತ್ರ' ಎನ್ನಬಹುದು. ಆನುವಂಶಿಕ ನೆನಪುಗಳ ಸಂಗ್ರಹಣೆಯೂ, ಈ ಜನ್ಮದಲ್ಲಿ ಕಲಿತ ಪಾಠಗಳ ಸಂಗ್ರಹಣೆಯೂ ಸೆರಿಬ್ರಂನಲ್ಲಿ ಶೇಖರಿಸಲ್ಪಡುತ್ತದೆ.

ಸೆರಿಬೆಲ್ಲಂ ಭಾಗದಲ್ಲಿ ಮನಸ್ಸಿನ ಕಾರ್ಯವೇನೂ ಇರಲಾರದು ಎಂದು ತಿಳಿಯಲಾಗಿದೆ.

ಮೆದುಳಿನ ಬುಡದಲ್ಲಿ ಮನಸ್ಸು ಕಾರ್ಯಕ್ರಮವನ್ನೇನಾದರೂ ಇರಿಸಿಕೊಂಡಿದೆಯೆ ? ಹಳೆಯ ನೆನಪುಗಳ ಸಂಗ್ರಹಣೆ. ಕಲಿತ ಪಾಠಗಳ ಸಂಗ್ರಹಣೆ, ವಿವೇಚನಾಶಕ್ತಿ. ಇಷ್ಟೇ ಮನಸ್ಸಿನ ಆಯಕಟ್ಟಾಗಿದ್ದರೆ, ಮೆದುಳಿನ ಬುಡದಲ್ಲಿ ಮನಸ್ಸಿಗೆ ಸ್ಥಾನವಿಲ್ಲ ಎನ್ನಬಹುದು.

ಆದರೆ ರಾಗ, ಭಾವ, ಸುಖ, ದುಃಖ, ಅಳು, ನಗು, ಮುಂತಾದ ಭಾವನೆಗಳನ್ನೆಲ್ಲಾ ಮನಸ್ಸೇ ಅಲ್ಲವೆ ಅನುಭವಿಸುವುದು ? ಇಂತಹ ಭಾವನೆಗಳನ್ನು

ಅರಿಯುವ, ಅರಿತು ಸೂಕ್ತಕ್ರಮಗಳನ್ನು ದೇಹದಲ್ಲಿ ಹೂಡುವ ಹತೋಟಿ ನರಕೇಂದ್ರಗಳೆಲ್ಲಾ ಮೆದುಳಿನ ಬುಡದಲ್ಲಿ ಇವೆ.

ಕಾರ್ಯಕ್ರಮದ ದೃಷ್ಟಿಯಿಂದ ಮೆದುಳಿನ ಬುಡವನ್ನು ಈಗ ಲಿಂಬಿಕ್ ಸಿಸ್ಟಂ ಎಂದು ವರ್ಣಿಸಿ, ಪರಸ್ಪರ ಸಂಬಂಧ ಹೊಂದಿದ ಮೆದುಳಿನ ಬುಡದ ಭಾಗಗಳನ್ನೂ, ಮೆದುಳಿನ ತಳದ ಕೆಲವು ಭಾಗಗಳನ್ನೂ ಕೂಡಿಸಿಕೊಂಡೇ ವ್ಯಾಸಂಗಮಾಡುತ್ತಾರೆ.

ಆಪ್ತರಾದವರ ಸಾವು ಆದಾಗ ಮನಸ್ಸಿಗೆ ದುಃಖವಾಗುವುದಲ್ಲವೆ ? ಈ ದುಃಖದ ಹತೋಟಿಕೇಂದ್ರವು ಲಿಂಬಿಕ್ ಸಿಸ್ಟಂನಲ್ಲಿ ಅಂದರೆ ಮೆದುಳಿನ ಬುಡದಲ್ಲಿ ಥೆಲಾಮಸ್ ಭಾಗದ ತಳದಲ್ಲಿ ಇದೆ. ದುಃಖವು ಮನಸ್ಸಿಗೆ ನಾಟಿದಾಗ, ಮನಸ್ಸು ಸಂಪರ್ಕನರಗಳ ಮೂಲಕ ಈ ಹತೋಟಿಕೇಂದ್ರವನ್ನು ಉದ್ರೇಕಿಸುತ್ತದೆ. ಆಗ ಹತೋಟಿಕೇಂದ್ರವು ಕಣ್ಣಿನಲ್ಲಿ ನೀರು ಹರಿಯುವಂತೆ, ಗಂಟಲನ್ನು ಒತ್ತುವಂತೆ, ದೇಹದಲ್ಲಿ ಕ್ರಮ ಗೊಳ್ಳುತ್ತದೆ. ಜೋಲುಬಿದ್ದ ಮುಖ, ಅಳು, ಏನನ್ನೂ ಮಾಡಲೂ ಬೇಡದ ತುಂಬಿದ ಮನಸ್ಸು — ಇವೆಲ್ಲವೂ ಕಂಡುಬರುತ್ತವೆ. ಈ ಕಾರ್ಯಕ್ರಮದಿಂದ, ಅತ್ತ ಮೇಲೆ ಮನಸ್ಸಿಗಾದ ದುಃಖವು ಕಡಮೆಯಾಗುತ್ತದೆ. ಅದಕ್ಕೇ ಅತ್ತರೆ ಎದೆಯ ಭಾರ ಕಡಮೆಯಾಗುತ್ತದೆ ; ಹಾಗೆಯೇ ನಕ್ಕರೆ ಮೈ ಹಗುರಾಗುತ್ತದೆ — ಎನ್ನುವುದು.

ಮನಸ್ಸು ಮೆದುಳಿನಲ್ಲಿದೆ ಎಂದಾಗ ಮೆದುಳಿನ ವಸ್ತುವನ್ನು ಮಾತ್ರ ಉದ್ದೇಶಿಸಿ ಹೇಳಿದಂತಲ್ಲ ; ಮೆದುಳನ್ನು ಸದಾ ಕಾಲದಲ್ಲೂ ಅಭಿಷೇಕಿಸುತ್ತಾ ಇರುವ ಸೆರಿಬ್ರೊ-ಸ್ಪೈನಲ್ ದ್ರವವನ್ನೂ ಮೆದುಳಿನ ಜೊತೆಗೆ ಸೇರಿಸಿಕೊಂಡು, ಇಂತಹದರಲ್ಲೇ ಮನಸ್ಸು ಕಾರ್ಯಮಾಡುತ್ತದೆ ಎನ್ನಬೇಕು. ಈ ಸೆರಿಬ್ರೊ-ಸ್ಪೈನಲ್ ದ್ರವಕ್ಕೆ ದೇಹದಲ್ಲಿರುವ ಎಂಡೋಕ್ರೀನ್ ಗ್ರಂಥಿಗಳ ದ್ರವವೂ ಹರಿದು ಬಂದಿರುತ್ತದೆ.

ಮೆದುಳಿನಲ್ಲಿ ನಡೆಯುವ ಮನಸ್ಸಿನ ಕಾರ್ಯಕ್ರಮವೆಲ್ಲಾ ವಿದ್ಯುತ್ ಶಕ್ತಿಯನ್ನು ಅವಲಂಬಿಸಿರುತ್ತದೆ. ವಿದ್ಯುತ್‌ಶಕ್ತಿಯು ಹರಿಯಬೇಕಾದರೆ, ಮೆದುಳಿನಲ್ಲಿ ರಾಸಾಯನಿಕ ಮಾರ್ಪಾಡುಗಳು (ಮೋಟಾರಿನ ಬ್ಯಾಟರಿಗಳಲ್ಲಿದ್ದಂತೆ) ಆಗಬೇಕು. ರಾಸಾಯನಿಕ ಮಾರ್ಪಾಡುಗಳು ಲವಣಮಿಶ್ರಿತ ನೀರಿನಲ್ಲಿ ಸಾಧ್ಯ. ಆದುದರಿಂದಲೇ ಮೆದುಳು ಲವಣಮಿಶ್ರವಾದ, ವಿದ್ಯುತ್‌ಶಕ್ತಿಯನ್ನು ಹರಿಸಲು

ಸಹಾಯಕವಾದ, Electrolytes ತುಂಬಿದ ಸೆರಿಬ್ರೊ-ಸ್ಪೈನಲ್ ದ್ರವದಿಂದ ಯಾವಾಗಲೂ ಒದ್ದೆಯಾಗಿ ಇರಿಸಲ್ಪಡುತ್ತಿದೆ.

ಈ ದ್ರವದಲ್ಲಿ ಯಾವುದಾದರೂ ದೋಷ ಕಾಣಿಸಿಕೊಂಡಿತು ಅನ್ನಿ. ಥೈರಾಯ್ಡ್ ಗ್ರಂಥಿಯ ದ್ರವವು ಸಾಕಷ್ಟು ಪ್ರಮಾಣದಲ್ಲಿ ಸರಬರಾಜಾಗಲಿಲ್ಲ ಅನ್ನಿ. ಆಗ ಸೆರಿಬ್ರೊ-ಸ್ಪೈನಲ್ ದ್ರವದಲ್ಲಿ ಥೈರಾಯ್ಡ್ ಅಂಶವು ಬಹಳ ಮಟ್ಟಿಗೆ ಕಡಮೆಯಾಗುತ್ತೆ. ಅಂತಹ ರೋಗಿಗಳನ್ನು (Cretins) ಕುರೂಪಿ ಹೆಡ್ಡರು ಎಂದು ಕರೆಯುತ್ತಾರೆ. ಅಂತಹವರ ಮನಸ್ಸು ಕೂಡ, ಹೆಸರೇ ಸೂಚಿಸುವಂತೆ, ಹೆಡ್ಡುಹೆಡ್ಡಾಗಿ ಇರುತ್ತೆ. ಅಂತಹವರಿಗೆ ಸಾಕಷ್ಟು ಪ್ರಮಾಣ ದಲ್ಲಿ ಕೃತಕ ಥೈರಾಯ್ಡ್ ಸಾರವನ್ನು ಉಣಿಸಿದರೆ ಅವರ ಮನಸ್ಸು ಚುರುಕಾಗಿ ಕೆಲಸಮಾಡುತ್ತದೆ.

ಥೈರಾಯ್ಡ್ ಗ್ರಂಥಿಗಳ ಸಾರವು ಹೆಚ್ಚಾಗಿ ಸ್ರವಿಸುತ್ತಿದ್ದು, ಸೆರಿಬ್ರೊ-ಸ್ಪೈನಲ್ ದ್ರವದಲ್ಲಿ ಅದರ ಪ್ರಮಾಣವು ಹೆಚ್ಚಾದಾಗ, ಅಂತಹವರ ಮನಸ್ಸು ಬಹಳ ಚುರುಕಾಗಿರುತ್ತದೆ. ಅಷ್ಟೇ ಅಲ್ಲ. ಅದಕ್ಕಿಂತಲೂ ಮಿಗಿಲಾಗಿ ಅಂತಹವರು ಬಲು ಬೇಗ ಅಳುತ್ತಾರೆ. ಸ್ವಲ್ಪ ಕಾರಣಕ್ಕೆ ಕೂಡ ರೇಗಿಬೀಳು ತ್ತಾರೆ. ಅಂದರೆ ಮನಸ್ಸಿನಲ್ಲಿನ 'ಭಾವಗಳ' ಮೇಲೆ ಕೂಡ ಹೆಚ್ಚು ಪರಿಣಾಮ ವಾಗುತ್ತದೆ ಎಂದಂತಾಯಿತು.

ಮನಸ್ಸಿನ ಚುರುಕಿಗಾಗಲಿ, ಭಾವಪರವಶವಾಗುವ ಗುಣಕ್ಕಾಗಲಿ, ಮೆದುಳಿಗಿಂತ ಮೆದುಳನ್ನು ತೋಯಿಸುತ್ತಿರುವ ಸೆರಿಬ್ರೊ-ಸ್ಪೈನಲ್ ದ್ರವವು ಬಲು ಮುಖ್ಯ ಎನ್ನಬಹುದು.

'ಹೃದಿ ಅವೇದಿನ್' ಎಂಬ ಸಂಸ್ಕೃತಪದವು ಪ್ರಾಣಿಗಳಿಗೆ ಅನ್ವಯಿಸಲ್ಪ ಟ್ಟಿದೆ. ತಲೆಯಲ್ಲಾಗಲಿ ಎದೆಯಲ್ಲಾಗಲಿ ತಿಳಿದುಕೊಳ್ಳಲಾರದ ಪ್ರಾಣಿಗಳು ಎಂಬ ಅರ್ಥದಲ್ಲಿ ಪ್ರಾಣಿಗಳಿಗೆ ಆ ಹೆಸರನ್ನು ಹೇಳಿದ್ದಾರೆ. ಹೃ ಎಂದರೆ ಹರಿಯುವುದು, ಕೊಂಡೊಯ್ಯುವುದು, ಸಾಗಿಸುವುದು ಎಂಬ ಅರ್ಥ ಬರುತ್ತದೆ.

ಹೃತ್ ಎಂದಾಗ ಎದೆಯಗೂಡಿನಲ್ಲಿರುವ ಮಾಂಸದ ಅಂಗ ಎಂದು ಅರ್ಥ ಮಾಡಿ, ಆ ಅಂಗದಲ್ಲೇ ಭಾವನಾಕೇಂದ್ರಗಳಿವೆ ಎಂದು ತಪ್ಪು ತಿಳಿದಿದ್ದಾರೋ ಎನ್ನಿಸುತ್ತದೆ. ಹೃ ಎಂದರೆ ಹರಿಯುವುದು. ಹೃದಯವು ರಕ್ತವನ್ನು ಹರಿಸು ತ್ತದೆ. ಹರಿಯುತ್ತಿರುವ ಈ ವ್ಯವಸ್ಥೆಯಲ್ಲೇ ಭಾವನಾಕೇಂದ್ರಗಳಿವೆ ಎಂದರೆ

ಸಮಂಜಸವಾಗಿ ಕಾಣುತ್ತದೆ. ದೇಹದಲ್ಲಿ ಹರಿಯುತ್ತಿರುವ ದ್ರವಗಳಿಂದಲೇ ಮನುಷ್ಯನ ಭಾವನಾಕೇಂದ್ರಗಳು ಸುಸೂತ್ರವಾಗಿ ಕೆಲಸಮಾಡಲು ಸಾಧ್ಯ. ಮೂಲಭೂತವಾದ ಮತ್ತು ಸಮಂಜಸವಾದ ಈ ಅರ್ಥವನ್ನು ಮಾಡಿದಾಗ ಮನಸ್ಸು ಎಷ್ಟರಮಟ್ಟಿಗೆ ಹರಿಯುತ್ತಿರುವ ದ್ರವಗಳನ್ನು ಅವಲಂಬಿಸಿದೆ, ಅದರಲ್ಲಿಯೂ ಭಾವನಾರೂಪಿನ ಕಾರ್ಯಗಳು ಎಷ್ಟು ಮುಖ್ಯವಾಗಿ ಈ ದ್ರವ ಗಳನ್ನು ಅವಲಂಬಿಸಿವೆ ಎಂಬುದು ತಿಳಿಯುತ್ತದೆ.

ನಡೆಯುವ ಎಲ್ಲ ಕಾರ್ಯಕ್ಕೂ. ನಡಸುವ ಸಮಿತಿಯು ಅಧ್ಯಕ್ಷನ ಹೆಸರನ್ನು ಇಡುವುದಿಲ್ಲವೆ ? ಹಾಗೆಂದು ನಾಮಕರಣಮಾಡಿದಾಕ್ಷಣ, ಅಧ್ಯಕ್ಷನೇ ಎಲ್ಲ ಕಾರ್ಯವನ್ನೂ ಮಾಡಿದ ಎನ್ನಬಹುದೆ ? ತಾಂತ್ರಿಕ ಸಮಿತಿಗೆ ನಾಲ್ವರು ತಾಂತ್ರಿಕ ಸದಸ್ಯರಿದ್ದರೆ, ಆಡಳಿತಾನುಭವವಿದ್ದ ಒಬ್ಬಾತನನ್ನು ಅಧ್ಯಕ್ಷನನ್ನಾಗಿ ನೇಮಿಸುತ್ತಾರೆ. ಸಮಿತಿಗೆ ಆತನ ಹೆಸರೇ ಅಂಟಿಕೊಳ್ಳುತ್ತದೆ. ಆದರೆ ಕೆಲಸವೆಲ್ಲವೂ ತಾಂತ್ರಿಕರಿಂದಲ್ಲವೇ ಸಾಗುವುದು ? ಅದೇ ರೀತಿ ಇಲ್ಲಿಯೂ ಹೃದಯದ ಕೆಲಸ. ಮಾಂಸದ ಅಂಗವನ್ನು ಅದು ಮಾಡುವ ಕೆಲಸಕ್ಕೇ ಅನ್ವಯಿಸುವುದು ನಮ್ಮ ತಪ್ಪೇನೋ ಎನಿಸುತ್ತದೆ.

ನಿಜವಾಗಿ ಮೆದುಳಿನ ಸೆರಿಬ್ರುನಲ್ಲಿ, ಭಾವನಾಕೇಂದ್ರಗಳಿರುವ ಲಿಂಬಿಕ್ ಸಿಸ್ಟಮ್‌ನಲ್ಲಿ, ಹಾಗೂ ಮೆದುಳನ್ನು ತೋಯಿಸಿಡುತ್ತಿರುವ ಸೆರಿಬ್ರೊ ಸ್ಪೈನಲ್ ದ್ರವದಲ್ಲಿ ಮನಸ್ಸು ಕಾರ್ಯ ನಡಸುತ್ತದೆ ಎಂದಂತಾಯಿತು.

ಈ ದೃಷ್ಟಿಯಿಂದ ನೋಡಿದರೆ, ಮನಸ್ಸು ದೇಹದ ಎಲ್ಲ ಮೂಲೆಗಳಲ್ಲೂ ಒಂದು ರೀತಿಯ ಪರಸ್ಪರ ಸಂಪರ್ಕವನ್ನು ಹೊಂದಿದೆ ಎನ್ನಬಹುದು.

## ಮನಸ್ಸಿನ ಸ್ವಭಾವ ಎಂತಹದು ?

### (ಅ)

ನಮ್ಮ ದೇಹಕ್ಕೆ, ಚರ್ಮವು ಹೊರಗಿನ ವಾತಾವರಣದಿಂದ ರಕ್ಷಣೆಯನ್ನು ಕೊಡುತ್ತದೆ. ಕೆಲವು ಪ್ರಾಣಿಗಳಲ್ಲಿ (ಉದಾ : ಮುಳ್ಳುಹಂದಿಯಲ್ಲಿ) ಹೊರ ಚರ್ಮವು ಆತ್ಮರಕ್ಷಣೆಯ ಆಯುಧವೂ ಆಗಿದೆ. ಇನ್ನೂ ಕೆಲವು ಪ್ರಾಣಿಗಳಲ್ಲಿ,

(ಘೇಂಡಾಮೃಗಗಳು, ಆನೆಗಳು, ಮೊಸಳೆಗಳು ಇಂತಹವುಗಳಲ್ಲಿ) ಚರ್ಮವು ಬಹಳ ಗಡುಸಾಗಿಯೂ ದಪ್ಪವಾಗಿಯೂ ಇದ್ದು ಹೆಚ್ಚು ರಕ್ಷಣೆಯನ್ನು ಕೊಡುತ್ತದೆ. ಬೇರೆ ಕೆಲವು ಪ್ರಾಣಿಗಳಲ್ಲಿ (ಹಾವುಗಳು, ಹಲ್ಲಿಗಳು ಇಂತಹವುಗಳಲ್ಲಿ, ಚರ್ಮವು ತೆಳುವಾಗಿದ್ದು ರಕ್ಷಣೆಯನ್ನು ಹೆಚ್ಚಾಗಿ ಮಾಡಲಾರದು. ಮನುಷ್ಯನ ಚರ್ಮವು ಅತಿಗಡುಸಾಗಿಯೂ ಇರದೆ, ಅತಿತೆಳುವಾಗಿಯೂ ಇರದೆ ಮಧ್ಯಮ ರೀತಿಯದಾಗಿರುತ್ತೆ.

ನಮ್ಮ ದೇಹದ ಒಳಭಾಗವು ಕೂಡ ಮ್ಯೂಕಸ್ ಮೆಂಬ್ರೇನ್ ಎಂಬ ತೇಪೊರೆಯಿಂದ ರಕ್ಷಣೆಯನ್ನು ಪಡೆದಿದೆ. ದೇಹವು ಒಳಗೂ ಹೊರಗೂ ಈ ರೀತಿಯಲ್ಲಿ ರಕ್ಷಣೆಯನ್ನು ಪಡೆದಿದೆ.

ಆದರೆ ಮನಸ್ಸಿಗೆ ಈ ರೀತಿಯ ಕವಚವಾವುದೂ ಇಲ್ಲ. (೧) ಪಂಚೇಂದ್ರಿಯಗಳ ಮೂಲಕ ಹೊರಗಿನ ವಾತಾವರಣವನ್ನು ಮನಸ್ಸು ಅರಿತುಕೊಳ್ಳುತ್ತದೆ. (೨) ಮೆದುಳಿನಲ್ಲಿ ಹುದುಗಿರುವ 'ನೆನಪು'ಗಳಿಂದಲೂ ಮನಸ್ಸು ಎಚ್ಚರಗೊಳ್ಳಲು ಸಾಧ್ಯ. (೩) ದೇಹದ ಒಳಗಿರುವ ಅಂಗಾಂಗಗಳಿಂದ ಬರುವ ಸಂದ್ದಿಗಳೆಲ್ಲವೂ ಲಿಂಬಿಕ್‌ಸಿಸ್ಟಂನಲ್ಲಿರುವ ಸ್ವಯಂಹತೋಟಿ ಪಡೆದಿರುವ ನರಕೇಂದ್ರಗಳಿಗೆ ತಲವುತ್ತವೆ. ಅಲ್ಲಿಂದ ಸೆರಿಬ್ರಂನಲ್ಲಿರುವ ಮನಸ್ಸಿನ ಸಂಪರ್ಕವನ್ನು ಹೊಂದುತ್ತವೆ. ಈ ಮೂರೂ ಕಾರ್ಯಕ್ರಮಗಳೂ ಸ್ವಾಭಾವಿಕವಾಗಿ ನಡೆಯುತ್ತವೆ. ಇವುಗಳನ್ನು ಬೇಡ ಎಂದಾಗ ಸೋಸಿ ತಡೆಯುವ ಪೊರೆ ಯಾವುದೂ ಇಲ್ಲ. ದೇಹಕ್ಕೆ ಚರ್ಮವು ರಕ್ಷಣೆಯಾದಂತೆ ಮನಸ್ಸಿಗೆ ಯಾವ ವಾಸ್ತವಿಕ ಕವಚವೂ ಇರುವುದಿಲ್ಲ. ಮನಸ್ಸೇ ಮನಸ್ಸುಮಾಡಿ, ಸ್ವಯಂ ಪ್ರೇರಿತವಾಗಿ ತನ್ನ ರಕ್ಷಣೆಯನ್ನು ಮಾಡಿಕೊಳ್ಳಬೇಕು

(೩)

ಹೊರಗಿನ ವಾತಾವರಣದ ಅರಿವನ್ನು ಮಾಡಿಕೊಡಲು ಪಂಚೇಂದ್ರಿಯಗಳು ಸಾಧನ ಎಂದು ಹೇಳಿದೆವು. ಆದರೆ ಕೆಲವೊಮ್ಮೆ ಅಸ್ಪಷ್ಟವಾದ ಮತ್ತೊಂದು ಮಾರ್ಗದಿಂದಲೂ ಹೊರವಾತಾವರಣದ ಸುದ್ದಿಯನ್ನು ತಿಳಿಯಬಹುದು. ಉದಾ : ದೂರದ ಊರಿನಲ್ಲಿರುವ ನಿಕಟಸಂಬಂಧವನ್ನು ಹೊಂದಿದ

ಯಾರಿಗಾದರೂ ಅಪಘಾತವಾಗಿ ಸಾವು ಉಂಟಾದರೆ, ಅದೇ ಕಾಲದಲ್ಲಿ ಅತಿಯಾದ ಕಳಕಳಿಯಿಂದ ಕಾರಣ ತಿಳಿಯದೆ ದುಃಖವನ್ನು ಅನುಭವಿಸಬಹುದು ಅಥವಾ ಘಟನೆಯು ಸಂಭವಿಸುವ ಮೊದಲೇ, ಕನಸಿನಲ್ಲಿ ಕಾಣಬಹುದು. ಹಾಗೂ ಕೆಲವೊಮ್ಮೆ ಎಚ್ಚರವಾಗಿದ್ದರೂ ಅಂತಹ ಘಟನೆಯನ್ನು, ಸಂಭವಿಸುವ ಮೊದಲೇ ಕೆಲವರು ವರ್ಣಿಸಿದ ನಿದರ್ಶನಗಳಿವೆ. ಅನಂತರ ಕೆಲವು ದಿನಗಳೋ ವಾರಗಳೋ ಆದಮೇಲೆ, ಘಟನೆಯು ನಡೆದ ಸುದ್ದಿಯೂ ವಿವರಗಳೂ ತಿಳಿದು ಬಂದಾಗ, ಕನಸಿನಲ್ಲಿ ಕಂಡದ್ದು ದಿಟ ಎಂದು ಅನ್ನಿಸುತ್ತದೆ.

ನಮ್ಮ ಮನಸ್ಸಿನ ಅರಿವಿಗೆ ಈ ಸುದ್ದಿಯು ಹೊರವಾತಾವರಣದಿಂದ ಹೇಗೆ ಬಂದಿತು ? ಹೀಗೆ ಬಂದಿರುವ ನಿದರ್ಶನಗಳು ಸಾಕಷ್ಟು ಇವೆ. ವೈಜ್ಞಾನಿಕ ವಿಚಾರಣಾಪ್ರಯೋಗಗಳೂ ನಡಸಲ್ಪಡುತ್ತಿವೆ. ಆದರೆ ಇನ್ನೂ ಸಿದ್ಧಾಂತ ವಾಗಿಲ್ಲ. ಆದರೂ ಮನಸ್ಸು, ಪಂಚೇಂದ್ರಿಯಗಳ ಹೊರತಾದ, ಈ ತನಕ ಅಸ್ಪಷ್ಟವಾದ, ಅ-ದೃಶ್ಯವಾಗಿರುವ ಮಾರ್ಗದಿಂದ ತಿಳಿಯಬಲ್ಲ ಇದು ಆರನೇ ಇಂದ್ರಿಯವೇ ? ಅಥವಾ ಮನಸ್ಸಿನ ಕೆಲವು ಅವಸ್ಥೆಗಳಲ್ಲಿ ಇಂತಹ ಅರಿವು ಬರಬಹುದೇ ? ಹಾಗಾದರೆ ಆ ಅರಿವು ಉಂಟಾಗುವ ವಿಧಾನವೇನು ? ಇವು ಯಾವುದಕ್ಕೂ ಈ ತನಕ ಉತ್ತರಗಳು ದೊರಕಿಲ್ಲ, ಮನಸ್ಸಿನ ಸ್ವರೂಪದಲ್ಲಿ ಇದೂ ಅಡಕವಾಗಿದೆ ಎನ್ನುವುದು ಖಂಡಿತ. ಆಧ್ಯಾತ್ಮಿಕ ಪ್ರಗತಿಯನ್ನು ಸಾಧಿಸಿದವರಲ್ಲಿ ಈ ಗುಣವು ಯಥೇಚ್ಛವಾಗಿರುವುದೂ ಖಂಡಿತ.

(೩)

ಮನಸ್ಸು ಚುರುಕಾಗಿ ಕೆಲಸ ಮಾಡಲು ದೇಹದ ತಾಳಬದ್ಧ (Rythmic) ಕಾರ್ಯಕ್ರಮಗಳೂ ಬಹಳ ಸಹಾಯವನ್ನು ಮಾಡುತ್ತವೆ. ಉದಾಹರಣೆಗೆ ಪ್ರಾಚೀನ ಪಾಶ್ಚಾತ್ಯ ಪ್ರಜ್ಞಾವಂತ ಅರಿಸ್ಟಾಟಲ್ ತನ್ನ ಶಿಷ್ಯರೊಂದಿಗೆ ಸಂಭಾಷಣೆ ಮಾಡುತ್ತ ಪಾಠ ಹೇಳುವಾಗ ನಡೆದಾಡುತ್ತಿದ್ದ. ಕೂತುಕೊಂಡಾಗ ಅವನ ಮನಸ್ಸು ಚುರುಕಾಗಿ ಕೆಲಸ ಮಾಡುತ್ತಿರಲಿಲ್ಲ.

ಅರಿಯುವ ಸಂಕಲ್ಪದ ಸಂಕೇತವಾಗಿ, ದರ್ಭೆಯ ಉಂಗುರವನ್ನು ಧರಿಸಿ, ಸಮಿತ್ತುಗಳನ್ನು ಅಗ್ನಿಗೆ ತಾಳಹಾಕಿದಂತೆ ಸ್ವಾಹಾ ಎಂದು ಹಾಕುತ್ತಾ ಮಂತ್ರ

ಗಳ ಪುನಶ್ಚರಣೆಯನ್ನು ಮಾಡುತ್ತಾ ಹಿಂದಿನ ಋಷಿಗಳು ಮನಸ್ಸನ್ನು ಯಶಸ್ವಿಯಾಗಿ ಚುರುಕಾಗಿ ನಡೆಸಿ. ಉಪನಿಷತ್ತುಗಳಂತಹ ಚಿರಸತ್ಯವನ್ನರುಹುವ ಪಾಠಗಳನ್ನು ಬೋಧಿಸಿದರು.

ತಕಲಿಯನ್ನು ಕ್ಷಣಕ್ಕೊಮ್ಮೆ ಯಾಂತ್ರಿಕವಾಗಿ ತಿರುಗಿಸುತ್ತ ಜನಿವಾರವನ್ನು ನೂಲುತ್ತ, ಮನನ ಹಾಗೂ ಧ್ಯಾನ ಮಾಡುತ್ತಿದ್ದ ಹಿರಿಯರಿಗೂ ದೇಹದ ತಾಳಬದ್ಧ ಚಟುವಟಿಕೆಯು ಮನಸ್ಸನ್ನು ಚುರುಕುಗೊಳಿಸುತ್ತದೆ ಎಂದು ಅನುಭವದಿಂದ ತಿಳಿದಿದ್ದಿರಬೇಕು.

ಅದೇ ರೀತಿ ರಾಟೆಯನ್ನು ಯಾಂತ್ರಿಕವಾಗಿ ನೂಲುತ್ತ ಗಾಂಧೀಜಿಯವರು ರಾಜಕೀಯ ಸಮಸ್ಯೆಗಳನ್ನು ಪರಿಹರಿಸಲು ಹೊಸ ಮಾರ್ಗಗಳನ್ನು ಕಂಡು ಹಿಡಿದರು.

ನಮ್ಮ ನಿತ್ಯದ ಬಾಳಿನಲ್ಲಿ ಮನಸ್ಸನ್ನು ಹರಿತವಾಗಿ ಉಪಯೋಗಿಸಬೇಕಾದಾಗ ಕೆಲವರು ಅಂಗಿಯ ಗುಂಡಿಯನ್ನು ತಿರುಚುತ್ತ ಇರುತ್ತಾರೆ. ಮತ್ತೆ ಕೆಲವರು ಜೇಬಿನಲ್ಲಿ ಕೈ ಇರಿಸಿಕೊಂಡು ಬೀಗದ ಕೈ ಗೊಂಚಲನ್ನು ತಾಳಬದ್ಧವಾಗಿ ತಟ್ಟುತ್ತಿರುತ್ತಾರೆ. ಕುರ್ಚಿಯ ಮೇಲೆ ಕುಳಿತು ಬರೆಯುವಾಗ ಕಾಲಿನಿಂದ ನೆಲದ ಮೇಲೆ ತಾಳ ಹಾಕುವುದೂ, ಮೇಲೆ ಹೇಳಿದ ಮೂಲಭೂತ ಕಾರಣದಿಂದಲೇನೆ.

ಸಹಸ್ರ ಕುಂಕುಮಾರ್ಚನೆ ಅಭಿಷೇಕಗಳು ಮುಂತಾದ ತಾಳಬದ್ಧ ಪೂಜಾವಿಧಾನಗಳು ಕೂಡ ಪೂಜೆಮಾಡುವವನ ಮನಸ್ಸು ಧ್ಯಾನಾಸಕ್ತವಾಗಲು ಸಹಾಯಮಾಡುತ್ತವೆ ಎಂದೆನ್ನಬಹುದು.

(ಈ)

ನರಪೇತಲ ನಾರಾಯಣನ ಹಾಗಿರುವವರು, ಕೆಲವೊಮ್ಮೆ ಆವೇಶ ಬಂದಾಗ ರಾಕ್ಷಸಶೌರ್ಯವನ್ನು ಧೈರ್ಯದಿಂದ ಪ್ರದರ್ಶಿಸುತ್ತಾರೆ. ಇಂತಹವರೆಲ್ಲರೂ ಸಾಮಾನ್ಯವಾಗಿ ಯಾವುದಾದರೂ ಒಂದು ಶಕ್ತಿಯ ಉಪಾಸನೆಯನ್ನು ಚಾಚೂತಪ್ಪದೆ ಮಾಡುತ್ತಾರೆ. ಹಾಗೆ ಮಾಡಿದರೆ ಶಕ್ತಿಯು ಒಲಿದು ಶಕ್ತಿಯನ್ನು ಕರುಣಿಸುತ್ತಾಳೆ ಎಂದು ಅವರು ದೃಢವಾಗಿ ನಂಬಿರುತ್ತಾರೆ.

ದೃಢವಾದ ನಂಬುಗೆಯೇ ದೈಹಿಕಶಕ್ತಿಯನ್ನು ಅಪಾರವಾಗಿ ಒದಗಿಸುತ್ತದೆ. ಉದಾಹರಣೆಗೆ :

ಹಲವಾರು ಹಳ್ಳಿಗಳಲ್ಲಿ ಬೆಂಕಿಯ ಮೇಲೆ ನಡೆಯುವ ಪೂಜಾವಿಧಾನವು ಈಗಲೂ ಆಚರಿಸಲ್ಪಡುತ್ತಿದೆ. ಹತ್ತು ಹದಿನೈದು ಅಡಿ ಉದ್ದದ, ಮೂರು ನಾಲ್ಕು ಅಡಿ ಅಗಲದ, ಒಂದೆರಡು ಅಡಿ ಆಳದ ಹಳ್ಳವೊಂದನ್ನು ತೋಡುತ್ತಾರೆ. ಸೌದೆ ಇಜ್ಜಲುಗಳನ್ನು ಹಾಕಿ ಹಚ್ಚಿ ನಿಗಿನಿಗಿ ಬೆಂಕಿಯಾಗುವಂತೆ ಮಾಡುತ್ತಾರೆ. ಹರಕೆ ಹೊತ್ತ ಕೆಲವು ಮನೆತನದವರು, ಸ್ನಾನಮಾಡಿಕೊಂಡು ಬಂದು, ಮನೆ ದೇವರ ಹೆಸರನ್ನು ಘೋಷಿಸುತ್ತಾ, ಈ ತುದಿಯಿಂದ ಆ ತುದಿಯ ತನಕ ಬೆಂಕಿಯ ಮೇಲೆ ಬರೀ ಅಂಗಾಲಿನಲ್ಲಿ ನಡೆದುಹೋಗುತ್ತಾರೆ. ಅವರ ಅಂಗಾಲಿಗೆ ಏನೂ ಅಪಾಯವಾಗಿರುವುದಿಲ್ಲ, ಅಂಗಾಲು ಸುಟ್ಟಿರುವುದಿಲ್ಲ, ಸೀದಿರುವುದಿಲ್ಲ.

ವೈಜ್ಞಾನಿಕರು ಇದನ್ನು ಪರೀಕ್ಷೆಮಾಡಿದಾಗ, ತಿಳಿದು ಬಂದಿರುವುದು ಇಷ್ಟು : ಬೆಂಕಿಯಿರುವ ಆ ಕುಂಡದ ಮೇಲೆ ಆಲೂಗಡ್ಡೆಯನ್ನು ಹಾಕಿದರೆ ಎರಡು ನಿಮಿಷದಲ್ಲಿ ಸುಟ್ಟು ಕರಕಲಾಗುತ್ತೆ. ಮೂರು ಸೇರಿನ ಅನ್ನದ ಪಾತ್ರೆ ಇಟ್ಟರೆ, ಹತ್ತು ನಿಮಿಷದಲ್ಲಿ ಅನ್ನ ಬೆಂದಿರುತ್ತೆ. ಅಷ್ಟು ಬಿಸಿಯಿರುತ್ತೆ. ಕುಂಡದ ಮೇಲೆ ನಡೆದಾಡುವ ಭಕ್ತರು ಅಂಗಾಲಿಗೆ ಯಾವುದೊಂದು ರಸವನ್ನಾಗಲಿ, ಮದ್ದನ್ನಾಗಲಿ ಹಚ್ಚಿಕೊಳ್ಳುವುದಿಲ್ಲ. ಆದರೆ ಅವರು ಕುಂಡದ ಮೇಲೆ ನಡೆದಾಗ, ಅವರುಗಳ ಅಂಗಾಲು ಬೆಂಕಿಯ ಮೇಲೆ ಕ್ಷಣಾಂಶ ಮಾತ್ರ ಸೋಕುತ್ತದೆ. ಆ ಅಂತರದಲ್ಲಿ ಅಂಗಾಲಿನ ಚರ್ಮವು ಸುಡಲು ಸಾಧ್ಯವಿಲ್ಲ. ಆದಕಾರಣವೇ ಅವರುಗಳು ಈ ಪವಾಡವನ್ನು ಪ್ರದರ್ಶಿಸಲು ಸಾಧ್ಯವಾಗಿದೆ.

'ಹೌದು ! ಹಾಗೆ ಅಗ್ನಿಕುಂಡದ ಮೇಲೆ ನಡೆವವರಂತೆ ನೀವೂ ನಡೆಯುತ್ತೀರಾ ? ಅವರ ಹಾಗೆಯೇ ನಡೆದರೆ ಕ್ಷಣಾಂಶಮಾತ್ರ ಅಂಗಾಲು ಬೆಂಕಿಯನ್ನು ಸೋಕಿದರೆ ಏನೂ ಅಪಾಯವಾಗುವುದಿಲ್ಲವಲ್ಲ ?' ಎಂದು ಹೇಳಿದರೆ, ಆ ವಿಜ್ಞಾನಿಗಳು 'ನಮಗೆ ಅಷ್ಟು ಧೈರ್ಯವಿಲ್ಲ. ಆದರೆ ಹಾಗೆ ನಡೆದಾಗ ಅಂಗಾಲು ಸುಡಲು ಅವಕಾಶವಿರುವುದಿಲ್ಲ ಎಂದು ಮಾತ್ರ ಹೇಳಬಲ್ಲೆವು' ಎಂದಾರು. ಹೀಗೆ ಹೇಳಿದ ಮೇಲೆ ಯೋಚಿಸಿಯಾರು : ಯೋಚಿಸಿದ ಮೇಲೆ "ಮನೆದೇವರಲ್ಲಿ ದೃಢವಾಗಿರಿಸಿದ ನಂಬುಗೆಯೇ ಭಕ್ತರ ಧೈರ್ಯಕ್ಕೆ ಬೆಂಬಲ,

ಆ ಧೈರ್ಯದಿಂದಲೇ ಅವರುಗಳು ಪವಾಡಮಾಡುತ್ತಿರುವ ಸಾಧನೆಗಳನ್ನು ಪಡೆದಿರ ಬಲ್ಲರು" ಎಂದು ತೀರ್ಮಾನಿಸಿಯಾರು.

ಇಂತಹ ನಂಬುಗೆಯು ಆ ಮನೆತನದ ಎಳೆಯ ಹುಡುಗರಲ್ಲಿ ಮೂಡಲು ಹೇಗೆ ಸಾಧ್ಯ ! ಆನುವಂಶಿಕವಾಗಿ ಇಂತಹ ನಂಬುಗೆಯು ಅವರಲ್ಲಿ ಹುದುಗಿದ್ದಿರ ಬಹುದೆ ? ಬಾಲ್ಯದಿಂದಲೂ ತಂದೆತಾಯಿ, ಅಜ್ಜಅಜ್ಜಿಯರ ನಡವಳಿಕೆಯಿಂದ ಆ ನಂಬುಗೆಯು ಬೆಳೆದು ಬಂದಿರಬೇಕು. ಹೇಗೇ ಆಗಲಿ, ಮೂಢನಂಬಿಕೆ ಯಾದರೂ ದೃಢವಾದುದಾದರೆ, ಮನಸ್ಸಿಗೆ ಧೈರ್ಯವನ್ನು ತುಂಬಿ ದೈಹಿಕ ಪವಾಡಗಳನ್ನು ನಡಸಬಹುದು ಎನ್ನಬೇಕು.

ಯಾವುದಾದರೂ ಸಮಸ್ಯೆ ತಲೆದೋರಿದಾಗ, ಅದರ ಆಗುಹೋಗುಗಳ ನ್ನೆಲ್ಲಾ ವಿಚಾರ ಮಾಡಿ, ಇದರ ಮರ್ಮ ಇಷ್ಟೇ ಎಂದು ನಿರ್ಧರಿಸಿ, ಧೈರ್ಯ ದಿಂದ ಎದುರಿಸಿ ಜಯ ಗಳಿಸಬಹುದು. ಆದರೆ ಕೆಲವೊಮ್ಮೆ ಮೂಢನಂಬಿಕೆ ಯಿದ್ದವರು ಹಿಂದು ಮುಂದು ನೋಡದೆ ದೃಢ ನಂಬುಗೆಯಿಂದ ಮುನ್ನುಗ್ಗಿ ಸಮಸ್ಯೆಯನ್ನು ಪರಿಹರಿಸುವುದನ್ನೂ ಕಾಣುತ್ತೇವೆ. ಬಾಳನ್ನು ಸಾಕಷ್ಟು ಸುಗಮವಾಗಿ ನಡಸಿಕೊಂಡು ಹೋಗಲು ಮನಸ್ಸಿನ ತಾರ್ಕಿಕ, ಅಥವಾ ವಿಚಾರಣಾ ಶಕ್ತಿಯು ತುಂಬ ಸಹಾಯ ಮಾಡುತ್ತದೆ. ಹಾಗೂ ಮೂಢ ನಂಬಿಕೆಯಾದರೂ ದೃಢವಾಗಿದ್ದರೆ, ಅದು ಕೂಡ ಬಾಳನ್ನು ಸಾಗಿಸಲು ಸಹಾಯಕವಾಗಿದೆ ಎಂದೆನ್ನಬೇಕು. ಆದರೆ ಮಾನಸಿಕ ವಿಚಾರಣಾಶಕ್ತಿಯಿಂದ ಪ್ರಗತಿ ಸಾಧ್ಯ ; ಮೂಢನಂಬಿಕೆಯಿಂದ ಪ್ರಗತಿ ಸಾಧ್ಯವಾಗುವುದಿಲ್ಲ.

(೭)

'ಮನಸ್ಸಿನ ಸ್ವಭಾವವೇ ಬಹಳ ಚಂಚಲ' ಎಂದು ಹೇಳುವುದನ್ನು ಎಲ್ಲರೂ ಕೇಳಿದ್ದೇವೆ. ಆದರೆ ಹೀಗೆ ಹೇಳುವಾಗ ವಿವರಣೆಯನ್ನೂ ಕೊಡ ಬೇಕು. ಯಾತರದಾದರೂ ಒಂದು ಗೀಳು ಮನಸ್ಸಿಗೆ ಬಡಿಯಿತು ಅಂದರೆ, 'ಇದನ್ನು ಮರೆತರೆ ಸಾಕಪ್ಪಾ, ಮನಸ್ಸು ಚಂಚಲವಾಗಿದ್ದರೆ ಚೆನ್ನಾಗಿತ್ತಲ್ಲ !' ಎಂದು ಅನ್ನಿಸುವುದಿಲ್ಲವೆ ? ಅಂದಮೇಲೆ ಮನಸ್ಸು ಚಂಚಲ ಸ್ವಭಾವವುಳ್ಳದ್ದು ಎನ್ನುವಾಗ ಅರ್ಧ ಸತ್ಯವನ್ನು ಮಾತ್ರ ಹೇಳಿದಂತಾಗುತ್ತದೆ. ಎಳೆಯ

ಮಕ್ಕಳಿಂದ ಮುದುಕರವರೆಗೆ ಮನಸ್ಸು ಚಂಚಲ ಸ್ವಭಾವವನ್ನು ತೋರು ತ್ತದೆಯೆ? ತೋರಿದರೆ ಯಾವಾಗ? ಎನ್ನುವುದನ್ನು ತಿಳಿಯೋಣ.

ಎಳೆಯ ಮಕ್ಕಳು ಕ್ಷಣಕ್ಕೊಂದು ಮನಸ್ಸು ಮಾಡಿಕೊಂಡು ಆಟವಾಡು ವುದನ್ನು ನೋಡಿದ್ದೇವೆ. ಮಕ್ಕಳ ಮನಸ್ಸು ಚಂಚಲ ಎಂದು ಹೇಳಬಹುದು. ಆದರೆ ಎಳೆಯ ಮಕ್ಕಳು ಹಟ ಹಿಡಿದು ಅಳುವಾಗ, ರಚ್ಚೆಮಾಡುವಾಗ ಅವುಗಳ ಮನಸ್ಸು ಚಂಚಲವಾಗಿರುತ್ತದೆಯೆ? 'ಚಂದ್ರ ಬೇಕು' ಎಂದು ಶ್ರೀರಾಮಚಂದ್ರ ಅಳುವುದಕ್ಕೆ ಶುರು ಮಾಡಿದಾಗ, ಯಾರೇನು ಸಮಾಧಾನ ಮಾಡಿದರೂ ಯಾವ ಆಸೆ ತೋರಿಸಿದರೂ ಅವ ತನ್ನ ಹಟವನ್ನು ಬಿಡಲೇ ಇಲ್ಲ. ಆಗ ಮಂಥರೆ ಬಂದು ಅವನ ಕೈಲಿ ಕನ್ನಡಿಯನ್ನು ಕೊಟ್ಟು, ಅದರಲ್ಲಿ ಚಂದ್ರನ ಬಿಂಬ ವನ್ನು ತೋರಿಸಿ, 'ಚಂದ್ರ ಈಗ ನಿನ್ನ ಕೈಲಿದ್ದಾನೆ' ಎಂದಾಗ ಸುಮ್ಮನಾದ. ಆದರೆ ಮರುಕ್ಷಣದಲ್ಲೇ ಕನ್ನಡಿಯನ್ನು ಎಸೆದು ಬೇರೆ ಯಾವುದೋ ಆಟಕ್ಕೆ ತೊಡಗಿದ. ಅಂದರೆ, ಮನಸ್ಸಿಗೆ ಬೇಕು ಎಂದು ಚೆಂದ ಕಂಡುದನ್ನು ಬಯಸಿ ದಾಗ ಮನಸ್ಸು ಕಾಮ್ಯವಾದುದಕ್ಕೇ ಕಚ್ಚಿಕೊಳ್ಳುತ್ತದೆ. ಅದು ಗಿಟ್ಟಿತು ಅಂದರೆ ಮನಸ್ಸು ಇನ್ನು ಯಾವುದಕ್ಕಾದರೂ ಕಾತರಪಡುತ್ತದೆ, ಚಂಚಲತೆ ಯನ್ನು ಹಾಗೆ ತೋರಿಸುತ್ತದೆ.

ಯೌವನದಲ್ಲಿ ಮನುಷ್ಯನು ಧ್ಯೇಯವಾದಿಯಾಗಿರುತ್ತಾನೆ. ಲೋಕವನ್ನೇ ಉದ್ಧಾರ ಮಾಡಲು ಹೊರಡುವ ಕೆಚ್ಚಿನ ವಯಸ್ಸು. ಚಿಗುರುಮೀಸೆ ಬಂದಿತ್ತು ಅಭಿಮನ್ಯುವಿಗೆ. ಅಪ್ಪ ಚಿಕ್ಕಪ್ಪಂದಿರು ಯಾರೂ ಇದ್ದಿಲ್ಲ. ಕುರುಕ್ಷೇತ್ರದಲ್ಲಿ. ಶತ್ರುಗಳು ವ್ಯೂಹ ರಚಿಸಿಕೊಂಡು ನುಗ್ಗಿದಾಗ, ಅಭಿಮನ್ಯು ಹಿಂದುಮುಂದು ನೋಡದೆ ಧ್ಯೇಯ ಸಾಧನೆಗಾಗಿ ಮುನ್ನುಗ್ಗಿದ. ಧ್ಯೇಯ ಸಾಧನೆಯೇ ಯೌವನದಲ್ಲಿ ಪ್ರಿಯವಾದುದು. ಹಾಗಾಗಿ ಮನಸ್ಸು ಪ್ರಿಯವಾದುದಕ್ಕೆ ಕಚ್ಚಿಕೊಂಡಿತ್ತು. ಮನಸ್ಸು ಚಂಚಲವಾಗಿದ್ದರೆ ಅಭಿಮನ್ಯು ಬದುಕಿಕೊಳ್ಳು ತ್ತಿದ್ದನೇನೋ!

ಯೌವನದಲ್ಲಿ ದೈಹಿಕ ಬೇಡಿಕೆಗಳು ರಾಗಭಾವಗಳನ್ನು ಹುರಿದುಂಬಿಸು ತ್ತಿರುವಾಗ, ಈ ಬೇಡಿಕೆಗಳ ಪೂರೈಕೆಯೂ ಮನಸ್ಸನ್ನು ಸಮ್ಮೋಹನಾಸ್ತ್ರದಲ್ಲಿ ಬಿಗಿಯುತ್ತದೆ. ಹಾಗಾಗುವುದರಿಂದಲೇ ಕಾಮಾತುರರಾದವರಿಗೆ ಭಯವೂ

ಇಲ್ಲ, ಲಜ್ಜೆಯೂ ಇಲ್ಲ, ಎನ್ನುವುದು. ಮನಸ್ಸು ಆಗ ಮೋಹನಾಸ್ತ್ರಕ್ಕೆ ಸೆರೆ ಸಿಕ್ಕಿ ಹೋಗುತ್ತದೆ.

ಮುಂದುಕರ ಮನಸ್ಸು ಬಾಳಿನ ಕಹಿ ಸಿಹಿ ನೆನಪುಗಳಿಂದ ತುಂಬಿರುತ್ತದೆ. ವಯಸ್ಸಿನಲ್ಲಿ ಯಾವುದಕ್ಕಾದರೂ ತುಂಬಾ ಆಸೆಪಟ್ಟು ಅದು ಸಿಗದೆ ಇದ್ದರೆ, ಆ ಆಸೆಯೇ ಇವರುಗಳ ಮನಸ್ಸನ್ನು ಶನಿ ಹಿಡಿದಂತೆ ಹಿಡಿಯುತ್ತದೆ. 'ಹಿರಿಯರು, ಇವರ ಸಲಹೆಯನ್ನು ಪಡೆಯೋಣ' ಎಂದು ಕಿರಿಯರು ಬುದ್ಧಿವಾದ ಕೇಳಲು ಹೋದಾಗ, ತಮ್ಮ ಹುದುಗಿರುವ ಹಳೆಯ ಆಸೆಯನ್ನು ಅವಲಂಬಿಸಿದ ಸಲಹೆಯನ್ನೇ ಕೊಡುತ್ತಾರೆ. ಹಾಗೆ ಕಿರಿಯರು ನಡೆದುಕೊಳ್ಳದಿದ್ದರೆ ಮುದಂಕರಿಗೆ ಬೇಸರವೂ ಕೋಪವೂ ಬರುತ್ತದೆ. ದೊಡ್ಡವರ ಸಲಹೆಯನ್ನು ಕೇಳಬೇಕು ; ಕೇಳಲು ಮನಸ್ಸು ಒಪ್ಪುವುದಿಲ್ಲ. ಈ ದ್ವಂದ್ವದಲ್ಲಿ ಕಿರಿಯರು ಸಿಕ್ಕಿದಾಗ ಮನೋದೈಹಿಕ ಬೇನೆಗಳು ಬರುತ್ತವೆ.

ಮನಸ್ಸಿನ ಚಂಚಲ ಸ್ವಭಾವದಿಂದ ಪಾರಾಗಬೇಕಾದರೆ ಪ್ರಿಯವಾದುದನ್ನು ಮನಸ್ಸಿಗೆ ಹಚ್ಚಬೇಕು. ಗಣಿತ ಶಾಸ್ತ್ರವನ್ನು ಕಂಡರೆ ಬೇಸರ ಪಡುವ ವಿದ್ಯಾರ್ಥಿಯನ್ನು ಗಣಿತದ ವ್ಯಾಸಂಗಕ್ಕೇ ಒತ್ತಾಯ ಪಡಿಸಿದರೆ, ಆತ ಕಷ್ಟಪಟ್ಟು ಆ ಪುಸ್ತಕವನ್ನು ಪಂಕ್ತಿಪಂಕ್ತಿಯಾಗಿ ಓದಬಹುದು. ಆದರೂ ಅಪ್ರಿಯವಾದುದರಿಂದ, ಓದುತ್ತಿರುವಾಗಲೇ ಮನಸ್ಸು ಸಿನಿಮಾ ವಿಷಯಗಳತ್ತಲೋ, ಆಟದ ವಿವರಗಳತ್ತಲೋ ಓಡುತ್ತಿರುತ್ತದೆ. ಮನಸ್ಸಿಗೆ ಅಪ್ರಿಯವಾದ ಕಸುಬನ್ನು ಕೈಗೊಳ್ಳಲೇ ಬೇಕಾದರೆ, ಅಂತಹವರಿಗೆ ಆ ಕಸುಬಿನಲ್ಲಿ ಪ್ರಾವೀಣ್ಯವು ದೊರಕುವುದಿಲ್ಲ. ಆದರೂ ಅಪ್ರಿಯವಾದ ಕಸುಬನ್ನು ಹಿಡಿದು ಕೆಲವರು ಸಾಕಷ್ಟು ಯಶಸ್ವಿಯಾಗುತ್ತಾರೆ. ಅಂತಹವರಿಗೆ ಕಸುಬು ಕೇವಲ ಹಣ ಸಂಪಾದಿಸುವ ಒಂದು ಮಾರ್ಗ. ಹೇರಳವಾದ ಹಣವೇ ಅವರಿಗೆ ಬಲು ಪ್ರಿಯ. ಅದಕ್ಕಾಗಿ ಕಸುಬು ಅಸಹ್ಯ ಕಂಡರೂ, ಬೇಸರ ಕಂಡರೂ, ಅದನ್ನು ಹಣಕ್ಕಾಗಿ ನಡಸಿಕೊಂಡು ತಕ್ಕಮಟ್ಟಿಗೆ ಯಶಸ್ವಿಯಾಗುತ್ತಾರೆ. ಆದರೆ ಆಂತರಿಕವಾಗಿ ಸುಖಪಡುತ್ತಾರೆಯೋ ಎಂಬುದು ಸಂದೇಹ.

ಬಾಳಿನಲ್ಲಿ ಸುಮಾರು ಜನರು ಮನೋದೈಹಿಕಬೇನೆಗಳಿಂದ ನರಳುವುದಕ್ಕೆ ಇದೇ ಮುಖ್ಯ ಕಾರಣ. ಮಿದುಳಿನ ಬುಡದಲ್ಲಿರುವ ಭಾವನಾಕೇಂದ್ರಗಳಿಗೆ ಆನಂದಕೊಡುವ ವಿಷಯಗಳೇ ಪ್ರಿಯವಾದುವು. ಆದರೆ ಸಮಾಜದಲ್ಲಿ ಗೆದ್ದು

ಬಾಳಬೇಕಾದರೆ ತಾರ್ಕಿಕ ಮನಸ್ಸು, ಸೆರಿಬ್ರಲ್ ಕಾರ್ಟೆಕ್ಸ್, ಇವು ನಿರ್ಣಯಿಸಿದುದನ್ನೇ ಮಾಡಬೇಕು. ಇವೆರಡರ ಘರ್ಷಣೆಯೇ ಮನೋದೈಹಿಕ ಬೇನೆಗಳಿಗೆ ಕಾರಣ.

## ಮನಸ್ಸಿನ ಚಟುವಟಿಕೆಗಳು

ಮನಸ್ಸು ಎಚ್ಚರವಾಗಿರುವಾಗ ಯಾವುದಾದರೂ ಒಂದು ವಿಷಯವನ್ನು ಯೋಚಿಸುತ್ತಲೇ ಇರುತ್ತದೆ. ಶೂನ್ಯವಾಗಿರಲು ಮನಸ್ಸಿಗೆ ದುಸ್ಸಾಧ್ಯ. ಮನಸ್ಸಿನ ನಿರಂತರವಾದ ಚಟುವಟಿಕೆಗಳನ್ನು ನಾಲ್ಕು ಭಾಗಗಳಾಗಿ ವಿಂಗಡಿಸಬಹುದು : ೧) ಹಗಲುಗನಸು ಕಾಣುವುದು ; ೨) ನಿರ್ಣಯಿಸುವುದು ; ೩) ತರ್ಕಬದ್ಧವಾಗಿ ಸಮಾಧಾನ ಹೊಂದುವುದು ; ಮತ್ತು ೪) ಪ್ರಜ್ಞಾಪೂರ್ವಕವಾದ ಚಟುವಟಿಕೆಯಿಂದಿರುವುದು.

### ೧. ಹಗಲುಗನಸು ಕಾಣುವುದು

ಬೇರೆ ಯಾವ ನಿರ್ದಿಷ್ಟ ಕೆಲಸವಿಲ್ಲದಿರುವಾಗ. ಮನಸ್ಸು ಹಗಲುಗನಸುಗಳನ್ನು ಕಟ್ಟಲು ಪ್ರಾರಂಭಿಸುತ್ತದೆ. ಕೂತಿರಲಿ, ನಿಂತಿರಲಿ, ಮಲಗಿರಲಿ, ನಡೆಯುತ್ತಿರಲಿ. ಮನಸ್ಸಿನಲ್ಲಿ ಗಾಳಿಗೋಪುರ ಕಟ್ಟುವ ಹವ್ಯಾಸ ಮುಂದುವರಿಯುತ್ತದೆ. ಮನಸ್ಸಿಗೆ ಬೇಸರಬಂದಾಗ ಈ ಚಟುವಟಿಕೆಯು ಹೆಚ್ಚಾಗುತ್ತದೆ. ಅನುಭವಕ್ಕೆ ಬಂದಿದ್ದ ನೆನಪುಗಳನ್ನು ಅವಲಂಬಿಸಿಕೊಂಡು, ಬಾಲ್ಯದಲ್ಲಿ ಕಲಿತ ಪಾಠಗಳಿಂದ ಬೆಂಬಲ ಪಡೆದು, ಹಗಲುಗನಸುಗಳು ರೂಪುತಾಳುತ್ತವೆ. ಯಾವುದಾದರೂ ಸಭೆಯಲ್ಲಿ ಕುಳಿತಿರುವಾಗ, ಭಾಷಣವು ಸಪ್ಪೆಯಾಗಿದ್ದಾಗ, ಭಾಷಣಕಾರನ ಕಂಬಳಿಹುಳುವಿನಂತಿರುವ ಹುಬ್ಬುಗಳ ಮೇಲೆ ಮನಸ್ಸು ಹರಿಯಬಹುದು. ಅಲ್ಲಿಂದ ಕಂಬಳಿಹುಳುಗಳ ಮೇಲೆ ಮನಸ್ಸು ಛಿಗುತ್ತದೆ. ಒಂದು ಜಾತಿಯ ಕಂಬಳಿಹುಳುಗಳು ಗೂಡುಕಟ್ಟುವುದರಿಂದ ರೇಷ್ಮೆ ತಯಾರಾಯಿತು ಎಂದು ಆಲೋಚನೆ ಮನಸ್ಸಿಗೆ ಹೊಳೆಯಬಹುದು. ರೇಷ್ಮೆಮಗುಟದ ಜ್ಞಾಪಕ ಬರಬಹುದು. ಅದನ್ನುಟ್ಟುಕೊಂಡ ತನ್ನ ಮದುವೆಯ ಜ್ಞಾಪಕ ಬರಬಹುದು.

ಆ ಹುಡುಗಿಗೆ ಬದಲು, ಇನ್ನೊಂದು ಆಗಿದ್ದರೆ ಹೀಗೆಲ್ಲಾ ಮೆರೆಯಬಹುದಿತ್ತು ಎಂದು ಗಾಳಿಗೋಪುರ ಕಟ್ಟುವುದಕ್ಕೆ ಪ್ರಾರಂಭ. ಈ ರೀತಿಯಾಗಿ ಅತಿ ಸೂಕ್ಷ್ಮ ವಾದ ಸಂಬಂಧವನ್ನು ಹೊಂದಿದ್ದು, ಬಲು ವೈವಿಧ್ಯವಾಗಿರುವ ಏನೆಲ್ಲಾ ಯೋಚನೆಗಳು ಹಗಲುಗನಸುಗಳಲ್ಲಿ ಕಾಣಬರುತ್ತವೆ. Reverie ಎಂಬ ಈ ಮಾನಸಿಕ ಚಟುವಟಿಕೆಯಲ್ಲಿ ಎರಡು ಮುಖ್ಯ ಅಂಶಗಳಿರುತ್ತವೆ. ಒಂದು : ಹಗಲುಗನಸು ಕಾಣುವವನೇ ಶ್ರೇಷ್ಠನೆಂಬ ಭ್ರಮೆ ಬರುವುದು. ಎರಡನೆಯದು : ತಾನು ಮಾಡಿದುದೆಲ್ಲ ನ್ಯಾಯಸಮ್ಮತ, ಅದೇ ಸರಿ ಎಂದು ನಂಬುವುದು. ಈ ಎರಡು ಪ್ರಮುಖ ಆಧಾರಸ್ಥಂಭಗಳ ಮೇಲೆ ನಿಂತಿರುವ ಹಗಲುಗನಸುಗಳಲ್ಲಿ ಮನಸ್ಸು ಯಾವ ಶ್ರಮವನ್ನೂ ವಹಿಸುವುದಿಲ್ಲ. ಅದುಕಾರಣವೇ ಮನಸ್ಸಿಗೆ ಹಗಲುಗನಸು ಬೀಳುವುದು, ಗಾಳಿಗೋಪುರ ಕಟ್ಟುವುದು ಬಲು ಪ್ರಿಯ. ಹೀಗೆ ಮನಸ್ಸು ಬೇಕಾಬಿಟ್ಟಿಯಾಗಿ ಹರಿಯುತ್ತಿದ್ದರೂ, ಅದು ನಮ್ಮ ಸುಪ್ತ ಆಶೆ ಆಕಾಂಕ್ಷೆಗಳನ್ನೂ ಭಯಭೀತಿಗಳನ್ನೂ ಸೋಲು ಗೆಲುವುಗಳನ್ನೂ ಆದರ ಹಗೆತನ ಗಳನ್ನೂ ಅವಲಂಬಿಸಿಕೊಂಡೇ ಇರುತ್ತದೆ. ಯಾವ ಆಲೋಚನೆಯನ್ನಾಗಲಿ, ಪ್ರಯತ್ನಪೂರ್ವಕವಾಗಿ ಹತೋಟಿಯಲ್ಲಿಡದಿದ್ದಾಗ, ಅದು ನಮಗೆ ಅತ್ಯಂತ ಪ್ರಿಯವಾದ 'ನಮ್ಮ' ಸುತ್ತಲೂ ಸುರುಳಿ ಸುತ್ತಿಯೇ ಸುತ್ತಿಕೊಳ್ಳುತ್ತದೆ. ಸಾಮಾನ್ಯವಾಗಿ ನಾವು ಇದರ ವಿಚಾರವನ್ನೇ ಮಾಡುವುದಿಲ್ಲ. ವಿಚಾರಮಾಡಿದರೆ, ಈ ಅಪ್ರಿಯವಾದ ಸತ್ಯವು ಕಠೋರವಾಗಿ ಕಣ್ಣುಕುಕ್ಕುವಂತೆ ಕಾಣುತ್ತದೆ.

Reverie ಅಥವಾ ಹಗಲುಗನಸುಗಳನ್ನು Free Association of Ideas, ಆಲೋಚನೆಗಳ ಸ್ವತಂತ್ರ ಸಾಹಚರ್ಯ ಎಂದು ಕರೆಯಬಹುದು. ಈ ವಿಷಯವಾಗಿ ವೈಜ್ಞಾನಿಕ ಪ್ರಯೋಗಗಳು ಬಹುವಾಗಿ ನಡೆಸಲ್ಪಡುತ್ತಿವೆ. ಇವು ಗಳಿಂದ ನಮ್ಮ ಮೂಲಭೂತ ಸ್ವಭಾವವನ್ನು ಅರಿಯಲು ಸಾಧ್ಯವಾಗಬಹುದು.

ಹಗಲುಗನಸು ಕಾಣುವ ಹವ್ಯಾಸವು, ಮಿಕ್ಕ ಇತರ ಮನಸ್ಸಿನ ಕಾರ್ಯ ಕ್ರಮಗಳಿಗೆ ಪ್ರಬಲವಾದ, ಶಕ್ತಿಯುತವಾದ ವೈರಿ. ಹಾಗೂ ಹಗಲುಗನಸು ಬೀಳುವುದರಿಂದ ನಮ್ಮ ಜ್ಞಾನಭಂಡಾರವು ಕಿಂಚಿತ್ತಾದರೂ ಹೆಚ್ಚಾಗುವುದಿಲ್ಲ. ಪೂರ್ಣವಾಗಿ 'ಸ್ವಾರ್ಥಿ'ಯಾದ ಚಟುವಟಿಕೆ ಇದು.

ನಮ್ಮ ಮನೆಯ ಪುರೋಹಿತರೊಬ್ಬರು ಸೂರ್ಯನಮಸ್ಕಾರಮಾಡಲು ಬರುತ್ತಿದ್ದರು. ನನಗೆ ಆಗ ಏಳೆಂಟು ವರ್ಷ. ಮಂತ್ರಗಳನ್ನು ಹೇಳುತ್ತಾ

ಆತ ಸೂರ್ಯನಮಸ್ಕಾರ ಹಾಕುವುದೇ ಒಂದು ಪವಾಡದಂತೆ ಕಾಣಿಸುತ್ತಿತ್ತು. ಅವರನ್ನೇ ನೋಡುತ್ತ ಕುಳಿತಿರುತ್ತಿದ್ದೆ. ಒಮ್ಮೆ ೧೦–೧೨ ನಮಸ್ಕಾರ ಹಾಕಿದ ಮೇಲೆ ಆತ ನನ್ನ ಹತ್ತಿರದಲ್ಲಿದ್ದ ಮಣೆಯ ಮೇಲೆ ಕುಳಿತು "ನೋಡು ಮಗು! ಮಂತ್ರ ಹೇಳ್ತಾ ಇರ್ತೀನಿ. ಪ್ರದಕ್ಷಿಣೆ ಹಾಕಿ ನಮಸ್ಕಾರ ಮಾಡ್ತಾ ಇರ್ತೀನಿ. ಆದರೆ ರಸ್ತೇಲಿ ಬುಡುಬುಡುಕೆಯವನು ಅರಚುತ್ತಾ ಇರೋದು, ಹಸುವು ಅಂಬಾ ಅನ್ನೋದು, ಮೊಸರು ಬೇಕೇ ಮೊಸರು ಕೂಗುವುದೂ, ಎಲ್ಲವೂ ಚೆನ್ನಾಗಿ ಕೇಳಿಸ್ತಾ ಇರುತ್ತೆ. ಬುಡುಬುಡುಕೆಯವನ ಬಟ್ಟೆಗಳು, ಹಸುವಿನ ಕರು, ಮೊಸರಿನ ಗಡಿಗೆ, ಇವೇ ಕಣ್ಣಮುಂದೆ ಕಾಣುತ್ತೇ ಹೊರತು ಸೂರ್ಯನಾರಾಯಣನ ಬಿಂಬ ಕಣ್ಣಮುಂದೆ ಬರೋದೇ ಇಲ್ಲವಲ್ಲೋ" ಎಂದು ಖಿನ್ನರಾಗಿ ಹೇಳಿದರು. ಆಗ ಅವರು ಹೇಳಿದ್ದು ಅರ್ಥವಾಗಿರಲಿಲ್ಲ. ನನಗೇ ಅಂತ ಏನೂ ಹೇಳಿರಲಿಲ್ಲ ಕೂಡ. ತಮ್ಮ ಗೋಳನ್ನು ತಾವು ತೋಡಿಕೊಂಡಿದ್ದರು. ಈಗ ಅದರ ಅರ್ಥ ತಿಳಿಯುತ್ತಾ ಇದೆ. "ಎಷ್ಟು ಪ್ರಯಾಸ ಪಟ್ಟು, ಏಕಾಗ್ರಚಿತ್ತದಿಂದ ಸೂರ್ಯನಾರಾಯಣನ ಪೂಜೆಯನ್ನು ಮಾಡಬೇಕು ಅಂತ ಹಂಬಲಿಸುತ್ತಿದ್ದರು! ಅವರದು ಎಂಥ ದೊಡ್ಡ ಆತ್ಮ!" ಎಂಬುದು ಈಗ ತಿಳಿಯುತ್ತಿದೆ.

ಹೆಸರಾಂತ ಕುಶಾಗ್ರಮತಿಯುಳ್ಳ ತಾತ್ವಿಕರು ಹಲವರು, ಹಗಲುಗನಸು ಕಾಣುವ ಸ್ವಭಾವವು ಅತ್ಯಲ್ಪ ಪರಿಣಾಮವನ್ನುಂಟುಮಾಡುತ್ತದೆ ಎಂದೋ, ಅಥವಾ ಆ ಸ್ವಭಾವವೇ ಅಸತ್ಯವಾದುದು ಎಂದೋ ತಿಳಿದು, ತಮ್ಮ ತರ್ಕದಲ್ಲಿ ಈ ಸ್ವಭಾವವನ್ನು ಗಣನೆಗೆ ತಂದುಕೊಳ್ಳುವುದೇ ಇಲ್ಲ. ಈ ಕಾರಣದಿಂದಲೇ ಮನಸ್ಸಿನ ಸ್ವರೂಪವನ್ನು ಅವರು ಅರಿಯಲು ಅಸಮರ್ಥರಾಗಿದ್ದಾರೆ. ಅವರ ತಾತ್ವಿಕದರ್ಶನಗಳೆಲ್ಲ ಅವರ ಹಗಲುಗನಸುಗಳೋ ಏನೋ ಎಂದು ಅನ್ನಿಸುತ್ತದೆ.

ಹಗಲುಗನಸು ಕಾಣುವ ಮಾನಸಿಕ ಚಟುವಟಿಕೆಯು ಬಹಳ ಹಿತವಾಗಿರುತ್ತದೆ. ಏಕೆಂದರೆ ಅವುಗಳಲ್ಲಿ ಆತ್ಮಪ್ರಶಂಸೆ, ಆತ್ಮಾಭಿಮಾನಗಳೇ ಮೂಲ ಸೂತ್ರಗಳಾಗಿರುತ್ತವೆ. ಆ ಸೂತ್ರಗಳು ಕುಣಿಸಿದಂತೆ ಹಗಲುಗನಸುಗಳು ಕುಣಿಯುತ್ತವೆ. ಅದರಿಂದ ಈ ತೆರನ ಮಾನಸಿಕ ಚಟುವಟಿಕೆಯು 'ಸ್ವಾರ್ಥ'ಯಾದದ್ದು.

## ೨. ನಿರ್ಣಯಿಸುವುದು

ಹಗಲುಗನಸು ಬೀಳುತ್ತಿದ್ದಾಗ, ಎರಡನೆಯ ತರಹ ಚಟುವಟಿಕೆಯನ್ನು ಮನಸ್ಸಿನಲ್ಲಿ ಕಾಣಬಹುದು. ಸಪ್ಪೆಯಾದ ಭಾಷಣವನ್ನು ಕಿವಿಗೆ ಹಾಕಿಕೊಳ್ಳುತ್ತ, ಹಗಲುಗನಸು ಕಾಣುತ್ತಿರುವವನು 'ಎದ್ದು ಹೋಗಿಬಿಡಲೇ, ಈಗಲೇ' ಎಂದು ಯೋಚಿಸಬಹುದು. ಈ ಯೋಚನೆ ಬಂದಾಗ ಅವನು ಎದ್ದುಹೋಗಬೇಕು. ಅಥವಾ ಆ ಯೋಚನೆಯನ್ನು ದೂರಮಾಡಬೇಕು. ಆಗ ಯೋಚಿಸುತ್ತಾನೆ : 'ಎದ್ದುಹೋದರೆ, ಉಳಿದವರು ಏನೆಂದುಕೊಳ್ಳುತ್ತಾರೆ ? ನಾನು ಎದ್ದು ಹೋಗುವುದನ್ನು ಭಾಷಣಕಾರನು ನೋಡಿಬಿಟ್ಟರೆ, ಅವನ ಮನಸ್ಸಿಗೆ ನೋವು ಉಂಟಾಗಬಹುದು. ಹಾಗೂ ವ್ಯಾಪಾರಕ್ಕೆ ಆತ ನಮ್ಮ ಅಂಗಡಿಗೆ ಬರುತ್ತಾನೆ-ನಾಳೆಯಿಂದ ಬಾರದೆ ಇರಬಹುದು. ಆಗ ನನಗೇ ನಷ್ಟ. ಇನ್ನೇನು ಸ್ವಲ್ಪ ಹೊತ್ತಿನಲ್ಲಿ ಇವನ ಗೋಳು ಮುಗಿಯಬಹುದು, ಆ ತನಕ ಸಭ್ಯನಂತೆ ಕೂತಿರೋಣ' ಎಂದು ತೀರ್ಮಾನಿಸಬಹುದು. ಅಂದರೆ ತೀರ್ಮಾನಮಾಡಬೇಕಾದಾಗ, ನಿರ್ಣಯಿಸಬೇಕಾದಾಗ, ಆಗುಹೋಗುಗಳನ್ನು ವಿಮರ್ಶಿಸಬೇಕಾಗುತ್ತದೆ. ಮನಸ್ಸು ಶ್ರಮವಹಿಸಿ, 'ಮನಸ್ಸುಮಾಡ'ಬೇಕಾಗುತ್ತದೆ. ಇದೇನೂ ಬಲು ಪ್ರಿಯವಾದ ಕೆಲಸವಲ್ಲ ಅನ್ನುವುದು ಸ್ವತಃಸಿದ್ಧ. ದೇಹವು ಬಳಲಿರುವಾಗ ಇಂತಹ ನಿರ್ಣಯವನ್ನು ಮಾಡಲು ಬೇಜಾರುಬರುತ್ತದೆ. ಗಾಳಿಗೋಪುರ ಕಟ್ಟುತ್ತಿರುವಾಗ ಇಂತಹ ತೀರ್ಮಾನವನ್ನು ಮಾಡಲು ಮನಸ್ಸು ಸುಲಭವಾಗಿ ಒಪ್ಪುವುದಿಲ್ಲ.

ಶ್ರಮವಹಿಸಿ ಆಗುಹೋಗುಗಳನ್ನು ಕುರಿತು ಯೋಚಿಸಿ, ತೀರ್ಮಾನವನ್ನು ಕೈಗೊಳ್ಳುವ ಮನಸ್ಸಿನ ಈ ಚಟುವಟಿಕೆಯು ಕೂಡ, ನಮ್ಮ ಜ್ಞಾನಭಂಡಾರವನ್ನು ಏನೂ ಹೆಚ್ಚಿಸುವುದಿಲ್ಲ. ತೀರ್ಮಾನಮಾಡುವ ಮೊದಲು ಇತರ ಅಂಕಿಅಂಶಗಳನ್ನು ನಾವು ಶೇಖರಿಸಬೇಕಾಗಬಹುದು. ಆದರೆ ಅವೆಲ್ಲ ಮಾನವನ ಜ್ಞಾನಭಂಡಾರದಲ್ಲಿ ಮೊದಲೇ ಸಂಗ್ರಹಿಸಲ್ಪಟ್ಟುದೇ ಆಗಿರುತ್ತವೆ. ಹಾಗಾಗಿ ನಿರ್ಣಯಮಾಡುವ ಈ ಚಟುವಟಿಕೆಯಿಂದ, ಮಾನವನ ಜ್ಞಾನಭಂಡಾರವು ಇದ್ದಂತೆಯೇ ಇರುತ್ತದೆ. ಈ ಚಟುವಟಿಕೆಯು ಕೂಡ ಸ್ವಾರ್ಥಕ್ಕಾಗಿಯೇ ಅನ್ನುವುದು ಸ್ವತಃಸಿದ್ಧ.

## ೩) ತರ್ಕಬದ್ಧವಾಗಿ ಯೋಚನೆ ಮಾಡುವುದು

ಇದೂ ಮನಸ್ಸಿನ ಒಂದು ರೀತಿಯ ಚಟುವಟಿಕೆ. ನಮ್ಮ ಮನಸ್ಸಿನಲ್ಲಿ ದೃಢವಾಗಿ ನೆಲೆಸಿರುವ ಯಾವುದೋಂದು ನಂಬಿಕೆಯನ್ನಾಗಲಿ ಯಾರಾದರೂ ಅಲ್ಲಗಳೆದರೆ, ಆಗ ಮನಸ್ಸು ಈ ಚಟುವಟಿಕೆಯನ್ನು ಕೈಗೊಳ್ಳುತ್ತದೆ.

ನನ್ನ ಸ್ನೇಹಿತನೊಬ್ಬ ವೈದಿಕಮನೆತನದಲ್ಲಿ ಹುಟ್ಟಿದವ. ಕಾಲೇಜಿನಲ್ಲಿ ಒಟ್ಟಿಗೆ ಓದುತ್ತಿದ್ದೆವು. ಗಳಸ್ಯ ಕಂಠಸ್ಯ ಆದೆವು. ನಾನು ಕ್ರಾಪ್ ಕತ್ತರಿಸಿ ಕೊಂಡಿದ್ದೆ. ಅವನು ತಲೆಕೂದಲನ್ನು ಗಂಟು ಕಟ್ಟುತ್ತಿದ್ದ. ಇಬ್ಬರೂ 'ರೋವರ್ಸ್'ಗೆ ಸೇರಿದೆವು. ರುಮಾಲು ಕಟ್ಟುವುದು ನನಗೆ ಸುಲಭವಾಯಿತು. ಅವನಿಗೆ ತಕರಾರು ಕೊಟ್ಟಿತು. ನಮ್ಮ ಜೊತೆಯವರೆಲ್ಲರೂ ನನ್ನಂತೆಯೇ ತಲೆ ಕೂದಲು ಕತ್ತರಿಸಿಕೊಂಡಿದ್ದರು. ಇವನೊಬ್ಬನೇ 'ಗಂಟು' ಇಟ್ಟಿದ್ದವನು. ಅವ ನಿಗೂ ಅವಮಾನಿಕೆ. ಅಮ್ಮನ್ನ ಸಾವಿಾಲುಮಾಡಿಕೊಂಡು ಒಂದು ದಿನ ಅವನು ತಲೆಕೂದಲನ್ನು ಕ್ರಾಪುಮಾಡಿಸಿಬಿಟ್ಟ. ಆಯುಷ್ಕರ್ಮಶಾಲೆಯಿಂದ ಮನೆಗೆ ಹಿಂತಿರುಗುವಾಗ ನಾನೂ ಜತೆಯಲ್ಲಿ ಅವನ ಮನೆಗೆ ಹೋದೆ. ಅವರಮ್ಮ ಸ್ನಾನ ಮಾಡಿಸಿದರು. ಹೊರಕ್ಕೆ ಬಂದ. ಅಷ್ಟು ಹೊತ್ತಿಗೆ ದೇವಸ್ಥಾನಕ್ಕೆ ಹೋಗಿದ್ದ ಅವನ ತಂದೆಯವರು ಬಂದರು. "ಏನೋ ನಿನಗೆ ಧಾಡಿ ! ಕಿರಿಸ್ತಾನರ ಹಾಗೆ !" ಎಂದು ಶುರುಮಾಡಿದರು, ಮಗನನ್ನು ನೋಡಿದಕೂಡಲೆ. ಅಮ್ಮ ಒಳಗಿಂದ ಬಂದು ಮಗನ ಪರ ವಕೀಲಿಗೆ ನಿಂತಳು. ತಂದೆ ಮಗನ ವ್ಯವಹಾರ ಗಂಡಹೆಂಡಿರ ವ್ಯವಹಾರವಾಯ್ತು. ತಂದೆಯವರು : "ನಮ್ಮದು ಬಿಸಿಲು ದೇಶ. ನೆತ್ತಿ ತಂಪಾಗಿರಲಿ ಅಂತ ದೇವರು ಕೂದಲು ಕೊಟ್ಟಿದ್ದಾನೆ. ಹಿರಿಯರೆಲ್ಲರೂ ಅದಕ್ಕೇ ತಲೆಮೇಲೆ ಕೂದಲನ್ನು ಇಟ್ಟುಕೊಳ್ಳುತ್ತಿದ್ದರು. ಛಳಿದೇಶವಾದರೆ ತಲೆ ಬೋಳಿಸಿಕೊಳ್ಳಬಹುದು. ನಾವು ಹಾಗೆ ಮಾಡೋದು ತಪ್ಪು. ಅನಾರೋಗ್ಯ" ಎಂದೆಲ್ಲಾ ವಾದಹೂಡಿದರು.

ತಾಯಿಯು ಮರುಸವಾಲು ಹಾಕಿದರು : 'ನಮ್ಮದು ಬಿಸಿಲುದೇಶ. ಮುಖ ಕೆಂಪಾಗಬಾರದು ಅಂತ ದೇವರು ಗಡ್ಡಮಿಾಶೆಗಳನ್ನು ಕರುಣಿಸಿದ್ದ. ಅದನ್ನ ನಿವ್ಯಾಕೆ ಬೋಳಿಸಿಬಿಟ್ಟಿರಿ ? ಅಲ್ಲದೆ ಈಗ ನಿಮಗೆ ಬಟ್ಟತಲೆಯಾಗಿದೆ

ಯಲ್ಲ! ನಿಮ್ಮ ನೆತ್ತಿಗೆ ತಂಪು ಹೇಗೆ ಎರೀತೀರಿ? ನಿಮ್ಮ ಮೂಗಿನ ನೇರಕ್ಕೇ ನೀವು ಮಾತನಾಡ್ತೀರಿ. ಚಂಡಿಕೆ ಇರಬೇಕು ಅಂತ ನಿಮ್ಮದು ಪುರಾಣ ನಂಬಿಕೆ, ಬಿಡಿ ಅಂದ್ರೆ!" ಅಂತ ಕೊನೆಯ ಮುಕ್ತಾಯವನ್ನು ಕೊಟ್ಟು ಒಳಕ್ಕೆ ಹೋದರು.

"ತಾಯಿ, ಮಗ. ನಿಮಗೇನು ಬೇಕೋ ಮಾಡಿಕೊಳ್ಳಿ!" ಅಂತ ಭರತ ವಾಕ್ಯವನ್ನು ತಂದೆಯವರು ನುಡಿದು ಒಳಕ್ಕೆ ಹೋದರು.

ಮನಸ್ಸಿನ ತಾರ್ಕಿಕ ಚಟುವಟಿಕೆಗೆ ಇದು ಒಳ್ಳೆಯ ನಿದರ್ಶನ. ತಂದೆಯ ಮನಸ್ಸಿನಲ್ಲಿ 'ಹುಡುಗನಿಗೆ ತಲೆಕೂದಲಿನ ಗಂಟಿರಬೇಕು, ಅದು ಶಾಸ್ತ್ರಸಮ್ಮತ' ಎಂದು ದೃಢವಾದ ನಂಬಿಕೆ. ಆ ನಂಬಿಕೆಯು ಬರಲು ಅವರು ಬಾಲ್ಯದಲ್ಲಿ ಬೆಳೆದ ಸಂಸಾರದ ವಾತಾವರಣ, ವೈದಿಕ ಮನೆತನದ ಆಚರಣೆ, ಅವರ ಮತ. ಜಾತಿ, ಕುಲ, ಗೋತ್ರ ಇವೆಲ್ಲವೂ ಕಾರಣವೇ ಹೊರತು ಅವರಾಗಿ ವಿಚಾರ ಮಾಡಿ ಈ ನಿರ್ಧಾರಕ್ಕೆ ಬಂದದ್ದಲ್ಲ. ಆದರೆ ಅವರ ಮನೆಯಲ್ಲೇ ಅವರ ಮಗನೇ ಎದುರುನಡೆದಾಗ ಮನೆಯಾಕೆಯೇ ಅವನಿಗೆ ಬೆಂಬಲವಾದಾಗ, ಅವರ ನಂಬಿಕೆಗೆ ಅವಮಾನಮಾಡಿದಂತಾಯಿತು. ಈಗ ಅವರ ಮನಸ್ಸು ತರ್ಕಬದ್ಧ ವಾದ, ಸರಿಕಾಣುವ, ಆರೋಗ್ಯದ ಕಾರಣಗಳನ್ನು ಮುಂದಿಡುವಂತೆ ಮಾಡಿತು. ವಿಚಾರಪರರಂತೆ ಮಾತನಾಡಿದರು. ಅವರ ಹೆಂಡತಿಯೂ ಹಾಗೆಯೇ. ಮಗನಿಗೆ ಅವಮಾನಿಕೆ ಆಗಬಾರದು ಶಾಲೆಯಲ್ಲಿ. ಅದಕ್ಕಾಗಿ ಚಂಡಿಕೆ ಹೋದರೆ ಹೋಗಲಿ, ಎಷ್ಟೋ ವೈದಿಕರ ಮನೆಯ ಹುಡುಗರು ಕ್ರಾಪ್ ಮಾಡಿಸಿ ಕೊಂಡಿಲ್ಲವೆ, ಅಂತ ಆಕೆಯ ಮನಸ್ಸಿನಲ್ಲಿ. ಯಜಮಾನರು ತರ್ಕಬದ್ಧವಾದ ಸರಣಿಯನ್ನು ಹೂಡಿದರೆ, ಅದಕ್ಕೆ ಸರಿಸರಿಯಾಗಿ ಈಕೆಯೂ ತರ್ಕಬದ್ಧ ವಾಗಿಯೆ, ತಾನು ಮಾಡಿಸಿದ್ದೇ ನ್ಯಾಯ ಎಂದು ಪ್ರತಿವಾದಿಸಿದಳು.

ನಮ್ಮ ನಂಬಿಕೆಯನ್ನು ಯಾರಾದರೂ ಅಲ್ಲಗಳೆದರೆ, ಈ ರೀತಿ ವಿಚಾರ ಪೂರ್ಣವಾದ ತರ್ಕಮಾಡುವಂತೆ ನಮ್ಮ ಮನಸ್ಸು ಆಲೋಚಿಸುತ್ತದೆ. ಆದರೆ ಆ ನಂಬಿಕೆಗಳಿಗೆ ಯಾವುದು ಮೂಲಭೂತಕಾರಣ ಎಂದು ಯೋಚನೆಯನ್ನೇ ಮಾಡುವುದಿಲ್ಲ. ಎಷ್ಟು ಹೆಚ್ಚಿನಮಟ್ಟಿಗೆ ಮನಸ್ಸು ಹರಿತವಾಗಿರುತ್ತದೋ ಅಷ್ಟರಮಟ್ಟಿಗೆ ವಿಚಾರಧಾರೆಯನ್ನು ತನ್ನ ನಂಬಿಕೆಗಳ ಸಮರ್ಥನೆಗೆ ಉಪ ಯೋಗಿಸುತ್ತಾನೆಯೇ ಹೊರತು, ಆ ನಂಬಿಕೆಗಳು ಏಕೆ ಬಂದುವು? ಹೇಗೆ ನೆಲೆಸಿದುವು? ಎಂದು ಕಾರಣವನ್ನು ಹುಡುಕುವ ಯೋಚನೆಯನ್ನೇ ಸಾಮಾನ್ಯ

ವಾಗಿ ಮಾಡುವುದಿಲ್ಲ. ಯೋಚನೆಯ ವಿಷಯವಾಗಿ ಯೋಚನೆಯನ್ನು ಮಾಡದೆ ಇರುವುದೇ, 'ನಮ್ಮ' ವಿಷಯವಾಗಿ ನಾವು ತಿಳಿವಳಿಕೆಯನ್ನು ಹೊಂದದೆ ಇರುವುದೇ, ಈ ಲೋಕದ ಸಕಲ ಸಂಕಟಗಳ ಅನುಭವಿಕೆಗೂ ಮೂಲಭೂತ ಕಾರಣ.

ಜಾತಿ, ಮತ, ಸಂಸಾರ, ಆಸ್ತಿಪಾಸ್ತಿ, ವ್ಯವಹಾರ, ಊರು, ದೇಶ. ಇವುಗಳೆಲ್ಲವೂ ಬಾಲ್ಯದಿಂದಲೂ ನಮ್ಮ ಮನಸ್ಸಿನಲ್ಲಿ ಹಲವಾರು ನಂಬಿಕೆಗಳನ್ನು ಮೂಡಿಸುತ್ತವೆ. ಆ ನಂಬಿಕೆಯನ್ನೇ ನಾವು ಬೆಳೆದ ಮೇಲೆ ಕೂಡ ಭದ್ರವಾಗಿ ಹಿಡಿದಿರುತ್ತೇವೆ. ಎಷ್ಟೋ ವೇಳೆ ನಮ್ಮಷ್ಟಕ್ಕೆ ನಾವೇ ಈ ನಂಬಿಕೆಗಳಿಗೆ ತಿಲಾಂಜಲಿ ಕೊಡುತ್ತೇವೆ. ಏನೂ ಯೋಚನೆಮಾಡದೆ ಅನುಕೂಲಸಿಂಧುಗಳಾಗಿ ಜಾತಿಬಾಹಿರರಾಗುತ್ತೇವೆ, ಮತಬಾಹಿರರಾಗುತ್ತೇವೆ. ಧರ್ಮದ ಹೆಸರಿಟ್ಟು ಆಸ್ತಿಬಾಹಿರರಾಗುತ್ತೇವೆ, ವ್ಯವಹಾರಬಾಹಿರರಾಗುತ್ತೇವೆ, ದೇಶಬಾಹಿರರೂ ರಾಷ್ಟ್ರಬಾಹಿರರೂ ಆಗುತ್ತೇವೆ. ಹೀಗಾಗುವಾಗ ಏನೊಂದೂ ದುಃಖವಿರುವುದಿಲ್ಲ, ತಾಪ ಬರುವುದಿಲ್ಲ. ಆದರೆ ಯಾರಾದರೂ 'ಏಕೆ ಹೀಗೆ ನಂಬುತ್ತೀರಿ?' ಎಂದು ಎದುರಾಡಿದರೆ, ಆಗ ಜಾತಿಪ್ರೇಮ, ರಾಷ್ಟ್ರಪ್ರೇಮ ಎದ್ದು ಕುಣಿದಾಡುವಂತೆ, ಅದೇ ತರ್ಕಬದ್ಧವಾದುದು ಎನ್ನುವಂತೆ, ಮನಸ್ಸು ಆಗ ವಿಚಾರಪರ ಚಟುವಟಿಕೆಯನ್ನು ಹೂಡುತ್ತದೆ.

ಈ ನಂಬಿಕೆಗಳ ಒಟವಾದ ಕಾರಣವೂ ಸಾಮಾನ್ಯವಾಗಿ ನಮ್ಮಿಂದಲೂ ಇತರರಿಂದಲೂ ಮರೆಮಾಚಲ್ಪಟ್ಟಿರುತ್ತದೆ. ನಾವು ವಾಸಿಸುವ ಸಮಾಜದಲ್ಲಿ ಈ ನಂಬಿಕೆಗಳು ಬೆಳೆಯುವಂತೆ, ಬೇಕಾದಷ್ಟು ನಡವಳಿಕೆಗಳು ಆಚರಣೆಯಲ್ಲಿರುತ್ತವೆ. ಹಾಗಾಗಿ ಇದೇ ಸತ್ಯ ಎಂಬ ಭ್ರಮೆಯೂ ನಮ್ಮನ್ನು ಆವರಿಸುತ್ತದೆ.

ಇಂತಹ ನಂಬಿಕೆಗಳನ್ನು ಯಾರಾದರೂ ಪ್ರಶ್ನಿಸಿದರೆ, ಸಮಾಜವು ಅಂತಹವರನ್ನು ನಿಕೃಷ್ಟವಾಗಿ ಕಂಡು, ಹುಚ್ಚನೆಂದು ಹೆಸರಿಟ್ಟು ದಂಡಿಸುತ್ತದೆ. ಆದಕಾರಣವೇ ಸಾಮಾನ್ಯವಾಗಿ ಯಾರೂ ಇಂತಹ ವಿಚಾರಕ್ಕೆ ಬಹಿರಂಗವಾಗಿ ತೊಡಗುವುದಿಲ್ಲ. ಮನಸ್ಸಿನ ಈ ತರ್ಕಬದ್ಧವಿಚಾರಣಾ ಚಟುವಟಿಕೆಯನ್ನು ತಾರ್ಕಿಕ ಸಮರ್ಥನೆ (Rationalisation) ಎಂದು ಕರೆಯುತ್ತಾರೆ

ಹಗಲುಗನಸು ಬೀಳುತ್ತಿರುವಾಗ, ನಮ್ಮ ಮೂಗಿನ ನೇರವೇ ಸರಿ, ನಾವು ಮಾಡಿದ್ದೇ ನ್ಯಾಯ ಎಂದು ಅಂದುಕೊಳ್ಳುತ್ತೇವೆ. ಆದರೂ ನಮ್ಮ

ಕುಂದುಕೊರತೆಗಳೂ ನಾವು ಮಾಡಿದ ತಪ್ಪುಗಳೂ ಆಗಿಂದಾಗ್ಗೆ ಕಾಡುತ್ತವೆ. ಆಗ ಇತರರು ಮಾಡಿದ ತಪ್ಪುಗಳಿಂದ ನಮಗೆ ಹೀಗೆ ಆಯಿತು, ವಿಧಿ ನಮ್ಮನ್ನು ಕಾಡಿತು, ಎಂದು ನಮಗೆ ನಾವೇ ಸಮಾಧಾನಮಾಡಿಕೊಳ್ಳುತ್ತೇವೆ. ನಮ್ಮ ತಪ್ಪುಗಳನ್ನೂ ಕುಂದುಕೊರತೆಗಳನ್ನೂ ಇತರರಿಗೆ ಅನ್ವಯಿಸಿ ವಿಧಿಯ ತಲೆಯ ಮೇಲೆ ಹಾಕಿ, 'ನಾವು ಜಾಣರು, ನಮ್ಮ ತಪ್ಪಿಲ್ಲ' ಎಂದು ಸಮಾಧಾನ ಮಾಡಿಕೊಳ್ಳುತ್ತೇವೆ.

ನಮ್ಮ ಕುಂದುಗಳಿಂದಲೂ ತಪ್ಪುಗಳಿಂದಲೂ ಹೀಗಾಗಿದೆ ಎಂಬ ಕೊರಗು ಕಾಡಹತ್ತಿದಾಗ, ನಾವು ನಿರ್ದೋಷಿಗಳು ಎಂದು ಸಮಾಧಾನಪಡಿಸಿ ಸ್ವಲ್ಪ ಉತ್ಸಾಹ ತುಂಬುವುದೇ ಮನಸ್ಸಿನ ತಾರ್ಕಿಕ ಸಮರ್ಥನೆಯ ಉದ್ದೇಶ.

ಮನಸ್ಸಿನ ತಾರ್ಕಿಕ ಸಮರ್ಥನೆಯಿಂದ ಮಾನವನ ಜ್ಞಾನಭಂಡಾರಕ್ಕೆ ಯಾವುದೊಂದು ಕಾಣಿಕೆಯೂ ಸಲ್ಲುವುದಿಲ್ಲ. ಏಕೆಂದರೆ ಅದರ ಉದ್ದಿಶ್ಯವೇ ಆತ್ಮಸಮಾಧಾನ. ಆತ್ಮದ ಅರಿವಿಗಾಗಲಿ ಲೋಕದ ತಿಳಿವಳಿಕೆಗಾಗಲಿ ಇದು ಸಹಾಯಕವಾಗುವುದಿಲ್ಲ. ಇದೂ ಮನಸ್ಸಿನ ಸ್ವಾರ್ಥೀ ಚಟುವಟಿಕೆ.

## ೯. ಪ್ರಜ್ಞಾಪ್ರೇರಿತ ಚಟುವಟಿಕೆ

ಹಗಲುಗನಸು ಕಾಣುವುದು, ನಿರ್ಣಯಿಸುವುದು, ಹಾಗೂ ತರ್ಕಬದ್ಧವಾಗಿ ವಿಚಾರಮಾಡಿ ಸಮಾಧಾನ ಹೊಂದುವುದು ;—ಈ ಮೂರು ರೀತಿಯ ಸ್ವಾರ್ಥೀ ಮನಸ್ಸಿನ ಚಟುವಟಿಕೆಗಳನ್ನು ತಿಳಿದೆವು. ಮಾನವನ ಜ್ಞಾನ ಭಂಡಾರಕ್ಕೆ ಈ ಮೂರೂ ರೀತಿಯ ಚಟುವಟಿಕೆಗಳು ನಿಷ್ಪ್ರಯೋಜಕ ಎಂದೂ ತಿಳಿದೆವು. ಇವಲ್ಲದೆ ಇನ್ನೊಂದು ರೀತಿಯ, ತೀವ್ರ ಪರಿಣಾಮಕಾರಿಯಾದ, ನಿಸ್ಸ್ವಾರ್ಥಿಯೂ ಆದ ಒಂದು ಚಟುವಟಿಕೆಯು ಮನಸ್ಸಿನಲ್ಲಿ ಕಾಣಬರುತ್ತದೆ. ಅದನ್ನು ಪ್ರಜಾಪ್ರೇರಿತ ಚಟುವಟಿಕೆ (Creative Mental Activity) ಅನ್ನಬಹುದು.

ಉದಾಹರಣೆ :—ತೋಟದಲ್ಲಿ ಮರದ ಕೆಳಗೆ ಎಷ್ಟೋ ಜನರು ವಿಶ್ರಮಿಸಿ ಕೊಂಡಿದ್ದಾರೆ. ಅವರ ತಲೆಯ ಮೇಲೆ ಲೆಕ್ಕವಿಲ್ಲದಷ್ಟು ಬಾರಿ ಹಣ್ಣುಗಳೋ

ಕಾಯಿಗಳೋ ಮರದಿಂದ ಬಿದ್ದಿರಲೇಬೇಕು. ಬಿದ್ದಾಗ ತಲೆಯನ್ನು ಒರಸಿಕೊಂಡು, ಮರವನ್ನು ಶಪಿಸಿ ಅವರುಗಳು ಬೇರೆ ಕಡೆಗೆ ಹೋಗುತ್ತಾರೆ. ಆದರೆ ನ್ಯೂಟನ್ ಮಹಾಶಯನಿಗೆ, ತಲೆಯ ಮೇಲೆ ಬಿದ್ದ ಸೇಬಿನ ಹಣ್ಣು ಕುತೂಹಲವನ್ನು ಕೆರಳಿಸಿತು. 'ಏಕೆ ಬಿತ್ತು ?' ಎಂದು ಅವ ವೈಜ್ಞಾನಿಕವಾಗಿ ಯೋಚಿಸತೊಡಗಿದ. ಕುತೂಹಲವನ್ನು ಕೆರಳಿಸಿದ ಈ ಸಮಸ್ಯೆಯೇ ಅವನನ್ನು ಬಿಗಿಹಿಡಿದುಕೊಂಡಿತು ಎನ್ನುವುದು, ಅವನು ಆಲೋಚನೆಮಾಡಿದ ಎನ್ನುವುದಕ್ಕಿಂತ, ಸಮಂಜಸ. ಆಳವಾಗಿ ಯೋಚಿಸಿದ ಮೇಲೆ (Gravitational Theory) ಗುರುತ್ವಾಕರ್ಷಣ ಸಿದ್ಧಾಂತವನ್ನು ಪ್ರಕಟಿಸಿದ. ಹೀಗೆ ಯೋಚಿಸಿ ಸಿದ್ಧಾಂತ ಮಾಡುವಾಗ, ತನಗೆ ಸಂಬಂಧಿಸಿದ ಯಾವುದೊಂದು ಹಗಲುಗನಸನ್ನೂ ಅವ ಕಾಣುತ್ತಿರಲಿಲ್ಲ. ಅವಶ್ಯಕವಾದ ನಿರ್ಣಯವಾವುದನ್ನೂ ಮಾಡಬೇಕಾಗಿರಲಿಲ್ಲ. ಮನಸ್ಸಿಗೆ ಸಮಾಧಾನ ತಂದುಕೊಳ್ಳಲು ಯಾವ ತಾರ್ಕಿಕ ಯೋಚನೆಯನ್ನೂ ಮಾಡಬೇಕಿರಲಿಲ್ಲ. ಆದರೆ ಮರದಿಂದ ಬಿದ್ದ ಹಣ್ಣು ಅವನ ಕುತೂಹಲವನ್ನು ಕೆರಳಿಸಿತು. ಆ ಸಮಸ್ಯೆಯೇ ಅವನ ಮನಸ್ಸನ್ನು ಹಿಡಿಯಿತು. ಸಾಕಷ್ಟು ಪ್ರಯೋಗಗಳನ್ನು ನಡಸಿ, ಆಳವಾಗಿ ಯೋಚನೆಮಾಡಿ, ಲೆಕ್ಕಹಾಕಿ, ಸಿದ್ಧಾಂತವನ್ನು ಪ್ರಕಟಿಸಿದ. ಪ್ರಜ್ಞಾಪ್ರೇರಿತವಾದ ಈ ಚಟುವಟಿಕೆಯು ಇಡೀ ಮಾನವನ ಜ್ಞಾನಭಂಡಾರಕ್ಕೆ ನ್ಯೂಟನ್ನನಿಂದ ಅಮೂಲ್ಯ ಕಾಣಿಕೆಯನ್ನು ಕೊಡಿಸಿಕೊಟ್ಟಿತು. ಇಂದಿನ ವಿಸ್ಮಯಕಾರೀ ಭೌತಶಾಸ್ತ್ರದ ಪ್ರಗತಿಗೆ ಅಸ್ತಿಭಾರವನ್ನು ಹಾಕಿದಂತಾಯಿತು.

ಇನ್ನೊಂದು ಉದಾಹರಣೆ —ಕ್ರೌಂಚಪಕ್ಷಿಗಳೆರಡು ಮರದ ಕೊಂಬೆಯ ಮೇಲೆ ಲಲ್ಲೆಯಾಡುತ್ತಿದ್ದುದನ್ನು ಒಬ್ಬಾತ ನೋಡುತ್ತಿದ್ದ. ಕಾಡುನಾಡುಗಳಲ್ಲಿ ಸರ್ವಸಾಮಾನ್ಯವಾದ ದರ್ಶನ ಇದು. ಬೇಡನೊಬ್ಬನ ಬಾಣಕ್ಕೆ ಒಂದು ಪಕ್ಷಿಯು ಬಲಿಯಾದಾಗ, ಇನ್ನೊಂದು ಗೋಳುಕರೆಯಿತು. ಇದೂ ಸಾಮಾನ್ಯವಾಗಿ ಆಗುವ ವಿಷಯವೇ. ಆದರೆ ಅಂದು ಕಂಡಾತನ ಮನಸ್ಸು ವಿರಹದುಃಖದಿಂದ ಸಂಕಟಪಡುತ್ತಿದ್ದ ಕ್ರೌಂಚಪಕ್ಷಿಯ ಮನಸ್ಸಿನ ಜೊತೆಗೂ ಅನುಕಂಪಿಸಿತು, ಜೊತೆಗೂ ಸಂಕಟವನ್ನು ಅನುಭವಿಸಿತು. ತನ್ನ ಮನಸ್ಸಿನ ದುಃಖವನ್ನು ತೋಡಿಕೊಳ್ಳಲು ಆತ ಬರೆದುದೇ ರಾಮಾಯಣವಾಯಿತು. ಸಹಸ್ರಾರು ವರ್ಷಗಳಿಂದ ನಮ್ಮ ದೇಶದ ಕೋಟ್ಯಂತರ ಜನರಿಗೆ, ಪಾರಾಯಣ

ಮಾಡಿದಾಗ ಮನಸ್ಸಿಗೆ ಸಮಾಧಾನವನ್ನೂ ಮನನಮಾಡಿದಾಗ ಆನಂದವನ್ನೂ ಅದು ಕರುಣಿಸಿದೆ.

ವಾಲ್ಮೀಕಿಯು ಹಗಲಂಗನಸು ಕಾಣುತ್ತಿರಲಿಲ್ಲ. ನಿರ್ಣಯ ಮಾಡಬೇಕಾದ ಪ್ರಮೇಯವಿರಲಿಲ್ಲ. ತಾರ್ಕಿಕವಾಗಿ ಯೋಚಿಸಬೇಕಾಗಿರಲಿಲ್ಲ. ಏಕೆಂದರೆ ಅವನು ಬಾಣ ಬಿಟ್ಟು ಪಕ್ಷಿಯನ್ನು ಕೊಂದಿರಲಿಲ್ಲ. ಆದರೆ ಆತನ ಮನಸ್ಸಿನ ಪೂರ್ಣ ಅನುಕಂಪವೇ ಆತನ ಮನಃಸಾಗರದಿಂದ ಅನರ್ಘ್ಯರತ್ನವೊಂದನ್ನು ಹೊರತಂದಿತು.

ಮನಸ್ಸಿನ ಅನುಕಂಪವು, ಮನಸ್ಸಿನಲ್ಲಿ ಆರಾಧ್ಯಮೂರ್ತಿಯಾಗಿ ನೆಲೆಸಿದ್ದ ಚೆನ್ನಮಲ್ಲಿಕಾರ್ಜುನನನ್ನು ಪೂರ್ಣ ಆವರಿಸಿಕೊಂಡು, ಅದೊಂದನ್ನು ಹೊರತು ಬೇರೊಂದನ್ನೂ ಮನಸ್ಸು ಕಾಣದಂತೆ ಆದಾಗ, ಅಕ್ಕಮಹಾದೇವಿಯು ವಚನಗಳನ್ನು ನುಡಿದಳು. ಆಗ ಚೆನ್ನಮಲ್ಲಿಕಾರ್ಜುನನು ನುಡಿದುದಕ್ಕೆ ಸರಿಯಾಗಿ ಆಕೆ ನಡೆದುಕೊಂಡಳು. ಆಕೆ ನುಡಿದಂತೆ ಆಕೆಯ ಆರಾಧ್ಯಮೂರ್ತಿ ಚೆನ್ನಮಲ್ಲಿಕಾರ್ಜುನನು ನಡೆದುಕೊಂಡ ಎಂದರೆ ತಪ್ಪಾಗದು. ಆ ತರನಾದ ಅನುಕಂಪವೇ, ಅನುಸರಿಸಿ ಕಂಪಿಸುವುದೇ ಪ್ರೇಮದ ಒಂದು ಮುಖ, ಶಾಶ್ವತ ವಾದ ಪ್ರೇಮದ ಒಂದು ಕುರುಹು.

ಬಾಳಿನಲ್ಲಿ ಅನುಭವಿಸುವುದನ್ನೆಲ್ಲಾ ಅನುಭವಿಸುತ್ತಾ, ಆದರೂ ಎಲ್ಲೋ ಏನೋ ಕುಂದು ಇದೆ ಎಂದು ತವಕಪಡುತ್ತಾ ಹುಡುಕುತ್ತಿದ್ದ ಶೀನಪ್ಪನಾಯಕನಿಗೆ ಕೈಹಿಡಿದ ಹೆಂಡತಿಯ ದೈವಭಕ್ತಿಯೇ ಕಣ್ಣು ತೆರೆಯಿಸಿತು. ಅನಂತರ ಆತ ಕಂಡುದರಲ್ಲೆಲ್ಲಾ ದೇವರನ್ನು ಕಂಡ. ಆತ ನುಡಿದುದೆಲ್ಲಾ ಹಾಡುಗಳಾದುವು. ಎಲ್ಲವನ್ನೂ ಬಿಟ್ಟು ಪುರಂದರನಾಗಿ, ಎಲ್ಲರ ಎದೆಗಳಲ್ಲೂ ಕಾಲಾತೀತನಾಗಿ ನೆಲೆಸಿದ. ಕಣ್ಣು, ಒಳಗಣ್ಣು, ತೆರೆದಾಗ ಆತ ಕಂಡುಕಂಡುದರಲ್ಲೆಲ್ಲಾ ತನ್ನ ಆರಾಧ್ಯಮೂರ್ತಿಯನ್ನೇ ಕಾಣುತ್ತಿದ್ದ. ಆತನಿಗೂ ಆತನ ಆರಾಧ್ಯಮೂರ್ತಿಗೂ ನಾಡಿಯ ಮಿಡಿತವು ಒಂದೇ ತಾಳಹಾಕುತ್ತಿತ್ತು. 'ದಾಸರೊಳು ಪುರಂದರನೊ, ಪುರಂದರನೊಳು ದಾಸನೋ, ದಾಸಪುರಂದರರಿಬ್ಬರು ನಿನ್ನೊಳಗೋ' ಎಂದು ನಾವು ಹಾಡುವಂತಾಗಿದೆ. ಶೀನಪ್ಪನಾಯಕನ ಮನಸ್ಸಿನ ಚಟುವಟಿಕೆಯು ಅನುಕಂಪದಿಂದ ತುಂಬಿ ತುಳುಕಲಾರಂಭಿಸಿದಾಗಲೇ ಆತ ಪುರಂದರದಾಸ ನಾದುದು.

ಒಲವು, ಭಕ್ತಿ, ಪ್ರೇಮ, ಕರುಣೆ, ದಯೆ, ಇವೆಲ್ಲವೂ ಅನುಕಂಪದ ವಿವಿಧ ಮುಖಗಳು. ತುಂಬು ಒಲವಿನಿಂದ ಶ್ರೀ ಕೃಷ್ಣನನ್ನು ಕಂಡ ಮೀರಾ, ಪೂರ್ಣಭಕ್ತಿಯಿಂದ ಶಿವನನ್ನು ಕಂಡ ನಂದನಾರ್, ಪ್ರೇಮವೇ ಮೂರ್ತಿ ವೆತ್ತಂತಿದ್ದ ತನ್ನ ಆರಾಧ್ಯಮೂರ್ತಿಯಲ್ಲಿ ಒಂದಾದ ಆಂಡಾಳ್ : ಇವರೆಲ್ಲರೂ ಅನುಕಂಪದಿಂದ ತುಂಬಿರುವಾಗ ನುಡಿದುದೆಲ್ಲಾ ಅಮೃತವಾದುವು.

ಮನಸ್ಸಿನ ನಿಃಸ್ವಾರ್ಥಚಟುವಟಿಕೆಯು ಕುತೂಹಲದಿಂದ ಕೆರಳಿದರೆ ವೈಜ್ಞಾನಿಕ ಪ್ರಗತಿಯು ಸಾಧಿಸಲ್ಪಡುತ್ತದೆ. ಅನುಕಂಪದಿಂದ ತುಂಬಿ ನುಡಿಯುವಂತಾದರೆ ತೋರಮನಸ್ಸಿನಲ್ಲಿ (ಅಂದರೆ ವ್ಯಕ್ತವಾದ ಮನಸ್ಸಿನ ಭಾಗ ದಲ್ಲಿ) ಸಮಾಧಾನವನ್ನೂ, ಆಳಮನಸ್ಸಿನಲ್ಲಿ ಎಂದರೆ ಅವ್ಯಕ್ತವಾದ ಮನಸ್ಸಿನಲ್ಲಿ ಆನಂದವನ್ನೂ ಕೊಡುತ್ತದೆ. ಹಾಗಾಗಿ ಕಲೆಯು ವಿವಿಧ ರೂಪಗಳಲ್ಲಿ ಪ್ರದರ್ಶಿತವಾಗುತ್ತದೆ. ಸಾಹಿತ್ಯದಲ್ಲಿ ಅನುಕಂಪವು ಸೂಸಿಬಂದರೆ, ಕಾಲ ದೇಶಾತೀತವಾಗುತ್ತದೆ. ಅದೇ ರೀತಿ ಸಂಗೀತದಲ್ಲೂ ಶಿಲ್ಪಕಲೆಯಲ್ಲೂ ಚಿತ್ರಕಲೆಯಲ್ಲೂ ಅನುಕಂಪವು ವಿರಾಡ್ರೂಪವನ್ನು ತೋರಿಸಲು ಸಾಧ್ಯ. ಮಾನವನ ಜ್ಞಾನಭಂಡಾರವನ್ನು ಇವೆಲ್ಲವೂ ಹಿರಿದಾಗಿಸುತ್ತವೆ.

ಮಾನವನ ಪ್ರಜ್ಞಾಪ್ರೇರಿತ ಮಾನಸಿಕ ಚಟುವಟಿಕೆಯು ಕುತೂಹಲ ದಿಂದ ಕೆರಳಿ ವೈಜ್ಞಾನಿಕಪ್ರಗತಿಯನ್ನು ಸಾಧಿಸಿದೆ. ವೈಜ್ಞಾನಿಕ ಅರಿವು ಹೆಚ್ಚಾದಷ್ಟೂ, ತಿಳಿಯದೆ ಇರುವುದು ಇನ್ನೂ ಅತಿಯಾಗಿದೆ ಎಂಬ ಅಂಶವು ಮನದಟ್ಟಾಗುತ್ತದೆ. ಹಾಗಾಗಿ ಸಂಶೋಧನೆಯು ತೀವ್ರಗತಿಯಲ್ಲಿ ಸಾಗುತ್ತದೆ. ಕಳೆದ ೨೦೦-೩೦೦ ವರ್ಷಗಳಲ್ಲಿ ವೈಜ್ಞಾನಿಕ ಸಂಶೋಧನೆಗಳೂ ತತ್ಫಲಗಳೂ ವಿಸ್ಮಯವಾಗುವ ರೀತಿಯಲ್ಲಿ ಧಾವಿಸಿವೆ. ಜೀವನಸೌಕರ್ಯಗಳಿಗೆ ಬಹಳ ಸಹಾಯಮಾಡಿವೆ. ಜ್ಞಾನಭಂಡಾರವನ್ನು ಹೊಸದಾಗಿ ತುಂಬಿಸುತ್ತಿವೆ. ಭೂ ನಭೋಮಂಡಲಗಳನ್ನು ಒಂದಾಗಿಸಿವೆ, ಆದರೂ ಕಂಡುಹಿಡಿಯಲ್ಪಟ್ಟ ಒಂದೊಂದು ಅಂಶವೂ ಹಲವಾರು ವೈಜ್ಞಾನಿಕ ಸಮಸ್ಯೆಗಳನ್ನು ಮುಂದೊಡ್ಡು ತ್ತಿದೆ. ಹಾಗಾಗಿ ಕುತೂಹಲದಿಂದ ಕೆರಳಿದ ಮಾನವನ ಮಾನಸಿಕ ಚಟುವಟಿಕೆಯು ಹೆಚ್ಚುಹೆಚ್ಚಾಗಿ ಕೆರಳುತ್ತಲೇ ಇದೆ. ಇಂದಿನ ವಿಜ್ಞಾನಿಯು ಹುಲಿಯನ್ನು ಸವಾರಿಮಾಡುವವನಂತೆ ಆಗಿದ್ದಾನೆ. ಇಳಿಯಲು ಸಾಧ್ಯವೇ ಇಲ್ಲ. ಹುಲಿ ಕೊಂಡೊಯ್ದಲ್ಲಿಗೆ ಹೋಗಲೇಬೇಕು.

ಆದರೆ ಅನುಕಂಪದಿಂದ ಪ್ರಜ್ಞಾಪ್ರೇರಿತ ಮಾನಸಿಕ ಚಟುವಟಿಕೆಯು ಜಾಗೃತವಾದಾಗ ಕಲೆಯು ಅತ್ಯಮೋಘವಾದ ಕೃತಿಗಳು ಹೊರಬೀಳುತ್ತವೆ. ಇವು ರಚಿಸಿದವನ ಮನಸ್ಸಿಗೆ ಹಿತವಾದ ಆನಂದವನ್ನು ಕೊಟ್ಟಂತೆಯೇ ಕೇಳಿದವರಿಗೂ ಕಂಡವರಿಗೂ ಶಾಂತಿ ಉಲ್ಲಾಸ ಸಮಾಧಾನಗಳನ್ನು ಕೊಡುತ್ತವೆ.

ಇಂದು ಮಾನವನು ಕುತೂಹಲದಿಂದ ತುಂಬಿದವನಾಗಿ ತನ್ನ ಪ್ರಜ್ಞಾಪ್ರೇರಿತ ಚಟುವಟಿಕೆಯನ್ನು ವೈಜ್ಞಾನಿಕ ಅರಿವಿಗೇ ಮೀಸಲಾಗಿಟ್ಟಿದ್ದಾನೆ. ಹಾಗಾಗಿ ಕಂಡುಹಿಡಿದಷ್ಟೂ ಅವನ ಕುತೂಹಲವು ಕೆರಳುತ್ತಲೇ ಇದೆ. ಶಾಂತಿ ಸಮಾಧಾನಗಳಿಗೆ ಅವಕಾಶ ಕಡಮೆಯಾಗುತ್ತದೆ. ಹುಲಿಯ ಸವಾರಿ ಮಾಡುತ್ತೇನೆ ಎಂದು ಅಂದುಕೊಂಡಿದ್ದಾನೆ. ಆದರೆ ಹುಲಿಯನ್ನು ಹತೋಟಿಯಲ್ಲಿಡಲು ಇನ್ನೂ ಬಾರದು. ಎಂದಾದರೂ ಹುಲಿಯು ಸವಾರನನ್ನು ಕೆಡವಿ ತಿಂದು ಮುಗಿಸುವುದು ಖಂಡಿತ.

ಆದರೆ ಈ ಅಂತರದಲ್ಲಿ ಅನುಕಂಪದಿಂದ ಪ್ರಜ್ಞಾಪ್ರೇರಿತ ಮಾನಸಿಕ ಚಟುವಟಿಕೆಯನ್ನು ಮಾನವನು ಸಾಕಷ್ಟು ಮುಂದುವರಿಸಿಲ್ಲ. ಆದುದರಿಂದಲೇ ಶಾಂತಿ ಸಮಾಧಾನಗಳೂ ಇಲ್ಲ ; ಮನೋದೈಹಿಕ ಬೇನೆಗಳೂ ಹೆಚ್ಚುಹೆಚ್ಚಾಗಿ ಕಾಣಬರುತ್ತಿವೆ. ಇನ್ನುಮುಂದೆ ಇದೇ ರೀತಿ ಮಾನವನು ಮುಂದುವರಿದರೆ ಇನ್ನೂ ಹೆಚ್ಚಿನ ಪ್ರಮಾಣದಲ್ಲಿ, ಈ ತನಕ ಕಾಣಿಸದೇ ಇರುವ ರೂಪಗಳಲ್ಲಿ, ಮನೋದೈಹಿಕ ಬೇನೆಗಳು ತಾಂಡವವಾಡಲೇಬೇಕು.

## ಮನಸ್ಸಿನ ಚಟುವಟಿಕೆಗಳ ಮೇಲೆ ದೈಹಿಕ ಸ್ಥಿತಿಯ ಪರಿಣಾಮ

### ಅ. ಆಹಾರ

ಅವಕಾಯಿ ಹುಳಿ, ಹುರುಳಿ ಹಪ್ಪಳ ಮತ್ತು ಥೈಂಡಿ ಮೊಸರು—ಎಲ್ಲವನ್ನೂ ಪುಷ್ಕಳವಾಗಿ ತಿಂದುಬಿಟ್ಟು, ಆಮೇಲೆ ಯಾವುದಾದರೂ ಪುಸ್ತಕವನ್ನು ಓದಿದರೆ, ಓದಿದ್ದು ಮನಸ್ಸಿಗೆ ಹತ್ತುವ ಸಂಭವ ಕಡಮೆ. ಕಾಡುಹರಟೆಯನ್ನು ಬೇಕಾದರೆ ಕೊಚ್ಚಬಹುದೇ ವಿನಾ ತರ್ಕಬದ್ಧವಾಗಿ ಯೋಚಿಸಿ, ಆಳವಾಗಿ ಮನನ

ಮಾಡಿ, ಯಾವ ಕೆಲಸವನ್ನೂ ಮಾಡುವುದಕ್ಕೆ ಮನಸ್ಸು ಸಹಕರಿಸುವುದಿಲ್ಲ. ಅಂದರೆ, ಹೊಟ್ಟೆ ಬಿರಿಯುವಂತೆ ತಿಂದರೆ, ಮಾನಸಿಕ ಚಟುವಟಿಕೆಗಳು ಮಂದಗತಿಯಲ್ಲಿ ಸಾಗುತ್ತವೆ ಎಂದಹಾಗಾಯಿತು.

ಇದಕ್ಕೆ ವ್ಯತಿರಿಕ್ತವಾಗಿ ಮನಸ್ಸಿಗೆ ಏನಾದರೂ ತಾಪತ್ರಯ ಅಂಟಿಕೊಂಡಿತು ಅನ್ನಿ. ಅಂತಹ ಮನುಷ್ಯ. ತಾಪತ್ರಯವು ವ್ಯಕ್ತವಾಗಿದ್ದರೆ, ಊಟ ಬಿಟ್ಟುಬಿಡುತ್ತಾನೆ. ಅಥವಾ, ಅವ್ಯಕ್ತ ಆತಂಕವಾಗಿದ್ದರೆ, ಊಟದ ಮೇಲೆ ಸೇಡುತೀರಿಸಿಕೊಳ್ಳುತ್ತಾನೆ. ಹುಚ್ಚಾಸ್ಪತ್ರೆಗಳಲ್ಲಿ ನೋಡಿ ; ಹಲವಾರು ರೋಗಿಗಳು ನರಪೇತಲರಾಗಿರುತ್ತಾರೆ, ಕೃಶವಾಗಿರುತ್ತಾರೆ. ಇದ್ನು ಕೆಲವು ರೋಗಿಗಳು ತೋಳಗಳ ಹಾಗೆ ಬೆಳೆದಿರುತ್ತಾರೆ. ಇವರಿಗೇನು ಬಂತು ಧಾಡಿ, ಅನ್ನಿಸುವ ಹಾಗಿರುತ್ತಾರೆ. ವ್ಯಾಪಾರಸ್ಥರಲ್ಲಿ ಸುಮಾರು ಜನರು ಧಡಿಯರಾಗುವುದಕ್ಕೆ, ಅವರ ವ್ಯಾಪಾರದಲ್ಲಿನ ಆಗುಹೋಗುಗಳು, ಆಗಬಹುದಾದ ನಷ್ಟ ಸಂಕಟಗಳ ಆತಂಕವೂ ಒಂದು ಕಾರಣ. ಆ ಆತಂಕದಿಂದಲೇ ಅವರು ಹೆಚ್ಚು ಹೆಚ್ಚಾಗಿ ತಿಂದು ಧಡಿಯರಾಗಿ. ಮನಸ್ಸಿನ ಸಮಾಧಾನವನ್ನು ಪಡೆಯುತ್ತಾರೆ.

ಆಹಾರವಿಜ್ಞಾನದಲ್ಲಿ ಯಾವ ಆಹಾರಾಂಶದ ಸೇವನೆಯಿಂದ ಮಾನಸಿಕ ಚಟುವಟಿಕೆಗಳಿಗೆ ಸಹಾಯವಾಗುತ್ತದೆ ಎಂಬುದು ಇನ್ನೂ ಕಂಡುಹಿಡಿಯಲ್ಪಟ್ಟಿಲ್ಲ. ಮಿದುಳಿನಲ್ಲಿರುವ ರಾಸಾಯನಿಕವಸ್ತುಗಳು, ಉದಾಹರಣೆಗೆ—ಲೆಸಿತಿನ್, ಫಾಸ್ಫೋ ಲೈಪಿಡ್ಸ್, ಇತ್ಯಾದಿಗಳು, ಮಾನಸಿಕ ದೌರ್ಬಲ್ಯ ತೋರಿದವರಿಗೆ ಕುರಿತೇಟಿನ ನೀತಿಯ ಪ್ರಕಾರ, ಉಪಯೋಗಿಸಲ್ಪಡುತ್ತಿವೆಯೇ ಹೊರತು ಶಾಸ್ತ್ರೀಯವಾದ ಆಧಾರದ ಮೇಲಲ್ಲ.

ಮೀನು, ಹೊನಗೊನೆಸೊಪ್ಪು. ಬಚ್ಚಲಕೂರ ಇತ್ಯಾದಿ ಆಹಾರವಸ್ತುಗಳು ಮನಸ್ಸಿನ ಚುರುಕನ್ನು ತೀವ್ರಗೊಳಿಸುತ್ತವೆ ಎಂಬ ಜನರ ನಂಬಿಕೆಯು, ಕಾದಂಬರಿಕಾರರ ಊಹೆಯ ಆಧಾರದ ಮೇಲೆ ಹುಟ್ಟಿ ನಿಂತಿರುವ ವಿಷಯ.

## ಆ. ಪಾನೀಯಗಳು

ಕಾಫಿ, ಟೀ ಮೊದಲಾದ ಪಾನೀಯಗಳು, ಮಿತವಾಗಿ ಸೇವನೆಮಾಡಿದಾಗ, ಅಭ್ಯಾಸವಿದ್ದವರಿಗೆ. ಮಾನಸಿಕ ಚುರುಕನ್ನು ಉಂಟುಮಾಡಬಹುದು.

ಈ ಪಾನೀಯಗಳಲ್ಲಿರುವ ಮಾದಕವಸ್ತುವು ಸ್ವತಂತ್ರ ನರವ್ಯೂಹಗಳನ್ನು ಉದ್ರೇಕಿಸುತ್ತದೆ. ಹಾಗಾಗಿ ಎಂಡೋಕ್ರೀನ್ ದ್ರವಗಳಲ್ಲಿ ದೈಹಿಕಕಾರ್ಯಗಳನ್ನು ಚುರುಕುಮಾಡುವಂಥವು ಹೆಚ್ಚು ಉತ್ಪನ್ನವಾಗುತ್ತವೆ. ಆಗ ಮಾನಸಿಕ ಚಟುವಟಿಕೆಗಳೂ ತೀವ್ರಗಾಮಿಯಾಗಬಹುದು. ಆದರೆ ಮಿತಿಮೀರಿದರೆ, ಈ ಪಾನೀಯಂಗಳೇ ಮಾನಸಿಕ ಆತಂಕವನ್ನೂ ಅನಿದ್ರೆಯನ್ನೂ ಉಂಟುಮಾಡ ಬಹುದು.

ಪರೀಕ್ಷೆಗಳಿಗೆ ಓದುವ ವಿದ್ಯಾರ್ಥಿಗಳು ಅತಿಯಾಗಿ ಕಾಫಿ ಕುಡಿದು ನಿದ್ರೆ ಗೆಡುವುದು ಸಾಮಾನ್ಯವಾದ ವಿಷಯ. ಆದರೆ ಹಾಗೆ ನಿದ್ರೆಗೆಟ್ಟು ಓದಿದಾಗ ಓದಿದ ವಿಷಯಂಗಳು ಅವರ ಮನಸ್ಸನ್ನು ಹಿಡಿಯುತ್ತವೆಯೇ ? ಗ್ರಹಿಸಲ್ಪಟ್ಟು ನೆನಪಿರುತ್ತದೆಯೇ ? ಎಂಬುದು ವಿವಾದಾಸ್ಪದ. ಬಹುಶಃ ಅಂತಹ ಮಾನಸಿಕ ಸ್ಥಿತಿಯಲ್ಲಿ ಓದಿದುದು ಗ್ರಹಿಸಲ್ಪಡುವುದೇ ಇಲ್ಲ. ಆದರೆ 'ಪರೀಕ್ಷೆಗೆ ನಾನು ಓದುತ್ತಾ ಇದ್ದೀನಿ ; ನಿದ್ರೆ ಬಿಟ್ಟು, ಊಟಮಾಡದೆ ತಪಸ್ಸುಮಾಡಿದಂತೆ ಮಾಡುತ್ತಾ ಇದ್ದೀನಿ' ಎಂಬ ಅತ್ಯಂತ ಹಿತಕಾರಿಯಾದ ಸಮಾಧಾನವು ಅವರು ಗಳ ಮನಸ್ಸನ್ನು ತುಂಬಿಕೊಳ್ಳುತ್ತದೆ. ಈ ಆತ್ಮವಿಶ್ವಾಸದಿಂದ ಅವರ ಮನಸ್ಸು ಪರೀಕ್ಷೆಯಲ್ಲಿ ಸುಸೂತ್ರವಾಗಿ ಕೆಲಸಮಾಡುತ್ತದೆ.

ಮಾದಕ ಪಾನೀಯಗಳಾದ ಸೇಂದಿ ಸಾರಾಯಿ ಇತ್ಯಾದಿಗಳೂ ಬಹಳ ಮಿತವಾಗಿ ಸೇವಿಸಲ್ಪಟ್ಟಾಗ, ಮಾನಸಿಕ ಚಟುವಟಿಕೆಗಳಿಗೆ ತೀಕ್ಷ್ಣತೆಯನ್ನು ಕೊಡಬಲ್ಲವು. ಆದರೆ ಕೈಲಾಸಂ ಹೇಳುತ್ತಿದ್ದಂತೆ 'ಒಳ್ಳೆ ನೊಪ್ಪಿಕಿ ಒಗಟಿ ದರಾಂ, ತಲೆಕಾಯಿ ನೊಪ್ಪಿಕಿ ರೆಂಡು ದರಾಂ' ಎಂಬಂತೆ ಬಹಳ ಮಿತವಾಗಿ ಒಂದು ಡ್ರಾಂ ಶುರುಮಾಡಿದವ, ಮಾನಸಿಕ ಚುರುಕಿನಿಂದ ಉತ್ಸಾಹಿತನಾಗಿ, ಇನ್ನೊಂದನ್ನೂ ಕುಡಿಯುತ್ತಾನೆ, ಹಾಗೆಯೇ ಮುಂದುವರಿಸುತ್ತಾನೆ. ಹಾಗಾಗಿ ಮನಸ್ಸು ಹಗಲುಗನಸಿನ, ಸ್ವಾರ್ಥೀಭೂತವಾದ ಚಟುವಟಿಕೆಗಳಲ್ಲಿ ಓಡುತ್ತದೆಯೇ ಹೊರತು, ಜ್ಞಾನಾರ್ಜನೆಯ ಚಟುವಟಿಕೆಗಳತ್ತ ಸಾಗುವುದೇ ಇಲ್ಲ.

## ೯. ದೇಹದ ನೋವುಗಳು

"ಇವೊತ್ತು ಯಾಕೋ ನಮ್ಮ ಸಾಹೇಬರು ಹೀಗೆ ಮಾಡಿದರೆ, 'ಹೀಗ್ಯಾಕೆ ಮಾಡಿದೆಯೋ ?', ಹಾಗೆ ಮಾಡದೆ ಇದ್ದರೆ, ಹಾಗ್ಯಾಕೆ ಮಾಡಿದೆಯೊ ?'

ಅಂತ ಸಿಡಿಮಿಂಡಿಗುಟ್ಟುತ್ತಾ ಇದ್ದಾರೆ" ಎಂದು ಒಬ್ಬ ಕಾರಕೂನ ಹೇಳಿದಾಗ, ವಯಸ್ಸಾದ ಅನುಭವಸ್ಥ ಇನ್ನೊಬ್ಬ, 'ಪಾಪ! ಅವರಿಗೆ ಮಲಬದ್ಧತೆಯಾಗಿರ ಬೇಕು. ಕೆರಳಿದೆ ಅಂತ ಕಾಣುತ್ತೆ. ಕೂರುಕ್ಕಾಗದೆ ಹಾಗೆ ನಿಮ್ಮ ಮೇಲೆ ಸಿಡಿಮಿಂಡಿಗುಟ್ಟಿದ್ದಾರೆ. ನೀವೇನೂ ಮನಸ್ಸಿಗೆ ಹಚ್ಚಿಕೊಳ್ಳಬೇಡಿ', ಅಂತ ಸಮಾಧಾನ ಹೇಳುತ್ತಾನೆ. ಇದು ನೂರಕ್ಕೆ ನೂರರಷ್ಟು ಸತ್ಯ. ತುಂಬಾ ನೋವಾದರೆ ಹಾಸಿಗೆ ಹಿಡಿದು ಮಲಗೋದಾಯ್ತು. ಆಡುಕ್ಕೂ ಇಲ್ಲ, ಅನುಭವಿಸುವುದಕ್ಕೂ ಇಲ್ಲ. ಇಂತಹ ನೋವುಗಳಾದರೆ, ಮನಸ್ಸೇ ಕೆರಳುತ್ತದೆ. ಅದರ ಚಟುವಟಿಕೆಗಳೆಲ್ಲವೂ ವಕ್ರಗತಿ ಹೊಂದುತ್ತವೆ. ಏಕೆಂದರೆ ದೇಹದ ಅರಿವು ಕ್ಷಣಕ್ಷಣಕ್ಕೂ ಮನಸ್ಸನ್ನು ಸೆಳೆಯುತ್ತಲೇ ಇರುತ್ತದೆ.

ಹಲ್ಲುನೋವು; ಕರುಳು ಹಿಂಡುವುದು; ಕೀಲುನೋವು; ಅಂಗಾಲಿನಲ್ಲಿ ಬೆಳೆದಿರುವ ಆಣಿ; ಕಾಲು ಕಚ್ಚುತ್ತಿರುವ ಬೂಡ್ಸು; ಬಿಗಿಯಾದ ಕತ್ತಿನ ಪಟ್ಟಿ; ಕಿವಿಯನ್ನು ತುಂಬಿದ ಗುಗ್ಗೆ; ಇನ್ನೆರಡು ದಿನಗಳಲ್ಲಿ ಕಾಣಿಸಿಕೊಳ್ಳುವ ಉಗುರು ಸುತ್ತು; ಕಿರಿಕಿಬ್ಬೊಟ್ಟೆನೋವು:—ಒಂದೇ ಎರಡೇ! ಯಾವುದೊಂದಾದರೂ ಮಾನಸಿಕ ಚಟುವಟಿಕೆಗಳನ್ನು ಕುಂಠಿತಗೊಳಿಸಬಹುದು.

## ಈ. ದೇಹದ ಇತರ ಕಾಯಿಲೆಗಳು

ದೇಹದ ಇತರ ಕಾಯಿಲೆಗಳೂ ಹಾಗೆಯೇ ಮನಸ್ಸಿನ ಮೇಲೆ ತೀವ್ರ ಪರಿಣಾಮವನ್ನುಂಟುಮಾಡಬಹುದು. ಈ ಮೊದಲೇ ತಿಳಿದಂತೆ. ಕಿರಿಜ್ವರವು ಕಾಣಿಸಿಕೊಂಡಾಗ, (ಉದಾಹರಣೆಗೆ—ಕ್ಷಯದ ಮೊದಲನೇ ಹಂತದಲ್ಲಿ) ಮಾನಸಿಕ ಚಟುವಟಿಕೆಯು ಚುರುಕಾಗುತ್ತದೆ. ಆಗ ರಚಿಸಲ್ಪಟ್ಟ ಕಾವ್ಯಗಳೂ ಯಶಸ್ವಿ ಯಾಗುತ್ತವೆ. ಮುದ್ದಣ, ಕೀಟ್ಸ್, ರಾಬರ್ಟ್, ಲೂಯಿ, ಸ್ಟೀವನ್‌ಸನ್ ಇವರುಗಳೇ ಸಾಕ್ಷಿ. ಆದರೆ ಕಾಯಿಲೆಗಳು ಹೆಚ್ಚಾದಾಗ ಮಾನಸಿಕ ಚಟುವಟಿಕೆ ಗಳಿಗೆ ಅಡ್ಡಿಬರುತ್ತದೆ. ವಿಷಮಶೀತಜ್ವರ ಉಲ್ಬಣವಾಗಿ, ಸನ್ನಿ ಮಾತನಾಡು ವಾಗ ರೋಗಿಯ ಮಾನಸಿಕ ಚಟುವಟಿಕೆಗಳು ಹೇಗೆ ಅಸ್ತವ್ಯಸ್ತವಾಗಿವೆ ಎಂಬು ದನ್ನು ಸುಲಭವಾಗಿ ತಿಳಿಯಬಹುದು.

## ಎ. ಮಾನಸಿಕ ಅವಲಂಬನ

ದೇಹದಲ್ಲಿ ಯಾವುದಾದರೂ ಕಾಯಿಲೆ ಬಂತು ; ಅಥವಾ ಹಾಗೆ ಬಂದಿರ ಬಹುದು ಎಂದು ರೋಗಿಯು ಹೆದರಿದ್ದಾನೆ ಅಥವಾ ನಂಬಿದ್ದಾನೆ. ಅಂತಹ ರೋಗಿಯ ಮನಸ್ಸಿನಲ್ಲಿ ಬೇನೆಯ ಭಯವು ಇರುತ್ತದೆ. ಆಗ ಅವನ ಮನಸ್ಸು ಸಾಮಾನ್ಯವಾದ ಚಟುವಟಿಕೆಗಳಲ್ಲಿ ಸಾಕಷ್ಟು ವಿಹಿತವಾಗಿ ಕೆಲಸಮಾಡಲು ಅಸಾಧ್ಯ. ಬಾಲ್ಯಾವಸ್ಥೆಯಲ್ಲಿ ಭಯ ತೋರಿದಾಗ ಅಮ್ಮನನ್ನು ಅಪ್ಪಿಕೊಳ್ಳು ವಂತೆ, ಬೇನೆ ಬಂದ ರೋಗಿಯು, ಭಯವು ಅವ್ಯಕ್ತವಾಗಿಯಾದರೂ ಆವರಿಸಿ ದಾಗ, ತನ್ನ ವೈದ್ಯನನ್ನೇ ದೃಢವಾಗಿ, ಮಾನಸಿಕವಾಗಿ ಅಪ್ಪುತ್ತಾನೆ. Topism ಎಂದು ಕರೆಯಲ್ಪಡುವ ಈ ಗುಣವನ್ನು ಮನೋದೈಹಿಕರೋಗಗ್ರಸ್ತ ರಲ್ಲಿ ಅತಿಯಾಗಿ ಕಾಣಬಹುದು. ದೃಢವಾದ ಈ ಅವಲಂಬಿಕೆಯನ್ನೇ ಉಪಯೋಗಿಸಿಕೊಂಡು, ಪರಿಣಾಮಕಾರಿಯಾದ ಚಿಕಿತ್ಸೆಯನ್ನು ವೈದ್ಯರುಗಳು ನಡಸಬಹುದು. ಆದರೆ ಈ ಅಸಾಮಾನ್ಯ ಅವಲಂಬಿಕೆಯಿಂದ ವೈದ್ಯರಿಗೆ ಬೇಸರಬರುವ ಪ್ರಸಂಗಗಳು ಯಥೇಷ್ಟ ! ಆದುದರಿಂದ ವರಪ್ರಸಾದದಂತಿರುವ ಈ ಅವಲಂಬಿಕೆಯನ್ನು, ಸುಮಾರು ಸಾರಿ, ವೈದ್ಯರುಗಳು ಉಪಯೋಗಿಸಿ ಕೊಳ್ಳುವುದೇ ಇಲ್ಲ. ಆದರೆ ಸಹನೆಯಿಂದ, ಈ ಅವಲಂಬಿಕೆಯನ್ನು ವೈದ್ಯನು ಒಪ್ಪಿಕೊಂಡರೆ, ಆಗ ರೋಗಿಯು ತನ್ನ ಇತರ ಮಾನಸಿಕ ಚಟುವಟಿಕೆಗಳಲ್ಲಿ ಎಂದಿನಂತೆ ತೊಡಗಲು ಸಾಧ್ಯ.

## ಐ. ಮಾನಸಿಕ—ದೈಹಿಕ ಚಿಕಿತ್ಸೆ

ಮಾನಸಿಕ ತಳಮಳದಿಂದ, ಮನೋದೈಹಿಕ ಬೇನೆಗಳು (ಉದಾಹರಣೆಗೆ : ಹೊಟ್ಟೆಉರಿ, ಹೊಟ್ಟೆನೋವು) ಬರುತ್ತವೆ. 'ಇದಕ್ಕೆ ಮಾನಸಿಕ ಚಿಕಿತ್ಸೆ ಮಾಡಬೇಕು. ಹೊಟ್ಟೆಗೆ ಯಾಕೆ ಪಥ್ಯ ಇಡಬೇಕು ?' ಎಂದು ಕೇಳಬಹುದು. ಯಾವ ಕಾರಣದಿಂದಲೇ ಆಗಲಿ, ಹೊಟ್ಟೆಯು ಕೆರಳಿದರೆ, ಪಥ್ಯವು ಅಗತ್ಯ. ಅಲ್ಲದೆ ಪಥ್ಯ ಇರಿಸುವುದೇ ಮಾನಸಿಕ ತಳಮಳಕ್ಕೂ ಉಚಿತವಾದ ಚಿಕಿತ್ಸಾ ಕ್ರಮ ! ರೋಗಿಯು ಶೈಶವಾವಸ್ಥೆಯಲ್ಲಿದ್ದಾಗ, ತಾಯ ರಕ್ಷಣೆಯನ್ನು ಪೂರ್ಣ ಪಡೆದು, ಸಮಾಧಾನಚಿತ್ತದಿಂದ ಹಾಲು ಕುಡಿಯುತ್ತಿದ್ದ. ಆ ಸ್ಥಿತಿಗೆ

ಹೋಗಬೇಕು, ಎಂದು ರೋಗಿಯ ಆಳಮನಸ್ಸಿನಲ್ಲಿ ಹಂಬಲವು ಇರುತ್ತದೆ. ರೋಗಿಗೆ ಇಟ್ಟ ಪಥ್ಯವು ಈ ಹಂಬಲವನ್ನು ಪೂರೈಸುತ್ತದೆ. ಅಲ್ಲದೆ, "ಪಾಪ! ಅಷ್ಟೆಲ್ಲಾ ಸಂಪಾದಿಸುತ್ತಾನೆ, ತಿನ್ನುಕ್ಕೆ ಆಗುಲ್ಲ" ಎಂದು ಸುತ್ತಲಿನವರು ಅನುಕಂಪದಿಂದ ಮಾತನಾಡಿದಾಗ ಅವನ ಮನಸ್ಸಿಗೆ ಹಿತವಾಗುತ್ತದೆ. ಪಥ್ಯ ಇರುವವನು ಎಂದಿನಂತೆ ಸ್ಪರ್ಧಾಕ್ಷೇತ್ರಗಳಲ್ಲಿ ಆತಂಕದಿಂದ ದುಡಿಯಬೇಕಾಗಿಲ್ಲವಲ್ಲ! ಹಾಗಾಗಿ ಅವನ ಮನಸ್ಸಿನ ತಳಮಳವೂ ಕಡಮೆಯಾಗುತ್ತದೆ.

ಮನೋದೈಹಿಕ ಬೇನೆಗಳಲ್ಲಿ, ದೇಹಕ್ಕೆ ಒದಗಿಸುವ ಚಿಕಿತ್ಸೆಯು ಎಷ್ಟೋ ಸಾರಿ ಮಾನಸಿಕ ತಳಮಳಕ್ಕೂ ಮದ್ದಾಗುತ್ತದೆ. ಅಂದರೆ ಗುಪ್ತ ಆತಂಕವಿದ್ದ ಮನಸ್ಸಿಗೆ, ಸೂಕ್ತ ದೈಹಿಕಚಿಕಿತ್ಸೆಯೂ ಪರಿಣಾಮಕಾರಿಯಾಗಬಲ್ಲದು.

## ಮನಸ್ಸಿನ ಬೆಳವಣಿಗೆ

ಹುಟ್ಟಿದ ಮಗುವಿನ ಮನಸ್ಸಿನಲ್ಲಿ ಏನಿರುತ್ತದೆಯೋ ಅದನ್ನು ಆ ಮಗುವೇ ಬಲ್ಲದು; ದೇವರೇ ಬಲ್ಲ. ಆದರೂ ಬಾಹ್ಯ ಚಟುವಟಿಕೆಗಳಿಂದ ಮನಸ್ಸು ಯಾವ ರೀತಿ ನಡೆಯುತ್ತಿದೆ. ಯಾವ ರೀತಿ ಪ್ರವರ್ಧಮಾನಕ್ಕೆ ಬರುತ್ತಿದೆ ಎಂಬುದನ್ನು ಯಶಸ್ವಿಯಾಗಿ ಊಹಿಸಬಹುದು. ಬೆಳೆಯುತ್ತಿರುವ ಮಗುವಿನ ಮನಸ್ಸು ಬಾಲ್ಯಾವಸ್ಥೆಯಲ್ಲಿ ಹೇಗೆ ಪ್ರವರ್ಧಮಾನಕ್ಕೆ ಬರುತ್ತದೆ, ಯೌವನದಲ್ಲಿ ಯಾವ ರೀತಿ ಪ್ರಗತಿ ಹೊಂದುತ್ತದೆ, ವಾನಪ್ರಸ್ಥದಲ್ಲಿ ಹೇಗೆ ಹದಗೊಳ್ಳುತ್ತದೆ, ಕೊನೆಗೆ ಯಾವ ರೀತಿ ಪ್ರಗತಿ ಹೊಂದುತ್ತದೆ ಎಂಬುದನ್ನು ಸ್ಥೂಲವಾಗಿಯಾದರೂ ತಿಳಿದರೆ ಮನೋದೈಹಿಕ ಬೇನೆಗಳು ಹೇಗೆ ಒಂದೊಂದು ಹಂತದಲ್ಲೂ ಕಾಣಿಸಿಕೊಳ್ಳುತ್ತವೆ ಎಂಬುದನ್ನು ಅರಿಯಬಹುದು. ನಮ್ಮ ಮನಸ್ಸು ಯಾವ ರೀತಿ ಓಡುತ್ತದೆ. ಏಕೆ ಹಾಗೆ ಓಡುತ್ತದೆ ಎಂಬುದನ್ನು ತಿಳಿದರೆ, ಮನಸ್ಸು ಹಸನಾಗುತ್ತದೆ. ಹದವಾಗುತ್ತದೆ. ಆಗ ಮನೋದೈಹಿಕ ಬೇನೆಗಳು ಬಾರದಂತೆ ಆಗಬಹುದು; ಬಂದರೂ ಹೆಚ್ಚು ತ್ರಾಸಕೊಡದೆ ಗುಣವಾಗಬಹುದು. ಆದುದರಿಂದ ಮನಸ್ಸಿನ ಬೆಳವಣಿಗೆಯನ್ನು ಹಂತಹಂತವಾಗಿ ಪರಿಶೀಲಿಸೋಣ.

## ೮. ಶೈಶವಾವಸ್ಥೆ

ಎಳೆಯ ಮಕ್ಕಳ ದೇಹವು ಸುಮಾರು ಎರಡು ವರ್ಷಗಳಾಗುವ ತನಕ ಅಂದರೆ ಶೈಶವಾವಸ್ಥೆಯಲ್ಲಿ ಬಲು ಮೃದುವಾಗಿರುತ್ತದೆ, ಕಣ್ಣುಗಳು ಸ್ವಚ್ಛ ವಾಗಿರುತ್ತವೆ, ತಲೆಗೂದಲು ಅತಿ ನುಣುಪಾಗಿರುತ್ತದೆ; ಅದರ ಹೃದಯವು ನಿಮಿಷಕ್ಕೆ ೧೨೦–೧೩೦ ಸಾರಿ ಬಡಿಯುತ್ತಿರುತ್ತದೆ; ಆಹಾರವನ್ನು ಬಾಯಿಗೆ ತೋರಿಸಿದರೆ, ಅದನ್ನು ಸೇವಿಸುತ್ತದೆ, ನುಂಗುತ್ತದೆ; ಜೀರ್ಣಮಾಡಿಕೊಂಡು. ಉಳಿದದ್ದನ್ನು ವಿಸರ್ಜಿಸುತ್ತದೆ; ದೈಹಿಕ ಕಾರ್ಯಗಳನ್ನೆಲ್ಲ ದೊಡ್ಡವರಂತೆಯೇ ಮಾಡುತ್ತದೆ. ಆದರೆ ಆಹಾರವನ್ನು ಹುಡುಕಿಕೊಂಡು ಹೋಗಲಾಗುವುದಿಲ್ಲ. ಅಸಹಾಯಕ ಸ್ಥಿತಿಯಲ್ಲಿರುತ್ತದೆ. ಸ್ವಲ್ಪ ನಡೆಯಲು ಬಂದಾಗ, ಅಡಿಗೆಮನೆ ಯಲ್ಲಿರುವ ಅಮ್ಮನನ್ನು ಹುಡುಕಿಕೊಂಡು ಹೋಗುತ್ತದೆ. ಅಷ್ಟರ ಮಟ್ಟಿಗೆ ಆಹಾರಾನ್ವೇಷಣೆ ಕಲಿತಿರುತ್ತದೆ.

ಕಚಗುಳಿಯಿಟ್ಟರೆ. ಎಳೆಯ ಮಗುವು ನಗುತ್ತದೆ; ದೇಹಕ್ಕೆ ಬಾಧೆ ಯಾದರೆ ಮಗುವು ಅಳುತ್ತದೆ. ಹಸಿವಾದರೂ ಅಳುತ್ತದೆ. ತನ್ನ ದೇಹದ ಬೇಡಿಕೆಗಳನ್ನು ಸಲಹುವ ತಾಯಿಗೆ ತಿಳಿಸುವ ಎಚ್ಚರಿಕೆಯೇ ಅಳು ತನ್ನ ದೇಹದ ಬಾಧೆಗಳನ್ನು ತಿಳಿಸುವ ಮಾರ್ಗವೂ ಅಳುವೇ.

ಎಳೆಯ ಮಗುವಿನ ಮನಸ್ಸು ಹೇಗೆ ಕೆಲಸ ಮಾಡುತ್ತದೆ? ಹೇಳುವುದು ಸಾಧ್ಯವಿಲ್ಲ. ಆದರೆ ಬಹುಶಃ ಅದರ ಮನಸ್ಸು ಕುತೂಹಲದಿಂದ ತುಂಬಿರುತ್ತದೆ. ಆನುವಂಶಿಕವಾಗಿ ಮೆದುಳಿನಲ್ಲಿರುವ ನೆನಪುಗಳ ಸಂಗ್ರಹಗಳೆಲ್ಲವೂ ಸುಪ್ತ ವಾಗಿಯೇ ಇರುತ್ತವೆ ಎನ್ನಬಹುದು. ಇನ್ನೊಬ್ಬ ವಯಸ್ಸಾದವರ ರಕ್ಷಣೆ ಯಲ್ಲಿರುವುದರಿಂದ, ತನ್ನ ಮನಸ್ಸನ್ನು ಉಪಯೋಗಿಸಿಕೊಂಡು ಯಾವ ಕೆಲಸ ವನ್ನೂ ಮಾಡಬೇಕಾಗಿಲ್ಲದೆ ಇರುವುದರಿಂದ, ನೆನಪುಗಳು ಸುಪ್ತವಾಗಿಯೇ ಇರುತ್ತವೆ. ಆದರೆ ಅವಶ್ಯ ಬಿದ್ದಾಗ ಬಳಸಿಕೊಳ್ಳಲು ಸಾಧ್ಯವಿರುವಂತಹ ನೆನಪುಗಳು ಇವೆ ಎಂದು ಸಿದ್ಧಾಂತ ಮಾಡಬಹುದು.

ಮಗುವಿನ ಮನಸ್ಸಿನಲ್ಲಿ ಭಾವನೆಗಳಿವೆಯೆ? ಇವೆ. ತಿಳಿದ ಮುಖ ವನ್ನು ನೋಡಿದರೆ ಸಂತೋಷದಿಂದ ನಗುತ್ತದೆ. ಕಾಣದ ಮುಖವನ್ನು ಕಂಡರೆ

ಸಿಟ್ಟಿನಿಂದು ಕಿರಿಚಿಕೊಂಡು ಭಯದಿಂದ ಅಳಬಹುದು. ಮೂಲಭೂತವಾಗಿ ಅಳು, ನಗು ಈ ಎರಡು ಭಾವನೆಗಳನ್ನೂ ತೋರಿಸುತ್ತದೆ. ಅಳುವಾಗಲೂ ಅಮ್ಮನನ್ನು ಕಟ್ಟಿಕೊಂಡು ಅಳುತ್ತದೆ. ನಗುವಾಗಲೂ ಅಪ್ಪಿಕೊಂಡು ನಗುತ್ತದೆ. ಮಾನಸಿಕ ಭಾವನೆಗಳಿಂದ ಅಳುವಾಗ ಅಥವಾ ನಗುವಾಗ, ಆಸರೆಯಾದ ಅಮ್ಮನನ್ನು ತಬ್ಬಿಕೊಳ್ಳುತ್ತದೆ. ಆದರೆ ದೈಹಿಕ ಬಾಧೆಯಿಂದ (ಉದಾಹರಣೆಗೆ–ಹೊಟ್ಟೆಯು ನೋವಾದಾಗ) ಅಳುವಾಗ, ಅಮ್ಮನನ್ನು ಅಪ್ಪಿಕೊಂಡು ಅಳುವುದಿಲ್ಲ. ದೈಹಿಕ ಸುಖದಿಂದ (ಉದಾಹರಣೆಗೆ–ಹೊಟ್ಟೆ ತುಂಬಾ ಹಾಲು ಕುಡಿದು) ಸಂತಸವಾದಾಗ ತನ್ನ ಪಾಡಿಗೆ ತಾನು ನಗುತ್ತ ಆಡುತ್ತದೆ. ಅಮ್ಮನ ಆಸರೆ ಆಗ ಬೇಕಿಲ್ಲ.

ಅಂದರೆ ದೈಹಿಕ ದುಃಖದಿಂದ ಅಥವಾ ಮನಸ್ಸಿನ ಭಯದಿಂದ ಮಗುವು ಅಳುತ್ತದೆ. ದೈಹಿಕ ಸುಖದಿಂದ ಅಥವಾ ಮನಸ್ಸಿನ ಒಲವಿನಿಂದ ಮಗುವು ನಗುತ್ತದೆ. ಅಳುವಾಗಲಾಗಲಿ, ನಗುವಾಗಲಾಗಲಿ, ದೈಹಿಕ ಕಾರಣಗಳಿದ್ದುದಾದರೆ, ತನ್ನ ಪಾಡಿಗೆ ತಾನು ಮಾನಸಿಕ ಕಾರಣಗಳಿದ್ದರೆ ಅಮ್ಮನನ್ನು ತಬ್ಬಿಕೊಳ್ಳುತ್ತವೆ. ಅಮ್ಮ ಎಂದಾಗ ತನಗೆ ತಿಳಿದಿದ್ದ ರಕ್ಷಕರು ಎಂಬ ಅರ್ಥದಲ್ಲಿ ಬಳಸಿಕೊಂಡಿದ್ದೇನೆ.

ಇದೆಲ್ಲವೂ ಆರೇಳು ತಿಂಗಳಾಗುವವರೆಗೆ. ಹಲ್ಲು ಬರುದು ಎರಡು ವರ್ಷವಾಗುವ ಹೊತ್ತಿಗೆ, ಗಟ್ಟಿ ಪದಾರ್ಥಗಳನ್ನು ತಿನ್ನಲು ಕಲಿತಿರುತ್ತದೆ. ಓಡಾಡಲು ಕಲಿತುಕೊಂಡಿರುತ್ತದೆ. ಅಪ್ಪ, ಅಮ್ಮ ಮೊದಲಾಗಿ ಮಾತುಗಳನ್ನಾಡಲು ಕಲಿತಿರುತ್ತದೆ. ದೈಹಿಕ ವಿಸರ್ಜನಾಕ್ರಮಗಳ ಶುಭ್ರತೆಯನ್ನು ಕಲಿತುಕೊಂಡಿರುತ್ತದೆ. ನಡೆಯುವುದನ್ನು ಕಲಿಯುವಾಗ ಬಿದ್ದು, ಎದ್ದು, ಮೈಯ ಹೊರಗಿನ ಕವಚವಾದ ಚರ್ಮವು ಗಡುಸಾಗಲು ಪ್ರಾರಂಭವಾಗಿರುತ್ತದೆ. ಮೈಯ ಒಳಗಿನ ಕವಚವಾದ ಮ್ಯೂಕಸ್ ಮೆಂಬ್ರೇನುಗಳು ಕೂಡ ಬೆಳೆದಿರುತ್ತವೆ.

ಸುಮಾರು ಎರಡು ವರ್ಷವಾದಾಗ ಮನಸ್ಸಿನ ಚಟುವಟಿಕೆಗಳಾದರೂ ಹೇಗಿರುತ್ತವೆ ? ಹಗಲುಗನಸು ಬೀಳುತ್ತವೆಯೋ ಇಲ್ಲವೋ ಹೇಳಬರುವುದಿಲ್ಲ, ಅತಿ ತಿಳಿಯಾದ ಹಗಲುಗನಸುಗಳು ಬಿದ್ದರೂ ಬೀಳಬಹುದು. ನಿರ್ಣಯಗೊಳ್ಳುವ ಚಟುವಟಿಕೆಗೆ ಅಷ್ಟಾಗಿ ಅವಕಾಶವಿರುವುದಿಲ್ಲ. ತರ್ಕಬದ್ಧವಾಗಿ

ಸಮಾಧಾನ ಹೊಂದುವ ಹವ್ಯಾಸವಿರುವುದಿಲ್ಲ. ಪ್ರಜ್ಞಾಪ್ರೇರಿತ ಚಟುವಟಿಕೆಯಂತೂ ಇಲ್ಲ.

ಮನಸ್ಸಿನ ಭಾವನಾಕ್ರಮಗಳಲ್ಲಿ ಯಾವ ಪ್ರಗತಿಯಾಗಿರುತ್ತದೆ? ವೈದ್ಯನು ಪರೀಕ್ಷೆಗಾಗಿ ಎರಡು ವರ್ಷದ ಮಗುವನ್ನೆತ್ತಿಕೊಂಡಿರುವ ತಾಯಿಯ ನಾಡಿ ಹಿಡಿಯಹೋದರೆ, ಮಗುವು ಕ್ರೋಧದಿಂದ ವೈದ್ಯನ ಕೈಯನ್ನು ದೂಡುತ್ತದೆ ತನ್ನ ಅಮ್ಮನನ್ನು ಇತರರು ಮುಟ್ಟಬಹುದೇ ಎಂಬ ಮಾತ್ಸರ್ಯ ಮೂಡಿ, ಈ ಕ್ರೋಧದ ಪ್ರದರ್ಶನವನ್ನು ಮಾಡಿಸುತ್ತದೆ. ಯಾವುದೋದು ಬಳಪ, ಸೀಮೆಸುಣ್ಣ, ತಿನ್ನುವ ಪದಾರ್ಥ ಸಿಕ್ಕಿದರೂ ಶೇಖರಿಸಿಟ್ಟುಕೊಳ್ಳುವ ಸ್ವಭಾವವನ್ನು ಮಗುವಿನಲ್ಲಿ ಕಾಣುತ್ತೇವೆ. ಇದೇ ಲೋಭದ ಮೊಳಕೆ. ಕಂಡದ್ದೆಲ್ಲಾ ಬೇಕು. ಆಕಾಶದಲ್ಲಿನ ಚಂದ್ರನಿಂದ ಹಿಡಿದು ಎದುರಿಗೆ ಕಂಡದ್ದೆಲ್ಲಾ ಚೆಂದವೇ. ಎಲ್ಲವೂ ಕಾಮ್ಯವೇ! ಕಾಮದ ವಿರಾಟ್‌ಸ್ವರೂಪದ ಕುರುಹನ್ನು ಕಾಣುತ್ತೇವೆ. ಕತ್ತಿನ ಸುತ್ತ ತೋಳುಗಳನ್ನು ಬಳಸಿ ಬಿಗಿಯಾಗಿ ಅಪ್ಪಿಕೊಂಡ ಮಗುವಿನ ಮೋಹಭಾವನೆಯನ್ನು ಕಾಣಬಹುದು. ಹೊಸ ಬಟ್ಟೆ ಹಾಕಿ, ಕ್ರಾಪು ಬಾಚಿ, ಅಥವಾ ಮೊಗ್ಗಿನ ಜಡೆ ಹಾಕಿ, 'ಎಷ್ಟು ಚೆನ್ನಾಗಿದ್ದೀಯಾ!' ಎಂದು ಹೇಳಿದಾಗ ಮಗುವಿನ ಮದವನ್ನು ಅದರ ಮುಖದಲ್ಲಿ ಸುಲಭವಾಗಿ ಕಾಣಬಹುದು.

'ಅರಿಷಡ್ವರ್ಗ'ವೆಂದು ಹೆಸರು ಹೊತ್ತ ಆರೂ ಗುಣಗಳ ಪ್ರಾರಂಭವನ್ನು ಎರಡು ವರ್ಷದ ಮಗುವಿನಲ್ಲಿ ಕಾಣಬಹುದು. ಈ ಗುಣಗಳಿಂದಲೇ ಮಗುವು "ತನ್ನ"ತನವನ್ನು ಬೆಳಸಿಕೊಂಡು, ತನಗೆ ಬೇಕಾದುದೆಲ್ಲವನ್ನೂ ಪಡೆಯಲು ಪ್ರಯತ್ನಮಾಡುತ್ತದೆ. ಹಾಗಾಗಿ ಆ ಗುಣಗಳೆಲ್ಲವೂ ಮಗುವಿನ ಮುಂದಿನ ಬಾಳಿಗೆ ಅವಶ್ಯಕವಾದ ಮತ್ತು ಅದರ ವ್ಯಕ್ತಿತ್ವಕ್ಕೆ ಅತ್ಯಗತ್ಯವಾದ 'ಮಿತ್ರ ಷಡ್ವರ್ಗ'. ಇದೇ ಗುಣಗಳು ಅತಿಯಾದಾಗ ಮಾತ್ರ, ಸಮಾಜಕ್ಕೆ ಹಾನಿಯಾಗುವಂತಾದಾಗ ಮಾತ್ರ, ಅವುಗಳಿಗೆ ಅರಿಷಡ್ವರ್ಗ ಎಂದು ಹೆಸರಿಡಬೇಕು.

ಈ ಗುಣಗಳ ಜೊತೆಯಲ್ಲೇ ಮಗುವಿನಲ್ಲಿ ಇತರ ಭಾವನೆಗಳ ಪ್ರದರ್ಶನವನ್ನೂ ಕಾಣಬಹುದು. ಎರಡು ವರ್ಷದ ಮಗುವು ೩–೪ ತಿಂಗಳ ಮಗುವನ್ನು ಸಹಜವಾಗಿ ಮುದ್ದಿಸುತ್ತದೆ. ಈ ಪ್ರೇಮಪ್ರದರ್ಶನಕ್ಕೆ 'ತನ್ನ ತಮ್ಮ, ತನ್ನ ತಂಗಿ' ಎಂಬ ಭಾವನೆಯು ಕಾರಣವಲ್ಲ. ಏಕೆಂದರೆ, ಹೊಸ ಮುಖಗಳಿವೆ

ಎಂಬ ಲಜ್ಜೆಯು ಬಾರದೆ ಇದ್ದಾಗ, ಯಾವ ಚಿಕ್ಕ ಮಕ್ಕಳನ್ನು ಕಂಡರೂ ಮುದ್ದಿಡಲು ಸಹಜವಾಗಿ ತೊಡಗುತ್ತದೆ. ಅದೇ ರೀತಿ ಒಂದು ಮಗುವು ಅತ್ತರೆ, ಹತ್ತಿರಿದ್ದ ಇನ್ನೊಂದು ಮಗು ಅನುಕಂಪದಿಂದ ತಾನೂ ಅಳುತ್ತದೆ. ಮಗುವಿನ ವ್ಯಕ್ತಿತ್ವವು ಬೆಳೆದು ಬಲಿಯುವ ತನಕ, ಮಗುವು 'ಅಹಂಕಾರ'ವನ್ನು ಬೆಳಸಿಕೊಂಡು ದೊಡ್ಡವನಾಗುವ ತನಕ, ಅನುಕಂಪವು ಸಹಜವಾಗಿ ಮೂಡುತ್ತದೆ. ಅಹಂಕಾರವು ಬೆಳೆದು ಬಲಿತ ಮೇಲೆ, ಅನುಕಂಪವು ಸಹಜವಾಗಿ ಉದ್ಭವಿಸಿದರೂ, ಅದನ್ನು ಪ್ರದರ್ಶಿಸುವುದಕ್ಕೆ ಸಾಕಷ್ಟು ತೊಡಕುಗಳು ಉಂಟಾಗುತ್ತವೆ

ಅಂದರೆ, ಶೈಶವಾವಸ್ಥೆಯಲ್ಲಿ ದೇಹವು ಹೇಗೆ ಹೊರಗಿನ ವಾತಾವರಣಕ್ಕೆ ಸರಿಹೋಗಲು ಗಡುಸಾಗುತ್ತದೆಯೋ, ಅದೇ ರೀತಿ ಮನಸ್ಸು ಕೂಡ ಅಹಂಕಾರವನ್ನು ಬೆಳಸಿಕೊಂಡು, ವ್ಯಕ್ತಿತ್ವವನ್ನು ರೂಪಿಸಿಕೊಳ್ಳುತ್ತದೆ. ಹೀಗಾದಾಗ, ಮುಂದೆ ತಂದೆತಾಯಿಯರ ರಕ್ಷಣೆಯಿಲ್ಲದಿದ್ದಾಗ, ಆತ್ಮರಕ್ಷಣೆಯನ್ನು ಮಾಡಿಕೊಳ್ಳಲು ದೇಹವೂ ಮನಸ್ಸೂ ಸಿದ್ಧವಾಗಿರುತ್ತವೆ

ಮನೋದೈಹಿಕ ಬೇನೆಗಳು ಯೌವನದಲ್ಲಿ ಬರುವುದಕ್ಕೂ ಶೈಶವಾವಸ್ಥೆಯ ಬೆಳವಣಿಗೆಗೂ ಇರುವ ಸಂಬಂಧವನ್ನು ತೋರಿಸಲು ಒಂದು ನಿದರ್ಶನವನ್ನು ಕೊಡಬಹುದು.

ಅಮೆರಿಕಾದಲ್ಲಿ ಈ ಶತಮಾನದ ಎರಡು ಮೂರನೇ ದಶಕಗಳಲ್ಲಿ ಸುಮಾರು ಜನ ತಾಯಂದಿರು ಮಕ್ಕಳಿಗೆ ಹಾಲೂಡಿಸುವ ಅಭ್ಯಾಸವನ್ನು ಬಿಟ್ಟುಬಿಟ್ಟರು. ಮಕ್ಕಳಿಗೆ ಹಾಲು ಕೊಟ್ಟರೆ ತಮ್ಮ ದೇಹದ ಸೌಂದರ್ಯವು ಕಡಮೆಯಾಗುತ್ತದೆ, ಒಡಲಿನ ಕೊಂಕುಗೆರೆಗಳೆಲ್ಲವೂ ಮಾಯವಾಗಿ, ಮೈ ಸುಕ್ಕು ಸುಕ್ಕಾಗಿ ಜೋಲುಬೀಳುತ್ತದೆ ಎಂದು ಆ ತಾಯಂದಿರು ನಂಬಿದ್ದರು. ಸೌಂದರ್ಯವು ಕುಂಠಿತವಾದರೆ ಮನೆಯಾತನನ್ನು ಹಿಡಿದಿರಿಸಿಕೊಳ್ಳಲು ಸಾಧ್ಯವಾಗದಿರಬಹುದು, ಸವತಿಕಾಟ ಶುರುವಾಗಬಹುದು ಎಂದು ಹೆದರಿದ್ದರು. ಆ ಕಾರಣದಿಂದಲೇ ಮಕ್ಕಳಿಗೆ ಶೀಸೆಹಾಲನ್ನು ಕುಡಿಸಲು ಪ್ರಾರಂಭಿಸಿದರು. ಹಾಗೂ ತಮಗಿರುವ ಕಾಯಿಲೆಗಳು ಮಕ್ಕಳಿಗೆ ಮೊಲೆಹಾಲುಣಿಸಿದರೆ ಬರಬಹುದು, ಎಂದುಕೊಂಡು ವೈದ್ಯಕೀಯವಾಗಿ ಶುದ್ಧ ಎಂದೆನಿಸಿದ ಡಬ್ಬದ ಹಾಲನ್ನು ಸ್ವಚ್ಛಗೊಳಿಸಿದ ಶೀಸೆಗಳಲ್ಲಿ ಹಾಕಿ ಕುಡಿಸಲು ಪ್ರಾರಂಭಿಸಿದರು.

ಹೀಗೆ ಡಬ್ಬದ ಹಾಲನ್ನು ಶೀಸೆಯಲ್ಲಿ ಕುಡಿದ ಮಕ್ಕಳು, ತಾಯ ಮೊಲೆಯನ್ನು ಹಿಡಿದು ಸಂತೋಷದಿಂದ, ಸಂತಸದ ತಾಯ ಮುಖವನ್ನು ನೋಡುತ್ತ ಕುಡಿದ ಮಕ್ಕಳಂತೆ ಸುರಕ್ಷಿತವಾದ ಮನಸ್ಸಿನಿಂದ ಬೆಳೆಯಲಿಲ್ಲ. ಶೀಸೆ ಹಿಡಿದು ಕುಡಿದರೆ ಹೊಟ್ಟೆ ತುಂಬುತ್ತದೆ. ಆದರೆ ಮನಸ್ಸಿಗೆ ಹಿತವಾಗುತ್ತದೆಯೆ ?

ಇಂಥ ಶೀಸೆಮಕ್ಕಳು ಎರಡನೇ ಮಹಾಯುದ್ಧದ ವೇಳೆಗೆ ೨೦–೨೨ರ ಯುವಕರಾಗಿದ್ದರು. ಸೈನ್ಯಕ್ಕೆ ಸೇರಿಕೊಂಡರು. ಇವರಲ್ಲಿ ನೂರಕ್ಕೆ ೭೦–೮೦ ರಷ್ಟು ಜನ ಹೊಟ್ಟೆಯ ಉರಿ, ಹೊಟ್ಟೆಯ ನೋವು, ಕಮರುತೇಗು ಇತ್ಯಾದಿ ಕಾಯಿಲೆಗಳಿಂದ ನರಳಿದರು.

ಆದರೆ ಅದೇ ಯುದ್ಧದಲ್ಲಿ ಯೂರೋಪಿನ ಹಳ್ಳಿಹಳ್ಳಿಗಳಿಂದ ಸೈನ್ಯಕ್ಕೆ ಸೇರಿದ ಅದೇ ವಯಸ್ಸಿನ ಯುವಕರಲ್ಲಿ ನೂರಕ್ಕೆ ೧೦–೧೫ರಷ್ಟು ಜನರು ಹೊಟ್ಟೆಯ ರೋಗಗಳಿಂದ ನರಳಿದರು.

ಅಮೆರಿಕಾದ ಮಾನಸಿಕ ವೈದ್ಯವಿಜ್ಞಾನಿಯೊಬ್ಬನು, ಶೈಶವಾವಸ್ಥೆಯಲ್ಲಿ ಮಾನಸಿಕ ಹಿತವನ್ನು ಹಾಲುಕುಡಿಸುವಾಗ ಸಾಧಿಸದೆ ಇದ್ದ ಕಾರಣದಿಂದ ಅಮೆರಿಕಾದ ಸಿಪಾಯಿ ಯುವಕರು ಅಷ್ಟು ಹೆಚ್ಚಾಗಿ ಉದರರೋಗಗಳಿಂದ ನರಳುತ್ತಾರೆ ಎಂದು ತೀರ್ಮಾನಿಸಿದನು. ಅಮೆರಿಕನ್ ಸಿಪಾಯಿಯನ್ನು G.I. ಎಂದು ಕರೆಯುತ್ತಾರೆ. ವೈದ್ಯಕೀಯ ಭಾಷೆಯಲ್ಲಿ G.I. ಅಂದರೆ Gastro-Intestinal ಎಂದರೆ ಹೊಟ್ಟೆಕರುಳುಗಳ ಎಂಬ ಅರ್ಥ ಬರುತ್ತದೆ. ಆ ವಿಜ್ಞಾನಿಯು ಈ ಶ್ಲೇಷೆಯನ್ನು ಮನಸ್ಸಿನಲ್ಲಿಟ್ಟುಕೊಂಡು ಎರಡನೇ ಮಹಾಯುದ್ಧವನ್ನು 'G. I. War' ಎಂದು ಕರೆದ.

ಶೈಶವದ ಈ ಮಾನಸಿಕ ಅತೃಪ್ತಿಯೇ, ಹತ್ತಾರು ವರ್ಷಗಳಾದ ಮೇಲೂ, ಅವಕಾಶ ದೊರಕಿದಾಗ, ದೇಹದ ಸುಸೂತ್ರ ಕಾರ್ಯಕ್ರಮಕ್ಕೆ ಭಂಗ ತರಬಹುದು.

### ಆ. ಬಾಲ್ಯಾವಸ್ಥೆ

ಮಗುವಿಗೆ ಮೂರು ವರ್ಷಗಳಾದಾಗ ತನ್ನ ಪಾಡಿಗೆ ತಾನು ಓಡಾಡಲು, ಆಟವಾಡಲು, ಮಾತನಾಡಲು, ಕಲಿತುಕೊಂಡಿರುತ್ತದೆ. ತನ್ನ ಆಹಾರವನ್ನು ತಾನೇ ಊಟಮಾಡಲು ಕಲಿತಿರುತ್ತದೆ.

ದೇಹವು ಬೆಳೆಯುತ್ತಿರುತ್ತದೆ. ಸುತ್ತಲಿನ ವಾತಾವರಣದಿಂದ ಅಗೋಚರ ಶತ್ರುಗಳಾದ ಬ್ಯಾಕ್ಟೀರಿಯಾಗಳು ದೇಹವನ್ನು ಹೊಕ್ಕು ಧಾಳಿಮಾಡುತ್ತವೆ. ಆಗ ದೇಹವು ಶತ್ರುನಿರ್ಮೂಲನ ಮಾಡಲು ರಕ್ಷಣಾ ಕಾರ್ಯಕ್ರಮಗಳನ್ನು ಯಶಸ್ವಿಯಾಗಿ ಏರ್ಪಡಿಸುತ್ತದೆ. ಹೀಗಾಗಿ ಬಾಲ್ಯದಲ್ಲಿ ಹಲವಾರು ಕಾಯಿಲೆಗಳು ಬಂದು, ಗುಣವಾಗಿ, ಮುಂದೆ ಆ ಕಾಯಿಲೆಗಳು ಬಾರದಂತೆ ರಕ್ಷಣಾ ವ್ಯವಸ್ಥೆಯು ಸಿದ್ಧವಾಗುತ್ತದೆ. ನಾಯಿಕೆಮ್ಮು, ದಢಾರ, ಇತ್ಯಾದಿ ಕಾಯಿಲೆಗಳೆಲ್ಲವೂ ಬಾಲ್ಯದಲ್ಲಿ ಹೆಚ್ಚು ಕಾಣಿಸಿಕೊಳ್ಳುತ್ತವೆಯೇ ಹೊರತು, ಯೌವನದಲ್ಲಲ್ಲ. ವೈಜ್ಞಾನಿಕ ವೈದ್ಯಕೀಯ ಪ್ರಗತಿಯಿಂದಾಗಿ ಇನಾಕ್ಯುಲೇಷನ್ ಮಾಡಿಸಿ, ಕಾಯಿಲೆ ಬಾರದೆ ಇದ್ದರೂ ರಕ್ಷಣಾ ವ್ಯವಸ್ಥೆಯು ಸುಸೂತ್ರವಾಗಿರುವಂತೆ ಮಾಡಬಹುದು.

ಮನಸ್ಸು ಕೂಡ ಸುತ್ತಲಿನ ವಾತಾವರಣವನ್ನು ತಿಳಿದುಕೊಳ್ಳಲು ಕಾತರಪಡುತ್ತದೆ. 'ಅದು ಏನು ? ಇದು ಏನು ? ಅದು ಯಾಕೆ ? ಇದು ಬೇಕೆ ?' ಎಂದು ಏನೆಲ್ಲಾ ಪ್ರಶ್ನೆಗಳನ್ನು ಮಕ್ಕಳು ಕುತೂಹಲದಿಂದ ಕೇಳುವುದಿಲ್ಲ ? ಎಷ್ಟೋ ಸಾರಿ ಅನನುಕೂಲವಾದ ಪ್ರಶ್ನೆಗಳನ್ನೂ ಕೇಳುವುದಿಲ್ಲ ? ಮನೆಯವರು ನಡೆದುಕೊಳ್ಳುವ ರೀತಿಯನ್ನೇ ತಾವೂ ಕಲಿತುಕೊಳ್ಳುತ್ತವೆ. ಹೀಗೆ ಕಲಿಯುವ ಕುತೂಹಲವು ಬಾಲ್ಯಾವಸ್ಥೆಯಲ್ಲಿ ಸ್ಪಷ್ಟವಾಗಿರುತ್ತದೆ.

ಮಾನಸಿಕ ಚಟುವಟಿಕೆಗಳಲ್ಲಿ ಹಗಲುಗನಸು ಕಾಣುವ ಪ್ರವೃತ್ತಿಯು ಅತಿಯಾಗಿ ಕಾಣಬರುತ್ತದೆ. ಆದರೆ ದೊಡ್ಡವರು ಮನಸ್ಸಿನಲ್ಲೇ ಗಾಳಿಗೋಪುರ ಕಟ್ಟಿದರೆ, ಬಾಲ್ಯಾವಸ್ಥೆಯಲ್ಲಿ ಮಕ್ಕಳು ಹಗಲುಗನಸುಗಳನ್ನು ಆಡಿ ತೋರಿಸುತ್ತಾರೆ. ಅವರ ಮಾತುಗಳಲ್ಲಿ ಭ್ರಾಂತಿಯ ಅಂಶವು ತುಂಬಿರುತ್ತವೆಯಾದರೂ ಅವೆಲ್ಲವೂ ಆ ಕ್ಷಣದಲ್ಲಿ ಮಕ್ಕಳಿಗೆ ಸತ್ಯವಾಗಿಯೇ ಕಾಣಿಸುತ್ತದೆ. ಮಂಡಿ ಕೋಲನ್ನು ಕುದುರೆಯನ್ನಾಗಿ ಮಾಡಿಕೊಂಡು ಅವರು ನಾಗಾಲೋಟ ಓಡುವಾಗ ಅವರ ಮನಸ್ಸಿನಲ್ಲಿ ಮಂಡಿಕೋಲು ದಿಟವಾದ ಕುದುರೆಯೇ ! ಹಂಚಿಕಡ್ಡಿಗಳಲ್ಲಿ ಮನೆಕಟ್ಟುವಾಗ ಅದು ಅವರಿಗೆ ದಿಟವಾದ ಅರಮನೆಯೇ ! Fantasy ಅವರಲ್ಲಿ ಅತ್ಯಮೋಘವಾಗಿರುತ್ತದೆ.

ನಿರ್ಣಯಮಾಡುವ ಮಾನಸಿಕ ಚಟುವಟಿಕೆಯು ಅವರಲ್ಲಿ ಅತಿಶಯವಾಗಿ ಇರಬೇಕಾಗಿಲ್ಲ. ಅಂತಹ ಅವಕಾಶಗಳು ಹೆಚ್ಚಾಗಿರುವುದಿಲ್ಲ.

ತಾನು ಮಾಡಿದ್ದೇ ನ್ಯಾಯ ಎಂದು ತರ್ಕಬದ್ಧವಾದ ಸಮಾಧಾನ ಹೊಂದುವ ಚಟುವಟಿಕೆಯೂ ಬಾಲ್ಯದಲ್ಲಿ ಯಶಸ್ವಿಯಾಗಿರುವುದಿಲ್ಲ. ಏಕೆಂದರೆ ತಾರ್ಕಿಕವಾಗಿ ಆಲೋಚಿಸಲು ಸಾಕಷ್ಟು ಲೋಕಜ್ಞಾನವನ್ನು ಮಕ್ಕಳು ಇನ್ನೂ ಸಂಪಾದಿಸಿಕೊಂಡಿರುವುದಿಲ್ಲ.

ಪ್ರಜ್ಞಾ ಪ್ರೇರಿತ ಚಟುವಟಿಕೆಯು ಸಾಮಾನ್ಯವಾಗಿ ಬಾಲ್ಯದಲ್ಲಿ ಕಾಣ ಬರುವ ಸಂಭವ ಇಲ್ಲ. ಏಕೆಂದರೆ ಕುತೂಹಲದಿಂದಾಗಲಿ ಅನುಕಂಪದಿಂದಾಗಲಿ ಯಾವುದಾದರೂ ಒಂದು ವಿಷಯವು ಹೊಳೆಯಬಹುದು. ಆದರೆ ಆ ವಿಷಯ ವಾಗಿ ದೀರ್ಘ ಆಲೋಚನೆ ಮಾಡಿ ಯಾವುದೋ ಒಂದು ಸಿದ್ಧಾಂತವನ್ನಾಗಲಿ. ಕೃತಿಯನ್ನಾಗಲಿ ಮಾಡಲು ಲೋಕಜ್ಞಾನವಾಗಲಿ, ಲೋಕಾನುಭವವಾಗಲಿ ಇರುವುದಿಲ್ಲ.

ಮಾನಸಿಕ ಭಾವನೆಗಳಲ್ಲಿ ಶೈಶವಾವಸ್ಥೆಯಿಂದು ಕಂಡ ಗುಣಗಳೆಲ್ಲವನ್ನೂ ಬಾಲ್ಯದಲ್ಲಿ ಸ್ಫುಟವಾಗಿ ಕಾಣಬಹುದು. ವ್ಯಕ್ತಿತ್ವವನ್ನು ಬೆಳೆಸಿಕೊಳ್ಳುವ ಸಲುವಾಗಿ ವಿಂತ್ರ ಷಡ್ವರ್ಗದ ಪ್ರದರ್ಶನವನ್ನು ಸುಲಭವಾಗಿ ಕಾಣಬಹುದು. ತನಗೆ ಬೇಕಾದ ವಸ್ತುವನ್ನು ಅತ್ತೂ ಕರೆದು ಗಿಟ್ಟಿಸಿಕೊಳ್ಳಲು ಆಗದಿದ್ದರೆ. ಶ್ರೀಕೃಷ್ಣಪರಮಾತ್ಮನ ಮಾದರಿಯನ್ನನುಸರಿಸಿ ಕದಿಯುವುದು ; ಕದ್ದುದನ್ನು ಮುಚ್ಚಿಕೊಳ್ಳಲು ಸುಳ್ಳು ಹೇಳುವುದು ; ಇವೆಲ್ಲವೂ ಸಹಜವಾಗಿ ಕಾಣಬರು ತ್ತದೆ. ಕೃಷ್ಣನ ಆಟಗಳನ್ನೆಲ್ಲ ಬಾಲ್ಯದಲ್ಲಿ ಎಲ್ಲರೂ ಒಂದಲ್ಲ ಒಂದು ರೀತಿ ಯಲ್ಲಿ ಆಡಿಯೇ ಆಡುತ್ತಾರೆ. ವ್ಯಕ್ತಿತ್ವದ ಬೆಳವಣಿಗೆಗೆ ಅದು ಅತ್ಯಗತ್ಯ.

ಅನುಕಂಪ, ಕರುಣೆ, ಪ್ರೇಮ ಇವುಗಳನ್ನೂ ಬಾಲ್ಯದಲ್ಲಿ ಅತಿಯಾಗಿ ಕಾಣಬಹುದು. ಬೆಳಸಿಕೊಂಡು ಬಂದ ಅಹಂಕಾರವು ಸಾಕಷ್ಟು ಹಿರಿದಾಗಿಲ್ಲದೇ ಇರುವುದರಿಂದ ಈ ಭಾವನೆಗಳ ಪ್ರದರ್ಶನಕ್ಕೆ ಅಡ್ಡಿಗಳು ಹೆಚ್ಚಾಗಿರುವುದಿಲ್ಲ. ಗೋವಿನ ಕತೆಯಲ್ಲಿ ಗೋವು ಕರುವನ್ನು ಬಿಟ್ಟು ಹುಲಿಯು ಬಾಯಿಗೆ ತುತ್ತಾ ಗಲು ಹೋಗುವ ಪದ್ಯವನ್ನು ಕೇಳಿದ ಬಾಲಕರು ಸಾಮಾನ್ಯವಾಗಿ ಅಳುವನ್ನು ತಡೆಯಲೇ ಆರರು. ಸಾಕಿದ ನಾಯಿಯ ಮೇಲೆ ಬಾಲ್ಯದಲ್ಲಿರುವ ಪ್ರೇಮ ನಿಷ್ಕಲ್ಮಷವಾದುದು, ಗಾಢವೂ ಆದದ್ದು.

ಭಾಷೆಯನ್ನು ಯಾವಾಗ ಆದಿಮಾನವನು ರಚಿಸಿಕೊಂಡನೋ ಆಗಿ ನಿಂದಲೇ ಮಾನವನ ಪ್ರಗತಿಯು ಆರಂಭವಾಯಿತು. ಆಗ ಅವನು ಇತರ

ಹೀಳಿಗೆಯ ಜನರ ಅನುಭವಗಳನ್ನು ಸದುಪಯೋಗಪಡಿಸಿಕೊಳ್ಳಲು ಸಾಧ್ಯವಾಯಿತು—ಎಂದು ಮೊದಲೇ ಹೇಳಿದೆವು. ಬರೆಯುವುದನ್ನು ಅರ್ಥಮಾಡಿಕೊಳ್ಳುವುದು, ಅದಕ್ಕೆ ಉತ್ತರವಾಗಿ ತಾನು ಮಾತನಾಡುವುದು, ತಾನು ಕೇಳಿಕಂಡದ್ದನ್ನು ಅರ್ಥಮಾಡಿಕೊಳ್ಳುವುದು. ಈ ಎಲ್ಲ ಚಟುವಟಿಕೆಗಳೂ ಮೆದುಳಿನ ಮಾತಿನ ಭಾಗದಲ್ಲಿ (Speech Brain) ಕೇಂದ್ರೀಕರಿಸಲ್ಪಟ್ಟಿದೆ. ಈ ಮೆದುಳಿನ ಭಾಗವು ಬಾಲ್ಯದ ೩ನೇ ವರ್ಷದಿಂದ ೬ನೇ ವರ್ಷದ ಒಳಗೆ ಪೂರ್ತಿ ಬೆಳೆಯುತ್ತದೆ. ಆ ಕಾಲದಲ್ಲಿ ಮನೆಯ ವಾತಾವರಣದಿಂದ, ಅಥವಾ ಶಾಲೆಯ ವಾತಾವರಣದಿಂದ ಬಾಲಕರ ಮನಸ್ಸಿನಲ್ಲಿ ಭಯವು ಹೆಚ್ಚಾಗಿದ್ದರೆ ಅಂತಹವರಿಗೆ ತೊದಲು ಇತ್ಯಾದಿ ಮಾತಿನ ದೋಷಗಳು ತಾಕಬಹುದು. ಹುಟ್ಟು ಕಿವುಡಾಗಿದ್ದರೆ, ಹೇಳಿದುದು ಕೇಳಿಸದೆ, ಬಾಲಕನು ಮಾತನಾಡುವುದನ್ನು ಕಲಿಯಲಾರ. ಆಗ ಮೆದುಳಿನ ಮಾತಿನ ಭಾಗವು ಪೂರ್ಣವಾಗಿ ಬೆಳೆಯುವುದೂ ಇಲ್ಲ. ಮುಂದೆ ಕಿವುಡನ್ನು ಸರಿಪಡಿಸುವ ಯಂತ್ರೋಪಕರಣಗಳನ್ನು ಉಪಯೋಗಿಸಿದರೂ ಮಾತಿನ ಭಾಗವು ಮೆದುಳಿನಲ್ಲಿ ಪೂರ್ಣಗೊಳ್ಳುವುದೇ ಇಲ್ಲ.

ಭಾಷೆಯು ಮಾನವನ ಪ್ರಾಜ್ಞತೆಗೆ ಎಷ್ಟು ಅತ್ಯವಶ್ಯಕವಾದುದು ಎಂದು ತಿಳಿದ ಮೇಲೆ, ಬಾಲ್ಯದಲ್ಲಿ ಭಾಷೆಯನ್ನು ಪೂರ್ಣವಾಗಿ ಕಲಿಯುವ ಸಕಲ ಸಾಧನಗಳನ್ನೂ ಸರಿಯಾಗಿಟ್ಟುಕೊಳ್ಳಬೇಕು. ೩–೬ರ ವಯಸ್ಸಿನಲ್ಲಿ ಅತಿ ಮುಖ್ಯವಾಗಿ ಮಾಡಬೇಕಾದ ಕೆಲಸ ಇದು.

ಈ ಕಾರಣದಿಂದಲೇ ವಿದ್ಯಾಭ್ಯಾಸತಜ್ಞರು ಆರನೇ ವರ್ಷವಾದ ಮೇಲೆ ಮಕ್ಕಳನ್ನು ಶಾಲೆಗೆ ಕಳಿಸಬೇಕು ಎಂದು ಸಿದ್ಧಾಂತ ಮಾಡಿರುವುದು. ಈ ಮಾತು ಕಿಂಡರ್‌ಗಾರ್ಟನ್ ಶಾಲೆಗಳಿಗಾಗಲಿ, ಶಿಶುವಿಹಾರಗಳಿಗಾಗಲಿ ಅನ್ವಯಿಸುವುದಿಲ್ಲ. ಶಾಲೆಗಳಲ್ಲಿ ಮನೆಯ ವಾತಾವರಣವನ್ನೇ ಆದಷ್ಟು ಮಟ್ಟಿಗೆ ಸಾಧಿಸಿ, ಅಂಕೆಶಿಕ್ಷೆಯ ಭಯವನ್ನು ನಿರ್ಮೂಲಮಾಡಲೆತ್ನಿಸುತ್ತಾರೆ.

ಬಾಲ್ಯಾವಸ್ಥೆಯಲ್ಲಿ ಮನೋದ್ವೈಹಿಕ ಬೇನೆಗಳು ಬಹು ಸುಲಭವಾಗಿ ಬರಬಹುದು. ಮನೆಯ ವಾತಾವರಣವು 'ಭಯ'ದಿಂದ ಕೂಡಿದ್ದರೆ, (ಅಂದರೆ ಅತಿ ಶಿಸ್ತಿನ ತಾಯ್ತಂದೆಯರಿರುವ ಮನೆಯಲ್ಲಿ) ಬಾಲ್ಯಾವಸ್ಥೆಯ ಸಹಜವಾದ ಕುತೂಹಲದಿಂದ ಉಂಟಾದ ಚೇಷ್ಟೆಗಳನ್ನು ಮಾಡಲು ಭಯವಿರುವುದರಿಂದ, ಮನೋದ್ವೈಹಿಕ ಬೇನೆಗಳು ಉಂಟಾಗುತ್ತವೆ. ಹಲವು ತರಹ ಉಬ್ಬಸಗಳು,

ವಾಂತಿಭೇದಿಗಳು, ಮಲಬದ್ಧತೆ, ಕೆಲವು ವೇಳೆ ಮೂರ್ಛೆ ಬೀಳುವುದು ಇಂತಹ ಉಗ್ರರೋಗಗಳು ಬರಬಹುದು. ಹಾಗೂ ಹೊಟ್ಟೆನೋವು, ಮೋಡುತನ, ಇತ್ಯಾದಿಗಳೂ ಕಾಣಿಸಿಕೊಳ್ಳಬಹುದು.

ಆದರೆ, ಮನಸ್ಸು ಸುತ್ತಲೂ ನೋಡಿ, ಕುತೂಹಲದಿಂದ ಹರಿಯುತ್ತಿರುತ್ತದೆ. ಹಾಗಾಗಿ, ಮನಸ್ಸಿನಲ್ಲಿ ಸ್ಥಿರವಾಗಿ ಕೂತ ಯಾವುದೊಂದು ವಿಷವಿಷಯವೂ ದೇಹದ ಮೇಲೆ ಹೆಚ್ಚಾಗಿ ಸೇಡು ತೀರಿಸಿಕೊಳ್ಳಬೇಕಾಗುವುದಿಲ್ಲ. ಆದುದರಿಂದ ಪ್ರಕೃತಿಸಹಜವಾಗಿಯೇ ಮನೋದೈಹಿಕ ಬೇನೆಗಳು ಉಂಟಾದರೂ ಕಾಲಾನುಕ್ರಮದಲ್ಲಿ ಅವು ಸ್ವಾಭಾವಿಕವಾಗಿಯೇ ಗುಣವಾಗುತ್ತವೆ.

## ೩. ಯೌವನಾವಸ್ಥೆ (ಬ್ರಹ್ಮಚರ್ಯಾಶ್ರಮ-ಗೃಹಸ್ಥಾಶ್ರಮ)

೧೫-೧೭ರ ಪ್ರಾಯದಲ್ಲಿ ಹೆಣ್ಣು ಹುಡುಗಿಯರೂ ೧೮-೨೦ರ ಪ್ರಾಯದಲ್ಲಿ ಗಂಡುಹುಡುಗರೂ ಬೆಳವಣಿಗೆಯಲ್ಲಿ ಒಂದು ಹಂತವನ್ನು ಮೀರುತ್ತಾರೆ. ದೇಹವು ಆಗ ವಿಶೇಷ ಮಾರ್ಪಾಡನ್ನು ಹೊಂದುತ್ತದೆ. ಹುಡುಗಿಯರು ಬೆಳೆದು ತಾಯ್ತನದ ಜವಾಬ್ದಾರಿಯನ್ನು ಹೊರಲು ಶಕ್ತರಾದ ಹೆಂಗಸರಾಗುತ್ತಾರೆ. ತಾಯ್ತನಕ್ಕೆ ಆಗತ್ಯವಾದ ಅಂಗಾಂಗಗಳೆಲ್ಲವೂ ಬೆಳೆದು ಅಣಿಯಾಗುತ್ತವೆ. ಹುಡುಗರೂ ಅದೇ ರೀತಿ ಶೀಘ್ರವಾಗಿ ಬೆಳೆದು ಪಿತೃತ್ವದ ಜವಾಬ್ದಾರಿಯನ್ನು ವಹಿಸಿಕೊಳ್ಳಲು ಸಿದ್ಧರಾಗುತ್ತಾರೆ.

ಈ ವಯಸ್ಸಿನಲ್ಲಿ ದೇಹದ ಎಲ್ಲ ಸ್ನಾಯು (tissue) ಗಳೂ ಬಹಳ (Elastic) ಸ್ಥಿತಿಸ್ಥಾಪಕಶಕ್ತಿಯುಳ್ಳವಾಗಿ ಇರುತ್ತವೆ. ಹಾಗಾಗಿ ಕೀಲುಗಳ ಸುತ್ತಲಿರುವ ಮಾಂಸಖಂಡಗಳೂ, ಟೆಂಡನ್ನುಗಳೂ, ಅವುಗಳನ್ನು ಸುತ್ತುವರಿದಿರುವ ಸಂಯೋಜಕಟಿಷ್ಯುಗಳೂ, ಬಹಳ elastic ಆಗಿದ್ದು, ಚಲನವಲನಗಳನ್ನು ಅತಿಕ್ಷಿಪ್ರವಾಗಿ ಮಾಡಲು ಸಾಧ್ಯ. ಆದುದರಿಂದಲೇ ವೇಗವಾಗಿ ಓಡುವುದು, ಈಜುವುದು, ವ್ಯಾಯಾಮಮಾಡುವುದು, ಆಟಗಳಾಡುವುದು, ಇವೆಲ್ಲದರಲ್ಲೂ ಈ ವಯಸ್ಸಿನ ಯುವಕಯುವತಿಯರೇ ಮೊದಲಿಗರಾಗುವುದು. ಈ ಗುಣದಿಂದಲೇ ಅತಿ ಕಷ್ಟಕರವಾದ ಕೆಲಸಗಳನ್ನೂ ಬಳಲಿಸುವ ಸಾಹಸಗಳನ್ನೂ ಮಾಡಲು ಸಾಧ್ಯವಾಗುತ್ತದೆ.

ದೇಹದಲ್ಲಿನ ಚಟುವಟಿಕೆಗಳಿಗೆ ನಸರವಮೂರ್ಹ್‌ಳ ಸಮನ್ವಯಗೊಂಡ ಕಾರ್ಯಕ್ರಮಗಳು ಅತ್ಯವಶ್ಯಕ. Sensory ಸಂದ್ಧಿಗಳನ್ನು ಮೆದುಳಿನ ಕೇಂದ್ರ ಗಳು ತಕ್ಷಣ ಅರ್ಥಮಾಡಿಕೊಂಡು, ದೇಹದ ಇಂತಿಂತಹ ಮಾಂಸಖಂಡಗಳು ಈ ರೀತಿ ಚಟುವಟಿಕೆಯನ್ನು ಹೂಡಲಿ ಎಂದು ಆ ಕ್ಷಣದಲ್ಲೇ ಆಜ್ಞೆಯೀಯು ತ್ತವೆ. ಮೆದುಳಿನ ಕೇಂದ್ರಗಳ ಈ ಚುರುಕು ಕಾರ್ಯಕ್ರಮವೇ ಯುವಕರ ಸಾಹಸಕಾರ್ಯಗಳಿಗೆಲ್ಲಾ ಮೂಲಭೂತವಾದ ಗುಣ.

ದೇಹದಲ್ಲಿ ಮತ್ತೊಂದು ಚಟುವಟಿಕೆಯು ಈ ವಯಸ್ಸಿನಲ್ಲೇ ತಲೆಯೆತ್ತಿ ಕೊಳ್ಳುತ್ತವೆ. ತಾಯ್ತನ, ಪಿತೃತ್ವ. ಇವುಗಳಿಗೆ ಸಂಬಂಧಿಸಿದ, ವಂಶಾಭಿವೃದ್ಧಿ ಮಾಡುವ ಈ ದೇಹದ ಚಟುವಟಿಕೆಗೆ ಮನಸ್ಸಿನ ಪ್ರಭಾವವೂ ಅಷ್ಟೇ ಮುಖ್ಯ ವಾಗಿರುತ್ತದೆ. ಮೂಲ ಉದ್ದೇಶವು ವಂಶಾಭಿವೃದ್ಧಿಯಾದರೂ ಈ ಚಟುವಟಿಕೆ ಯಲ್ಲೇ ತಾತ್ಕಾಲಿಕವಾಗಿಯಾದರೂ ಉತ್ಕಟವಾದ ಸುಖ ಇರುವಂತೆ ಪ್ರಕೃತಿಯು ಏರ್ಪಾಡುಮಾಡಿದೆ. ಅತಿ ಯಶಸ್ವಿಯಾದ ಈ ಏರ್ಪಾಡಿನಿಂದಲೇ ಪ್ರಾಣಿಗಳ ವಂಶಾಭಿವೃದ್ಧಿಯು ಯಥೇಚ್ಛವಾಗಿ ನಡೆಯುತ್ತಿದೆ. ಕೋಟ್ಯಂತರ ವರುಷಗಳ ಹಿಂದೆ ಕಂಡುಬಂದ ಪ್ರಾಣಿಗಳೂ, ವಾತಾವರಣಕ್ಕೆ ಸರಿಹೋಗುವ ಪಾಠವನ್ನು ಕಲಿತ ಪ್ರಾಣಿಗಳೂ ಇಂದೂ ಬಾಳಿ ಬದುಕಿರುವುದು ಈ ಚಟುವಟಿಕೆ ಯಿಂದಲೇ.

ಯೌವನದ ಮಾನಸಿಕ ಚಟುವಟಿಕೆಗಳು ವಿಸ್ಮಯಕಾರಿಯಾದುವು. ಮನೆ ಮಠಗಳಲ್ಲಿ ಕಲಿತ ಪಾಠಗಳು, ಅಂದರೆ ಹಿಂದಿನ ನೂರಾರು ಪೀಳಿಗೆಯವರ ಅನುಭವಗಳು, ಅವುಗಳಿಂದ ಅವರುಗಳು ಕಲಿತ ಅಮರವಾದ ಪಾಠಗಳು, ಇವೆಲ್ಲವನ್ನೂ ಯುವಕರು ಕಲಿತಿರುತ್ತಾರೆ. ಹಾಗೂ ಕುತೂಹಲವು ಅಮಿತ ವಾಗಿದ್ದು, ಸುತ್ತಲೂ ನಡೆಯುವ ಪ್ರಕೃತಿಯ, ಸಮಾಜದ, ನೆರೆಹೊರೆಯ ಕೆಲಸಕಾರ್ಯಗಳನ್ನು ಕಂಡು, ಕೇಳಿ, ತಮ್ಮ ಜ್ಞಾನಭಂಡಾರವನ್ನು ತುಂಬಿ ಕೊಂಡಿರುತ್ತಾರೆ. ಯುವಕರ ಲೋಕಾನುಭವವು ಕಡಮೆಯಾಗಿದ್ದರೂ ಲೋಕ ಜ್ಞಾನವು ಸುಮಾರಾಗಿರುತ್ತದೆ. ಹಾಗೂ ಪ್ರಕೃತಿಯ ಮೂಲ ಉದ್ದೇಶವಾದ ವಂಶಾಭಿವೃದ್ಧಿಗೆ ದೇಹವು ಅಣಿಯಾಗುತ್ತಿರುವುದರಿಂದ, ದೈಹಿಕವಾದ ಸಿದ್ಧತೆ ಗಳೆಲ್ಲವೂ ಮನಸ್ಸಿನ ಮೇಲೆ ತೀವ್ರವಾದ ಪರಿಣಾಮವನ್ನುಂಟುಮಾಡುತ್ತವೆ.

ವ್ಯಕ್ತವಾಗಿಯೋ, ಸುಪ್ತವಾಗಿಯೋ ಮನಸ್ಸು ಈ ಮೂಲ ಉದ್ದೇಶವನ್ನು ಮೆಲುಕು ಹಾಕುತ್ತಲೇ ಇರುತ್ತದೆ.

ಹಾಗಾಗಿ ಮಾನಸಿಕ ಚಟುವಟಿಕೆಗಳಲ್ಲಿ ನಾವು ಮೊದಲು ವಿವರಿಸಿದ ಹಗಲುಗನಸು ಕಾಣುವ ಸ್ವಭಾವವು ಯೌವನದಲ್ಲಿ ಅತಿಯಾಗಿರುತ್ತದೆ. ತಾನು ಬೆಳೆದು ಪ್ರವರ್ಧಮಾನಕ್ಕೆ ಬಂದಾಗ ಭೂಲೋಕವನ್ನೇ ಸರಿಪಡಿಸುತ್ತೇನೆ ಎಂಬ ಧ್ಯೇಯವಾದೀ ಕನಸುಗಳನ್ನು ಕಾಣುತ್ತಲೇ ಇರುತ್ತಾನೆ. ಅಂತಹ ವಯಸ್ಸಿನಲ್ಲಿ ಧ್ಯೇಯದ ಸಾಧನೆಗೆ ಯಾವುದೊಂದು ಅವಕಾಶ ದೊರೆತರೂ ಹಿಂದು ಮುಂದು ನೋಡದೆ ಧೈರ್ಯದಿಂದ ಮುನ್ನುಗ್ಗುತ್ತಾನೆ. ಅಭಿಮನ್ಯುವಿನಂತೆ ಕೆಚ್ಚಿನಿಂದ ಧ್ಯೇಯಕ್ಕಾಗಿ ಹೋರಾಡುತ್ತಾನೆ. ಗಾಂಧೀಜಿಯವರ ಧ್ಯೇಯವಾದೀ ಸ್ವಾತಂತ್ರ್ಯ ಕಹಳೆಗೆ ಓಗೊಟ್ಟು ಎಷ್ಟು ಜನ ಕಾಲೇಜು ಯುವಕರು ಓದುಬರಹಕ್ಕೆ ತಿಲಾಂಜಲಿಕೊಟ್ಟು ಮುನ್ನುಗ್ಗಲಿಲ್ಲ ! ಧ್ಯೇಯಸಾಧನೆಯಾದಮೇಲೆ ಇವರಲ್ಲಿ ನೂರಕ್ಕೆ ೭೦-೮೦ರಷ್ಟು ಜನ ಬಾಳನ್ನು ನಡಸಲು ಯಾವುದೊಂದು ಕಸುಬನ್ನೂ ಕಲಿಯಬೇಕಾದಾಗ ಕಲಿಯದೆ, ಗೋಳು ಜೀವನ ನಡೆಸಿದ್ದನ್ನು ಕಂಡಿಲ್ಲ ? ಅಭಿಮನ್ಯುವಿನಂತೆ ಇವರುಗಳೂ ತಮ್ಮ ಬಾಳು, ಬದುಕುಗಳಿಗೆ ವ್ಯತ್ಯಯವನ್ನು ಕಾಣಿಸಿದರು ಎನ್ನಲೂಬಹುದು. ಹಗಲುಗನಸ ಗಳನ್ನು ಕಾಣು ವುದು, ದುಡುಕಿ ಅವನ್ನು ನನಸನ್ನಾಗಿ ಮಾಡುವುದು ಇದೇ ಯೌವನದ ಒಂದು ಸುಂದರ ಮಾನಸಿಕ ಮುಖ.

ಎರಡನೆಯ ಮಾನಸಿಕ ಚಟುವಟಿಕೆಯೆಂದರೆ, ನಿತ್ಯಜೀವನದಲ್ಲಿ ಕೈಕೊಳ್ಳುವ ನಿರ್ಣಯ. ನಿರ್ಣಯಿಸುವುದಕ್ಕೆ ಅವಶ್ಯಕವಾದ ಲೋಕಜ್ಞಾನವು ತಕ್ಕಮಟ್ಟಿಗೆ ಇರುತ್ತದೆ. ವಿವೇಚನಾಶಕ್ತಿಯೂ ಸಾಕಷ್ಟು ಇರುತ್ತದೆ. ಹಾಗಾಗಿ ನಿರ್ಣಯಗಳನ್ನು ಮಾಡುವ ಸ್ವಭಾವವು ಸುಲಭವಾಗಿರಬೇಕು. ಆದರೆ ಯಾವುದೊಂದು ಹಿರಿಯ ತೀರ್ಮಾನ ಮಾಡಬೇಕಾದರೂ, ಲೋಕಾನುಭವ ಸಾಕಷ್ಟು ಇಲ್ಲದಿರುವುದರಿಂದ, ಲೋಕಜ್ಞಾನವು ಬರೀ ಪುಸ್ತಕದ ಬದನೇಕಾಯಿ ಆಗಿರುವುದರಿಂದ, ತೀರ್ಮಾನಗೊಳ್ಳುವಾಗ ಸಂದೇಹವು ಹೆಡೆ ಎತ್ತುತ್ತದೆ ಆಗ ಮನೆಯ ಹಿರಿಯರ, ಅಥವಾ ಮಠದ ಗುರುಗಳ, ಅಥವಾ ಆಪ್ತ ಮಿತ್ರರ ಸಲಹೆಯನ್ನು ಪಡೆಯುವ ಉತ್ಕಟೇಚ್ಛೆ ಉಂಟಾಗುತ್ತದೆ. ಜವಾಬ್ದಾರಿಯನ್ನು ಅವರ ತಲೆಯ ಮೇಲೆ ಹಾಕಿ ಅವರು ಹೇಳಿದ್ದು ಮಾಡೋಣ ಎಂದು ಅನ್ನಿಸು

ತ್ತದೆ. ಹೊಸ ಬಟ್ಟೆಯನ್ನು ಕೊಳ್ಳುವಾಗ ಆಗಲಿ, ಬಾಳಕಸಂಬನ್ನು ಚುನಾಯಿಸುವಾಗ ಆಗಲಿ, ಮದುವೆ ಪ್ರಸಂಗವೇ ಬರಲಿ, ಹೊಸ ಚಪ್ಪಲಿಯನ್ನು ಕೊಳ್ಳುವುದೇ ಆಗಲಿ, ಸುಮಾರು ಜನ ಯುವಕರು ಅವರಿವರ ಸಲಹೆಯ ಮೇರೆ ನಡೆದುಕೊಳ್ಳುವುದನ್ನು. ಸೂಕ್ಷ್ಮವಾಗಿ ನೋಡಿದರೆ, ಕಾಣಬಹುದು.

ಹ್ಯಾಮ್ಲೆಟ್ ಈ "ನಿರ್ಣಯಾಸಂಶಯ"ಕ್ಕೆ ಅತ್ಯುತ್ತಮ ಸಾಕ್ಷಿ. ಅಷ್ಟು ಹಿರಿಯ ಸಂಸ್ಕೃತಿ ಇಲ್ಲದಿದ್ದರೆ, ಗುಡ್ಡಗಾಡಿನ ಹಳ್ಳಿಯವನಾಗಿದ್ದಿದ್ದರೆ, ತನ್ನ ತಾಯಿಯನ್ನೂ ಚಿಕ್ಕಪ್ಪನನ್ನೂ ಸುಖವಾಗಿ ಖೂನಿಮಾಡಿ, ಹ್ಯಾಮ್ಲೆಟ್ ತನ್ನ ಬಾಳನ್ನು ಲಕ್ಷಣವಾಗಿ ನಡೆಸಿಕೊಳ್ಳಬಹುದಾಗಿತ್ತು. ಅಥವಾ ೪೦–೫೦ರ ವಯಸ್ಸಾಗಿ ಲೋಕದ ಅನುಭವವು ಸಾಕಷ್ಟು ಇದ್ದಿದ್ದರೆ, ಹ್ಯಾಮ್ಲೆಟ್ ತನ್ನ ತಾಯಿ ಚಿಕ್ಕಪ್ಪ ಇವರೊಂದಿಗೆ ಬಾಳ್ವೆಯನ್ನು ನಡೆಸಲೂ ಸಾಧ್ಯವಾಗುತ್ತಿತ್ತು. ಧ್ಯೇಯವಾದೀ ವಯಸ್ಸು ; ಹಗಲುಗನಸಿನ ಸ್ವಭಾವ ; ತಂದೆಗಾಗಿರಬಹುದಾದ ಅಪಘಾತದ ವಿಷಸಂಶಯ : ಹಿರಿಯ ಸಂಸ್ಕೃತಿ, ಅಂದರೆ ತನ್ನ ಅಂತಸ್ತಿನ ಜನರ ಜೀವನದ ಕುರುಹು:— ಇವೆಲ್ಲವೂ ಸೇರಿಕೊಂಡು ಅವನ್ನು "ಮಾಡಲೇ ಬಿಡಲೇ" ಎಂಬ ಮನಸ್ಸಿನ ಜೋಕಾಲಿಯ ಮೇಲೆ ರೊಯ್ಯಂತ ಅತ್ತಿತ್ತ ದಬ್ಬಿ ಸೆಳೆಯಿತು. ಮಾನಸಿಕಪಲ್ಲಟವಾಗುವ ತನಕ, ಈ ನಿರ್ಣಯಸಮಸ್ಯೆಯು ಅವನನ್ನು ಘೋರವಾಗಿ ಕಾಡಿತು.

ತಾರ್ಕಿಕವಾಗಿ ವಿಚಾರಮಾಡಿ ಮನಸ್ಸಿಗೆ ಸಮಾಧಾನ ತಂದುಕೊಳ್ಳುವ ಚಟುವಟಿಕೆಯು ಯೌವನದಲ್ಲಿ ಸಾಕಷ್ಟು ಮಟ್ಟಿಗಿರುತ್ತದೆ. ಹಾಗೆ ಇರಲೇ ಬೇಕು. ಏಕೆಂದರೆ ಆ ಪ್ರಾಯದಲ್ಲಿ ದೇಹವೂ ಮನಸ್ಸೂ ಎರಡೂ ವಂಶಾಭಿವೃದ್ಧಿಯ ಚಟುವಟಿಕೆಯಲ್ಲಿ ವ್ಯಕ್ತವಾಗಿಯೋ ಸುಪ್ತವಾಗಿಯೋ ಮಗ್ನವಾಗಿರುತ್ತವೆ. ಹಾಗಾಗಿ ಮಿಕ್ಕ ಎಲ್ಲ ನಿತ್ಯಜೀವನದ ಕಾರ್ಯಕ್ರಮಗಳಲ್ಲಿ (ಉದಾಹರಣೆಗೆ: ಓದು ಬರಹ, ಕೃಷಿ. ಹರಟೆ. ಆಟಪಾಟ) ಇವೆಲ್ಲದರಲ್ಲೂ ಆಗಾಗ ಕುಂದುಕೊರತೆಗಳು, ತಪ್ಪುಗಳು, ಮರೆತುಹೋಗುವುದು, ಇತ್ಯಾದಿ ದೋಷ ಲೋಪಗಳು ಆಗಲೇಬೇಕು. ಸಮಾಧಾನ ತಂದುಕೊಳ್ಳಲೇಬೇಕು.

ಅಲ್ಲದೆ ಆ ಪ್ರಾಯದಲ್ಲಿ ಉದಾತ್ತವಾದ ಧ್ಯೇಯವು ಅವರ ಮನಸ್ಸನ್ನು ಆವರಿಸಿರುತ್ತದೆ. ಧ್ಯೇಯಸಾಧನೆಮಾಡುವಾಗ ಎದುರಾಗಬಹುದಾದ ಎಡರುತೊಡರುಗಳ ಅರಿವು ಅಷ್ಟಾಗಿ ಇರುವುದಿಲ್ಲ ; ಲೋಕದ ಸ್ವಾನುಭವವು ಸಾಕಷ್ಟು

ಇಲ್ಲದಿರುವುದರಿಂದ. ಹಾಗಾಗಿ ಧ್ಯೇಯಸಾಧನೆಯ ಹಂಬಲವು ಅತಿಯಾಗಿರುತ್ತದೆ. ಈ ಕಾರಣದಿಂದಲೂ ನಿತ್ಯಜೀವನದ ಕಾರ್ಯಕ್ರಮಗಳಲ್ಲಿ ಲೋಪದೋಷಗಳು ಕಾಣಿಸಿಕೊಳ್ಳುತ್ತವೆ.

ಆಗ ತರ್ಕಬದ್ಧವಾಗಿ, ತನ್ನ ಮೂಗಿನ ನೇರಕ್ಕೆ ಸರಿಹೋಗುವಂತೆ "ನಾನು ಮಾಡಿದ್ದು ಸರಿ: ತಪ್ಪಾದುದು ಹೊರಗಿನ ಇತರರಿಂದ, ಅಥವಾ ವಿಧಿಯ ಕೊಂಕು ಆಟದಿಂದ" ಎಂದು ವಿಚಾರಮಾಡಿ ತೀರ್ಮಾನಕ್ಕೆ ಬಂದು, ಆ ರೀತಿ ತನ್ನ ಮನಸ್ಸನ್ನು ಸಮಾಧಾನಮಾಡಿಕೊಳ್ಳಬೇಕು. ಇಲ್ಲದಿದ್ದರೆ ಮನಸ್ಸು ಮುಂದೆ ಕೆಲಸಮಾಡಲು ಅಶಕ್ತವಾಗುತ್ತದೆ.

"ವಿಧಿಯು ಸೇಡು ತೀರಿಸಿಕೊಳ್ಳುತ್ತದೆ; ನನ್ನ ಹಣೆಯ ಬರಹಕ್ಕೆ ಯಾರೇನು ಮಾಡಲು ಸಾಧ್ಯ? ಇದೆಲ್ಲಾ ನನ್ನ ಪ್ರಾಚೀನ ಕರ್ಮ; ಮುಖ್ಯ ಜಾತಕ ಚೆನ್ನಿಲ್ಲ" ಇತ್ಯಾದಿ ಉದ್ಗಾರಗಳೆಲ್ಲಾ ಮೇಲೆ ತಿಳಿಸಿದ ಮನಸ್ಸಿನ ತಾರ್ಕಿಕ ಚಟುವಟಿಕೆಗೆ ಉದಾಹರಣೆಗಳು.

ಮನಸ್ಸಿನ ಪ್ರಜ್ಞಾಪ್ರೇರಿತವಾದ ಚಟುವಟಿಕೆಯು ಯೌವನದಲ್ಲಿ ಅತಿಯಶಸ್ವಿಯಾಗಲು ಎಲ್ಲ ಅನುಕೂಲಗಳು ಇರುವುವೆನ್ನಬಹುದು. ದೇಹದ ಅಂಗಾಂಗಗಳೆಲ್ಲವೂ ಅತ್ಯುತ್ತಮವಾದ Elastic ಸ್ವಭಾವದಿಂದಿರುತ್ತವೆ. ಆದುದರಿಂದಲೇ ಹೆಚ್ಚಾಗಿ ದೇಹಶ್ರಮಪಡಬಹುದು. ಬಳಲಿದರೆ, ಬಲುಬೇಗ ಆಯಾಸ ಪರಿಹಾರಮಾಡಿಕೊಳ್ಳಬಹುದು. ಹಾಗಾಗಿ ಪ್ರಜ್ಞಾಪ್ರೇರಿತವಾದ ಚಟುವಟಿಕೆಯಲ್ಲಿ ಮನಸ್ಸಿಗೆ ಕೌತುಕವಾಗಿ ಕಂಡುದನ್ನು ಶ್ರಮವಹಿಸಿ ಪ್ರಯೋಗನಡಸಿ ಅರಿಯಲು ಸಾಧ್ಯವಾಗುತ್ತದೆ.

ಜೊತೆಗೆ ಯೌವನದಲ್ಲಿ ಲೋಕದ ಪುಸ್ತಕಜ್ಞಾನವು ಸಾಕಷ್ಟು ಇರುತ್ತದೆ. ಆದರೆ ಲೋಕದ ಸ್ವಂತ ಅನುಭವವು ಅಲ್ಪಪ್ರಮಾಣದ್ದು. ಹಾಗಾಗಿ ಕುತೂಹಲದಿಂದ ಕಂಡ ಸಮಸ್ಯೆಯನ್ನು ಬಿಡಿಸಲೆತ್ನಿಸುವಾಗ ಸ್ವಂತ ಸೋಲುಗಳ ಹಿಂದಿನ ಅನುಭವಗಳು ಅಡ್ಡಬರುವುದಿಲ್ಲ.

ವೈಜ್ಞಾನಿಕ ವಿಸ್ಮಯಕಾರಿ ಸಂಶೋಧನೆಗಳೂ ಅತ್ಯುತ್ತಮ ಕಲಾಕೃತಿಗಳೂ ಯೌವನಕಾಲದಲ್ಲೇ ಅತಿಶಯವಾಗಿ ಆಗುವುದೂ ಈ ಕಾರಣಗಳಿಂದಲೇನೇ.

ಮನನಮಾಡುವ ಸ್ವಭಾವವುಳ್ಳ ಯುವಕ, ಗೆಲಿಲಿಯೋ. ಕಲಾ

ಸಾಧನೆಯು, ಸೌಂದರ್ಯೋಪಾಸನೆಯು ಗೀಳು ಅವನಿಗಿತ್ತು. ಉತ್ತಮ ಸಂಗೀತ ಗಾರನೋ ವರ್ಣಚಿತ್ರಗಾರನೋ ಆಗಬಹುದಾಗಿತ್ತು ಅವನು. ವಲೆಂಬ್ರೋಸಾ ಮಠಗಳಲ್ಲಿ ಅವನಿದ್ದ ಕಾಲದಲ್ಲಿ, ವೈದಿಕ ಬಾಳನ್ನು ನಡಸೋಣವೆಂಬ ಹಂಬಲವು ಅವನಿಗಿತ್ತು. ಬಾಲ್ಯದಲ್ಲಿ ಗಣಿತಶಾಸ್ತ್ರದಲ್ಲೂ ಆಟದ ಯಂತ್ರಗಳನ್ನು ಕಟ್ಟು ವುದರಲ್ಲೂ ಅವನಿಗೆ ಬಲು ಆಸೆ. ಯುವಕ ಗೆಲಿಲಿಯೋನಿಗೆ ಈ ಎಲ್ಲ ಆಲೋಚನೆಗಳೂ ಅವನ ಹಗಲುಗನಸುಗಳಲ್ಲಿ ಒಂದಲ್ಲ ಒಂದು ರೀತಿಯಲ್ಲಿ ಬಂದಿದ್ದಿರಲೇಬೇಕು. ಹಾಗೂ ಅವನಿದ್ದ ಊರಿನ ಚೆಂದುಳ್ಳ ಯುವತಿಯರೂ ಅವನ ಹಗಲುಗನಸುಗಳಲ್ಲಿ ಪ್ರತ್ಯಕ್ಷ ಪಾತ್ರವನ್ನು ವಹಿಸಿದ್ದಿರಲೇಬೇಕು.

ಹದಿನೇಳರ ಪ್ರಾಯದಲ್ಲಿ ಒಮ್ಮೆ ಅವನು ದೇವಸ್ಥಾನಕ್ಕೆ ಹೋದ. ಅಲ್ಲಿ ಹಗಲುಗನಸು ಕಾಣುತ್ತಿದ್ದಾಗ, ಅಕಸ್ಮಾತ್ತಾಗಿ ತಲೆಯೆತ್ತಿ ನೋಡಿದ. ಎತ್ತರದ ಸೂರಿನಿಂದ ಕೆಳಕ್ಕೆ ತೂಗಬಿದ್ದಿದ್ದ ಕಂದೀಲುಗಳು ಕಾಣಿಸಿದುವು. ಅವು ತೂಗಾಡುತ್ತಿದ್ದುವು. ಆಗ ಅವನ ಮನಸ್ಸಿನಲ್ಲಿ ಒಂದು ಪವಾಡವಾಯಿತು. ದೇವಸ್ಥಾನವನ್ನು ಮರೆತ. ನಡೆಯುತ್ತಿದ್ದ ಪೂಜೆಯು ಅವನ ಮನಸ್ಸಿನಿಂದ ದೂರವಾಯಿತು. ತನ್ನ ಮುಂದಿನ ಬಾಳಿನಲ್ಲಿ ವೈದಿಕ ಜೀವನ ನಡಸಬೇಕೆ ? ಅಥವಾ ತಂದೆಯ ಆಸೆಯಂತೆ ವೈದ್ಯನಾಗಬೇಕೆ ? ಇವೆಲ್ಲವೂ ಅಗೋಚರ ವಾದುವು. ತೂಗಾಡುತ್ತಿದ್ದ ಕಂದೀಲುಗಳು ಅವನ ಮನಸ್ಸಿಗೆ ಕೌತುಕ ವನ್ನುಂಟುಮಾಡಿದುವು. ತೂಗಾಡುವಾಗ ಸ್ವಲ್ಪವೇ ಅಂತರದ ತೂಗಾಟ ವಾಗಲಿ, ಹೆಚ್ಚು ಅಂತರದ ತೂಗಾಟವಾಗಲಿ, ಎಲ್ಲದಕ್ಕೂ ಹಿಡಿಯುವ ಹೊತ್ತು ಒಂದೇ ಇರಬಹುದೇ ಎಂದು ಅಚ್ಚರಿಗೊಂಡನು. ತನಗೆ ಅನಿಸಿದ್ದು ದಿಟವಿರಬಹುದೇ ಎಂದು ಪರೀಕ್ಷೆಗೆ ಶುರುಮಾಡಿದ. ಹೊತ್ತನ್ನು ಅಳೆಯುವ ಗಡಿಯಾರವಿದ್ದಿಲ್ಲ. ಆದ್ದರಿಂದ ತನ್ನ ನಾಡಿಯ ಬಡಿತವನ್ನೇ ಹೊತ್ತಿನ ಎಣಿಕೆಗೆ ಉಪಯೋಗಿಸಿಕೊಂಡು ಪರೀಕ್ಷೆಮಾಡಿದ.

ಈ ತೆರನಾದ ಅನುಭವಗಳು ಸುಮಾರು ಜನರಿಗೆ ಆಗಿಯೇ ಇರುತ್ತವೆ. ಮನಸ್ಸನ್ನು ಹಿಡಿದು ನಿಲ್ಲಿಸುವ ಇಂತಹ ಘಟನೆಗಳು ನಿತ್ಯಜೀವನದಲ್ಲಿ ಎಷ್ಟೋ ಆಗಿರುತ್ತವೆ. ಆದರೆ ಸುಮಾರು ಜನರು ಇಂತಹ ಘಟನೆಗಳನ್ನು ಕಂಡು ಅಚ್ಚರಿ ಪಟ್ಟು ಅನಂತರ ಮರೆತುಬಿಡುತ್ತಾರೆ.

ಗೆಲಿಲಿಯೋ ಹಾಗೆ ಮರೆಯಲಿಲ್ಲ. ಅವನ ಕಾಯಮನಗಳನ್ನೆಲ್ಲಾ ಆ

ತೂಗಾಡುವ ಕಂದೀಲುಗಳೇ ಆವರಿಸಿಕೊಂಡುವು. ಯೌವನದ ಉತ್ಸಾಹ ಬಳುಕುವ ಶಕ್ತಿ. ಸಾಹಸೀ ದೇಹ ಇವೆಲ್ಲವೂ ಕೌತುಕದಿಂದ ಕಂಡುದನ್ನು ಪ್ರಯೋಗಗಳನ್ನು ನಡಸಿ ಸಿದ್ಧಾಂತಗೊಳಿಸಲು ಸಹಾಯಕವಾದುವು. ಬೀಳುವ ವಸ್ತುಗಳ ವೇಗವು ಅವುಗಳ ಭಾರವನ್ನು ಅವಲಂಬಿಸಿಲ್ಲ ಎಂಬುದನ್ನು ಸಿದ್ಧಾಂತ ಗೊಳಿಸಿದ. ಮೊದಲನೇ ಪ್ರಯೋಗದಿಂದ. ಮುಂದೆ ಕಾಲವನ್ನು ಅಳೆಯುವ ಪೆಂಡುಲಂ ಗಡಿಯಾರವು ತಯಾರಿಸಲ್ಪಡಲು ಸಾಧ್ಯವಾಯಿತು. ಎರಡನೆಯ ಪ್ರಯೋಗದಿಂದ ಇಂದಿನ ಭೌತಶಾಸ್ತ್ರಕ್ಕೆ ಅಡಿಗಲ್ಲು ಹಾಕಿದಂತಾಯಿತು.

'ಚಂದ್ರನು ಕೂಡ ಭೂಮಿಯತ್ತ ಬೀಳುತ್ತಿರಬೇಕು. ಇಷ್ಟು ವೇಗದಲ್ಲಿ' ಎಂದು ನ್ಯೂಟನ್ ಯೋಚಿಸಿ. ಮನನಮಾಡಿ. Theory of Gravitation ಅನ್ನು ಕಂಡುಹಿಡಿದ.

ಮಾನಸಿಕ ಭಾವನಾಚಟುವಟಿಕೆಗಳು ಕೂಡ ಯೌವನದಲ್ಲಿ ಅಮಿತವಾಗಿ ರುತ್ತವೆ. ಧ್ಯೇಯವಾದೀ ಮನಸ್ಸು ಅಂದಮೇಲೆ ಭಾವನಾತರಂಗಗಳಿಗೆ ಬರಗಾಲವೆ! "ತನ್ನ" ವ್ಯಕ್ತಿತ್ವವನ್ನು ಬೆಳಸಲು. ಕಾಮ ಕ್ರೋಧ ಇತ್ಯಾದಿ ಆರೂ ಮಿತ್ರರು ನೆರವಿಗೆ ನಿಂತು ಬೆನ್‌ಬಲಕೊಟ್ಟು ಸಹಾಯಕರಾಗುತ್ತಾರೆ. ತನ್ನತನ ಬೆಳಸಿಕೊಂಡ ಯುವಕನು, ಆತನಕ ಆಸರೆಯನ್ನಿತ್ತು ರಕ್ಷಿಸುತ್ತಿದ್ದ ತಂದೆ ತಾಯಿಯರ ಆವಶ್ಯಕತೆಯನ್ನು ಕಾಣುವುದಿಲ್ಲ. 'ನನ್ನ ಕಾಲ ಮೇಲೆ ನಾನು ನಿಂತು ಸಮಾಜದಲ್ಲಿ ತಲೆ ಎತ್ತುತ್ತೇನೆ. ನನ್ನ ಬಾಳ ಹೋರಾಟವನ್ನು ನಾನೇ ಯಶಸ್ವಿಯಾಗಿ ನಡಸುತ್ತೇನೆ' ಎಂದು ಆತ್ಮವಿಶ್ವಾಸವನ್ನು ಪಡೆಯುತ್ತಾನೆ. ಆತ್ಮವಿಶ್ವಾಸದ ಸೆರಗಿನಲ್ಲೇ ಆತ್ಮೋಲ್ಲಾಸದ ಸುಖವನ್ನು ಸವಿಯುತ್ತಾನೆ.

ಅದೇ ರೀತಿ ಅನುಕಂಪದ ಭಾವನೆಗಳಾದ ದಯೆ, ಕರುಣೆ. ಪ್ರೇಮ. ಇವುಗಳೂ ಯೌವನದಲ್ಲಿ ನಿರ್ಮಲವಾಗಿಯೂ ಸಹಜವಾಗಿಯೂ ಇರುತ್ತವೆ. ಅನುಸರಿಸಿ ಕಂಪಿಸುವುದು ಅನುಕಂಪ. ದಯೆ ಎಂದರೆ ಅಬಲರನ್ನು ಅನುಸರಿಸಿ ಕಂಪಿಸುವುದು, ಅವರ ಹೃದಯವನ್ನರಿಯುವುದು : ಕರುಣೆಯನ್ನು ಅಪರಾಧಿ ಗಳಿಗೆ ತೋರಿಸುವಾಗ, ಅಪರಾಧಿಗಳ ಹೃದಯ ಅಂದರೆ ಮನಸ್ಸನ್ನು ಅರಿತು. ಅದಕ್ಕೆ ಸರಿಯಾಗಿ ಕಂಪಿಸುವುದು; ಒಲವು ತೋರಿದವರ ಒಲವಿಗೆ ಸರಿಯಾಗಿ ಶ್ರುತಿಗೂಡಿಸುವುದು, ಕಂಪಿಸುವುದು : ಒಬ್ಬರು ಒಲವು ತೋರಿದಾಗ ಅದಕ್ಕೆ ಸರಿಯಾಗಿ ಅನುಕಂಪಿಸಿದರೆ, ಅದು ಕುಟುಂಬದ ಸ್ನೇಹ. ಪ್ರೇಮ ಪ್ರೀತಿಗಳಿಗೆ

ಹತ್ತು ಜನರು ಒಲವು ತೋರಿದರೆ, ಅಷ್ಟೂ ಜನರ ಅಂತರಂಗ ಅನುಕಂಪಿಸಿದರೆ ಅದು ಸಮಾಜಪ್ರೇಮ; ಹಾಗೂ ದೇಶಪ್ರೇಮ. ಮಾನವೀಯತೆಯ ಅಂತ ರಂಗಕ್ಕೆ ಅನುಕಂಪಿಸಿದಾಗ ವಿಶ್ವಪ್ರೇಮ. ದೈವೀಯತೆಯ ಅಂತರಂಗಕ್ಕೆ ಬಹಿರಂಗವಾಗಿ ಅನುಕಂಪಿಸಿದರೆ, ಆತ ವಿಶ್ವಕುಟುಂಬಿಯಾಗುತ್ತಾನೆ.

ಯೌವನದಲ್ಲಿ ಅನುಕಂಪವು ಸಹಜವಾಗಿರುತ್ತದೆ. ಏಕೆಂದರೆ ಲೋಕದ ಕಹಿ ಅನುಭವಗಳು ಸಾಕಷ್ಟು ಅವನ ಪಾಲಿಗೆ ಬಿದ್ದಿರುವುದಿಲ್ಲ. ಕಹಿಜೀವನದ ಕಠಿಣ ಹೋರಾಟವಾದ ಮೇಲೆ, ಅಹಂಕಾರವನ್ನು ಬೆಳಸಿಕೊಂಡು ತನ್ನ ವ್ಯಕ್ತಿತ್ವವನ್ನು ಪ್ರದರ್ಶನ ಮಾಡದಿದ್ದರೆ, ಸಮಾಜವು ತನ್ನನ್ನು ತುಳಿದುಹಾಕಿ ಬಿಡುತ್ತದೆ ಎಂಬ ಬಾಳರೀತಿಯನ್ನು ಕಲಿತಿರುತ್ತಾನೆ. ಆಗ ಅನುಕಂಪವು ತಲೆ ಯೆತ್ತದಂತೆ, ಮನಸ್ಸನ್ನು ಕಠಿಣ ಮಾಡಿಕೊಳ್ಳುತ್ತಾನೆ. ಆಗ ಮಿತ್ರ ಷಡ್ವರ್ಗ ಗಳೆಲ್ಲವೂ ದಿಟವಾಗಿ ಅರಿಷಡ್ವರ್ಗಗಳಾಗುತ್ತವೆ. ಅನುಕಂಪವೆಲ್ಲಾ 'ಗಾಣ-ಗಿತ್ತಿಯ ಅಯ್ಯೋ' ಎಂಬಂತಾಗುತ್ತದೆ.

ಮಿತ್ರಷಡ್ವರ್ಗಗಳು ಯುವಕನ ಕುತೂಹಲಕ್ಕೆ ಬೆಂಬಲವಿತ್ತಾಗ ವೈಜ್ಞಾ ನಿಕ ಸಂಶೋಧನೆಗಳಲ್ಲಿ, ಪ್ರಜ್ಞಾಪ್ರೇರಿತವಾದ ಚಟುವಟಿಕೆಗಳಿಂದ ಯಶಸ್ಸನ್ನು ಗಳಿಸುತ್ತಾನೆ. ಮಾನವನ ಜ್ಞಾನಭಂಡಾರಕ್ಕೆ ಕಾಣಿಕೆಯನ್ನರ್ಪಿಸುವಂತಾಗು ತ್ತಾನೆ. ಅನುಕಂಪದ ಭಾವನೆಗಳು ಮಿಗಿಲಾದಾಗ, ಈ ಚಟುವಟಿಕೆಗಳಿಂದ ಕಲಾರಂಗದಲ್ಲಿ ಉತ್ತಮ ಕೃತಿಗಳನ್ನು ರಚಿಸಿ, ಮಾನವನ ಜ್ಞಾನಭಂಡಾರಕ್ಕೆ ಹಿತವನ್ನು ಕೊಡುವ ಕಾಣಿಕೆಗಳನ್ನು ಅರ್ಪಿಸುತ್ತಾನೆ.

ಈ ವಯಸ್ಸಿನಲ್ಲಿ ಕಾಣಬರುವ ಮನೋದ್ವೈಹಿಕ ಬೇನೆಗಳಲ್ಲಿ ಹೆಚ್ಚು ಭಾಗ ವಂಶಾಭಿವೃದ್ಧಿಯ ಸಂಬಂಧವನ್ನು ಹೊಂದಿದವು. ಅನುಕಂಪದ ಸೆಳವು ಒಂದು ಕಡೆ; ಅಹಂಕಾರದ ಎಳೆತ ಮತ್ತೊಂದು ಕಡೆ. ಇವೆರಡರ ದ್ವಂದ್ವ ದಲ್ಲಿ ಅಹಂಕಾರದ ಎಳೆತವು, 'ಪರೀಕ್ಷೆಗಳ ಸ್ಪರ್ಧೆಯಲ್ಲಿ ಮೊದಲಿಗನಾಗಬೇಕು, ಕಂಡವರ ಕಣ್ಣಿಗೆ ಸುಂದರನಾಗಿರಬೇಕು, ಕಣ್ಸೆಳೆಯುವಂತಿರಬೇಕು, ದೇಹದ ಬಲುಮೆಯನ್ನು ಪ್ರದರ್ಶಿಸಬೇಕು, ಸಾಹಸೀ ಜೀವನ ನಡಸಬೇಕು' ಎಂಬ ವಿವಿಧ ಮುಖಗಳನ್ನು ತೋರಿಸುತ್ತದೆ. ಅನುಕಂಪವು 'ತಂದೆ ತಾಯಿಯರ

ಇಷ್ಟದಂತೆ ನಡೆದುಕೊಳ್ಳಬೇಕು, ನವಂಗಾಗಿ ದುಡಿದವರ ಮನಸ್ಸನ್ನು ನೋಯಿಸಲೇಬಾರದು' ಇತ್ಯಾದಿಯಾಗಿ ಸೆಳೆಯುತ್ತದೆ.

ಹೃದಯದ ಡಬಡಬ ಬಡಿದುಕೊಳ್ಳುವಿಕೆ; ಪರೀಕ್ಷಾಸಮಯದಲ್ಲಿ ತೋರುವ ತಲೆನೋವು, ವಾಂತಿ, ಜ್ವರ ಇತ್ಯಾದಿಗಳು; ಪುಂಸತ್ವಾಪರಾಧವಾಗಿದೆಯೋ ಎಂಬ ಆತಂಕದಿಂದಾಗುವ ಸಂಸ್ತು; ಇವೆಲ್ಲವೂ ಯೌವನದಲ್ಲಿ, ಬ್ರಹ್ಮಚರ್ಯದ ಕಾಲದಲ್ಲಿ ಕಂಡುಬರುವ ಮನೋದೈಹಿಕ ಬೇನೆಗಳ ವಿವಿಧ ರೂಪುಗಳು.

## ಈ) ಯೌವನಾವಸ್ಥೆಯಲ್ಲಿ ಗೃಹಸ್ಥಾಶ್ರಮ–೨ನೆಯ ಹಂತ

ಯುವಕನು ಮದುವೆ ಮಾಡಿಕೊಳ್ಳುವ ಹೊತ್ತಿಗೆ ಗೃಹಸ್ಥಜೀವನಕ್ಕೆ ಬೇಕಾದ ಎಲ್ಲ ದೈಹಿಕ ಬೆಳವಣಿಗೆಯನ್ನೂ ಹೊಂದಿರುತ್ತಾನೆ.

ಮಾನಸಿಕವಾಗಿ ಧ್ಯೇಯವೊಂದನ್ನು ಮುಂದಿಟ್ಟುಕೊಂಡು, ಸಂಸಾರವನ್ನು ಶುರು ಮಾಡುತ್ತಾನೆ. ಏನೆಲ್ಲಾ ಎಡರು ತೊಡರುಗಳು ಬಂದರೂ, ಎಲ್ಲವನ್ನೂ ಧೈರ್ಯದಿಂದ ಎದುರಿಸಿ ಜಯಿಸುತ್ತೇನೆ ಎಂಬ ವಿಶ್ವಾಸವೂ ದೇಹಶಕ್ತಿಯೂ ಇರುತ್ತದೆ. ಏರುಪೇರಾಯಿತು ಅನ್ನಿ. ಆಗ ಆತಂಕ ಬಂದಿತು ಅನ್ನಿ. ಬಾಳ ಜೊತೆಗಾತಿಯ ಹತ್ತಿರ ತನ್ನ ಗೋಳನ್ನು ಹೇಳಿಕೊಂಡು, ಆಕೆಯ ಅನುಕಂಪದ ಸಹಾನುಭೂತಿಯ ಮಾತುಗಳನ್ನು ಕೇಳಿ, ಸಮಾಧಾನ ಹೊಂದುತ್ತಾನೆ. ತನ್ನ ನಿತ್ಯಜೀವನದ ಹೋರಾಟವನ್ನು ಯಥಾಶಕ್ತಿ ನಡಸುತ್ತಾನೆ. ಕಾರಣಾಂತರದಿಂದ ಅನುಕಂಪದ ಮಾತುಗಳನ್ನು ಮನೆಯಲ್ಲಿ ಕೇಳಲಿಲ್ಲ ಅನ್ನಿ. ಆಗಲೂ 'ಕಲಿಸಿದರೆ ಕಲಿತುಕೊಳ್ಳುತ್ತಾರೆ, ಲೋಕಾನುಭವ ಸಾಲದು', ಎಂದು ತನಗೆ ತಾನೇ ಸಮಾಧಾನ ತಂದುಕೊಂಡು, ಮುಂದುವರಿಯುತ್ತಾನೆ. ದೇಹ ಮನಸ್ಸು ಎರಡೂ elastic ಆಗಿರುವುದರಿಂದ, ಸರಿಹೊಂದಿಸಿಕೊಂಡು ಹೋಗುವ ಮಾನಸಿಕ ಪ್ರವೃತ್ತಿಯು ಹೆಚ್ಚಾಗಿರುತ್ತದೆ. ಹಾಗೂ ದೇಹದ ಅವಶ್ಯಕತೆಗಳನ್ನು ಪೂರೈಸಿದರೆ, ಮಿಕ್ಕ ಮಾನಸಿಕ ಹಿತವನ್ನು ಮುಂದೆ ರೂಢಿಸಿಕೊಂಡು ಪಡೆಯಬಹುದು ಎಂಬ ಆಸೆಯೂ ಇರುತ್ತದೆ.

ಈ ವೇಳೆಗೆ, ಮನೆ ಕಟ್ಟುವ ಪ್ರಯತ್ನ, ಮಕ್ಕಳ ವಿದ್ಯಾಭ್ಯಾಸ, ಅವರ ಪುರೋಭಿವೃದ್ಧಿಗಾಗಿ ಯೋಜನೆಗಳು, ಆಸ್ತಿಪಾಸ್ತಿಗಳ ಆಲೋಚನೆ. ಇವೆಲ್ಲವೂ

ವರ್ಷೇ ವರ್ಷೇ ಹೆಚ್ಚುತ್ತವೆ. ಅವುಗಳ ಪೂರೈಕೆಗೆ, ತನ್ನ ಸ್ಥಿತಿಗನುಗುಣ ವಾಗಿ ಪ್ರಯತ್ನಗಳನ್ನು ಮಾಡುತ್ತಾನೆ.

ಶ್ರೀಮಂತ ಮನೆತನದ ಯುವಕನಾದರೆ, ತಾನು ಸಂಪಾದಿಸುತ್ತಿರುವುದು ತನ್ನ ಅಪ್ಪನ ಮನೆಯ ಅಂತಸ್ತಿಗೆ ಸರಿಯಾಗಿಲ್ಲವಲ್ಲ, ಎಂದು ಆತಂಕಪಡು ತ್ತಾನೆ. ಸೂಕ್ಷ್ಮಪ್ರವೃತ್ತಿಯುವನಾದರೆ, ಈ ಆತಂಕವಿರುವಾಗ ಯಾರಾದರೂ ಸರಿಸಮಾನರು ಆಡಿದ ವ್ಯವಹಾರದ ಮಾತುಗಳು ಕೂಡ ಅವಮಾನವಾಗಿ ಕಾಣುತ್ತದೆ. ಹೀಗೆ ಅವಮಾನ ತುಂಬಿದ ಯುವಕನಿಗೆ, ಸೇಡು ತೀರಿಸಿಕೊಳ್ಳುವ ಅವಕಾಶವಿಲ್ಲದಿದ್ದಾಗ, ಮನೋದೈಹಿಕ ಬೇನೆಗಳು ಪ್ರತ್ಯಕ್ಷವಾಗಿ, ಮನಸ್ಸಿಗೆ ಸಮಾಧಾನ ಕೊಟ್ಟು, ದೇಹವನ್ನು ದಂಡಿಸುತ್ತವೆ.

ಬಡವರ ಮನೆಯ ಯುವಕನಾದರೆ, ನಿತ್ಯಜೀವನದ ಪೂರೈಕೆಯಲ್ಲಿಯೇ ದುಡಿದು ದಣಿಯುತ್ತಾನೆ. ಮನಸ್ಸಿನ ಆಸೆ ಆಕಾಂಕ್ಷೆಗಳೇನೋ ಪ್ರಬಲವಾಗಿ ಬಂದರೂ ಅವು ಗಾಳಿಗೋಪುರಗಳು ಎಂಬುದೂ ಅವನಿಗೆ ತಿಳಿದಿರುತ್ತದೆ. ದುಡಿದ ದೇಹಕ್ಕೆ ಬಯಸಿದ ರುಚಿರುಚಿ ಊಟವಿರದಿದ್ದರೂ ಆಯಿತು, ಆಹಾರ ಸಿಕ್ಕರೆ ಸಾಕು ಎನ್ನಿಸುತ್ತದೆ. ಅಂದರೆ ಮಾನಸಿಕ ಚಪಲಗಳೂ ಹಗಲುಗನಸು ಗಳಾಗುತ್ತವೆ. ಅಂತಹವು ನನಸಾಗಲು ಹಬ್ಬ ಹರಿದಿನಗಳನ್ನೇ ಎದಿರು ನೋಡುತ್ತಾನೆ. ದೇಹಾನಂದವನ್ನು ಕೊಡುವ ಒಂದೇ ವಿಧಾನವು ಅವನಿಗೆ ಸುಲಭಪ್ರಾಪ್ತಿ. ಇಂತಹವನ ಜೀವನದಲ್ಲಿ, ಜೊತೆಗಾತಿಯ ಆಸೆ ಆಕಾಂಕ್ಷೆಗಳು ಪ್ರಬಲವಾಗಿದ್ದಲ್ಲಿ, ಆಕೆಯ ಕುಮ್ಮಕ್ಕು ಅತಿಯಾಗಿದ್ದಲ್ಲಿ, ಮನೋದೈಹಿಕ ಬೇನೆಗಳು ಅನಿವಾರ್ಯವಾಗುತ್ತವೆ. ಆ ಬೇನೆಗಳೇ ಆತನಿಗೆ ರಕ್ಷಣೆ ನೀಡುತ್ತವೆ.

'ಯುವಕ' ಎಂದು ಮೇಲೆ ಹೇಳಿದ ಕಡೆಯಲ್ಲೆಲ್ಲಾ 'ಯುವತಿ' ಎಂದು ಮಾರ್ಪಡಿಸಿ, 'ಜೊತೆಗಾತಿ' ಎಂದು ಹೇಳಿದುದನ್ನು 'ಜೊತೆಗಾರ' ಎಂದು ಮಾರ್ಪಡಿಸಿಕೊಂಡರೆ, ಎಂಕ್ಕ ಅರ್ಥದ ಬಾಳನ್ನು ಪೂರ್ಣವಾಗಿ ವಿವರಿಸಿದಂತಾ-ಗುತ್ತದೆ.

ಯೌವನಾವಸ್ಥೆಯಲ್ಲಿ, ಗೃಹಸ್ಥಾಶ್ರಮದಲ್ಲಿರುವಾಗ, ಜೊತೆಯು ಅವಶ್ಯಕ, ಅಗತ್ಯ. ಆದರೆ ಪರಸ್ಪರ ಅನುಕಂಪ, ತಿಳಿವಳಿಕೆ, ಇವುಗಳು ಇರ ದಿದ್ದರೂ 'ಇನ್ನೂ ಪ್ರಾಯ, ಮುಂದಕ್ಕೆ ಸರಿಹೋಗಬಹುದು' ಎಂಬ ಆಸೆಯೂ

ಇರುತ್ತದೆ. ಹಾಗಾಗಿ ಮನೋದೈಹಿಕ ಬೇನೆಗಳು ತಾಕುವುದನ್ನು ಈ ಆಸೆಯು ಹತೋಟಿಯಲ್ಲಿಡುತ್ತದೆ. ಆಸೆಯು ನಿರಾಶೆಯಾದರೆ, ಮನೋದೈಹಿಕ ಬೇನೆಗಳೇ ರಕ್ಷಾಕವಚಗಳಾಗಬೇಕು. ಭಾವವೈದುನನ ಮೇಲಿನ ಕೋಪವೇ ಬೆನ್ನುನೋವಾಗಿ ಹಿಡಿಯುತ್ತದೆ. ಆದರೂ, ಆಗಿರುವ ಮಕ್ಕಳ ಭವಿಷ್ಯ, ಮುಂಬರುವ ಮುಪ್ಪಿಗಾಗಿ ಸಿದ್ಧತೆ, ಇವೆರಡೂ ಬಾಳ ಬೆಳಕಾಗಿ ದೂರದಲ್ಲಿ ಕಂಡು, ಬಾಳ ಸಂತೆಯಲ್ಲಿ ನಡಸಿಕೊಂಡು ಹೋಗುತ್ತವೆ.

## ಉ) ವಾರ್ಧಕ್ಯಾವಸ್ಥೆಯು ಗೃಹಸ್ಥಾಶ್ರಮದಲ್ಲಿ

ಸುಮಾರು ನಲವತ್ತರ ಪ್ರಾಯದ ವೇಳೆಗೆ ಗೃಹಸ್ಥಾಶ್ರಮವು ಒಂದು ಹಂತಕ್ಕೆ ಬಂದಿರುತ್ತದೆ. ಮೂರು ನಾಲ್ಕು ಮಕ್ಕಳಾಗಿ ತನ್ನ ಸಂಸಾರ, ತನ್ನ ಮನೆ ಎನ್ನುವ ಪೂರ್ಣ ಜವಾಬ್ದಾರಿಯನ್ನು ಹೊರಬೇಕಾಗಿರುತ್ತದೆ. ಕೆಲಸ ಕಾರ್ಯಗಳಲ್ಲಿ ಆರ್ಥಿಕ ದೃಷ್ಟಿಯಿಂದ ಸುಮಾರಾಗಿ ಸ್ಥಿಮಿತಕ್ಕೆ ಬಂದಿರುತ್ತಾನೆ. ಲೋಕದ ಕಟು ಅನುಭವಗಳು ಸಾಕಷ್ಟು ಆಗಿರುತ್ತವೆ. ಮಿತ್ರರೆಂದು ನಂಬಿದವರಿಂದ ವಿಶ್ವಾಸಘಾತಕತೆ ; ತನ್ನ ನೆರವಿಗೆ ಬರುವವರು ಎಂದು ನಂಬಿದ್ದಾಗ, ಆ ತನ್ನವರೇ ತಮ್ಮತಮ್ಮ ಪಾಡು ನೋಡಿಕೊಂಡು ಜಾರಿಕೊಳ್ಳುವುದು ; ಕಷ್ಟಗಳು ದಂಡೆತ್ತಿ ಬಂದಾಗ, ಯಾರೋ ಅಪರಿಚಿತರು ಬಂದು ನೆರವಾಗುವುದು ; ಸಂಕಟಗಳು ಸಂಭವಿಸಿದಾಗ ಅನಿರೀಕ್ಷಿತವಾಗಿ ಯಾರೋ ಕಾಣಿಸಿಕೊಂಡು ಸಮಾಧಾನದ ಮಾತಗಳನ್ನಾಡಿ, ಅನುಕಂಪ ತೋರಿ. ಸಂಕಟದ ತೀವ್ರತೆಯನ್ನು ಕಡಮೆ ಮಾಡುವುದು ; ಇಂತಹ ಕಹಿ ಸಿಹಿ ಅನುಭವಗಳೆಲ್ಲಾ ಮನಸ್ಸಿನ ಮೇಲೆ ತೀವ್ರ ಪರಿಣಾಮವನ್ನುಂಟುಮಾಡುತ್ತವೆ. ಹಿಂದೆ ಮಾಡಿದ ತಪ್ಪುಗಳನ್ನು ಇನ್ನು ಮುಂದೆ ಮಾಡದೆ, ಮುಂಬಾಳನ್ನು ಹಸನಾಗಿಸುತ್ತೇನೆ ಎಂಬ ವಿಶ್ವಾಸವು ಉಂಟಾಗಿರುತ್ತದೆ. ದುಡಿಯುವ ಶಕ್ತಿಯೂ ಸಾಕಷ್ಟು ಇರುತ್ತದೆ. ಆದುದರಿಂದ ದುಡಿಮೆಯನ್ನು ಹೆಚ್ಚಾಗಿ ಮಾಡಿ, ಆದಷ್ಟು ಬೇಗ ಸಾಕಷ್ಟು ಆರ್ಥಿಕಭದ್ರತೆಯನ್ನು ಮಾಡಿಕೊಳ್ಳುವ ಹಂಬಲವು ಹೆಚ್ಚಾಗಿರುತ್ತದೆ. ಮಕ್ಕಳು ಮರಿಗಳ ವಿದ್ಯಾಭ್ಯಾಸಕ್ಕೂ ಮದುವೆ ಇತ್ಯಾದಿಗಳಿಗೂ ಮುಪ್ಪಿನಲ್ಲಿ ತನ್ನ ಜೀವನಕ್ಕೂ ಹಣವನ್ನು ಕೂಡಿಡುವ ತೀವ್ರ ಆಸೆಯುಂಟಾಗುತ್ತದೆ.

ಸಾಕಷ್ಟು ಲೋಕಜ್ಞಾನ, ಲೋಕದ ಅನುಭವ, ಇವೆಲ್ಲವೂ ಇರುವುದ

ಖಿಂದ ದೈಹಿಕಶಕ್ತಿಯೂ ತಕ್ಕಮಟ್ಟಿಗೆ ಇರುವುದರಿಂದ, ಮುಂದಿನ ಬಾಳಿನ ಸಮಸ್ಯೆಯನ್ನು ಪರಿಹರಿಸಲು ಶಕ್ತನಾಗಿರುತ್ತಾನೆ ಆ ಪ್ರಯತ್ನವನ್ನು ಮಾಡು ವಾಗಲೇ ಮನೋದೈಹಿಕ ಬೇನೆಗಳನ್ನೂ ಅನುಭವಿಸಬೇಕಾಗುತ್ತದೆ. ಮನ ಸ್ಸಿನ ಆಸೆಯು ಅತಿಯಾದರೆ ದೇಹವು ಕುಸಿದುಬೀಳಲೂಬಹುದು.

ದೇಹದಲ್ಲಿನ ಮಾರ್ಪಾಡುಗಳನ್ನು ಸುಲಭವಾಗಿ ಕಾಣಬಹುದು. ಚರ್ಮದ ಕೆಳಗಿರುವ ಕೊಬ್ಬಿನ ಪದರವು ದಪ್ಪವಾಗಲು ಶುರುವಾಗಿರುತ್ತದೆ. ಯೌವನದಲ್ಲಿ ಸಾಮಾನ್ಯವಾಗಿರುವ ತೆಳ್ಳನೆ ಹೊಟ್ಟೆಯು ಈ ವಯಸ್ಸಿನಲ್ಲಿ ಸ್ವಲ್ಪಮಟ್ಟಿಗೆ ಗುಡಾಣದಂತೆ ಆಗಲು ಆರಂಭವಾಗಿರುತ್ತದೆ. ಹಳೆಯ ಉಡಿಗೆ ಗಳೆಲ್ಲಾ ಬಿಗಿಯಾಗಹತ್ತುತ್ತವೆ. ಕೊಬ್ಬಿನ ಅತಿ ಶೇಖರಣೆಯೇ ಈ ವಯಸ್ಸಿನ ಮುಖ್ಯ ದೈಹಿಕ ಮಾರ್ಪಾಡು. ಇದಕ್ಕೆ ಕಾರಣವೂ ಸ್ಪಷ್ಟ. ಯೌವನದಲ್ಲಿ ದೈಹಿಕ ಚಟುವಟಿಕೆಗಳು ಹೆಚ್ಚು. ಆಹಾರದ ಆವಶ್ಯಕತೆಯೂ ಹೆಚ್ಚು. ಆದರೆ ಸುಮಾರು ಜನರಿಗೆ ಬಯಸಿದ ಆಹಾರವು ಬೇಕಾದಷ್ಟು ಸಿಗುವುದಿಲ್ಲ. ಏಕೆಂದರೆ ತುಂಬಿದ ಸಂಸಾರದಲ್ಲಿ ಅವರೂ ಒಂದು ವ್ಯಕ್ತಿ. ತಾನು ಸಂಪಾದಿಸಲು ಶುರು ವಾಗಿ ಮನೆಯ ಯಜಮಾನ, ದುಡಿದು ಸಂಪಾದಿಸುವವ, ಎಂದೆನ್ನಿಸಿಕೊಳ್ಳುವ ಹೊತ್ತಿಗೆ ಬಯಸಿದ್ದನ್ನು ಸಾಕಷ್ಟು ಪಡೆಯುವ ಸ್ಥಿತಿಗೆ ಬಂದಿರುತ್ತಾನೆ. ಆದರೆ ದೇಹಕ್ಕೆ ಅಷ್ಟು ಆಹಾರದ ಅವಶ್ಯಕತೆಯಿರುವುದಿಲ್ಲ. ಯೌವನದಿಂದ ಬೆಳೆದು ಬಂದ ಆಹಾರದ ಚಪಲ ಮಾತ್ರ ಅತಿಯಾಗಿರುತ್ತದೆ. ಚಪಲ ತೀರಿಸಿಕೊಳ್ಳಲು ಹೆಚ್ಚು ಆಹಾರವನ್ನು ಗಿಡಿದು ತಿನ್ನುತ್ತಾನೆ. ಜೀರ್ಣಿಸಿ ರಕ್ತಗತವಾದದ್ದರಲ್ಲಿ ಅಧಿಕಪ್ರಮಾಣವು ಕೊಬ್ಬಾಗಿ ಶೇಖರಿಸಲ್ಪಡುತ್ತದೆ.

ಇನ್ನೊಂದು ಕಾರಣದಿಂದಲೂ ಹೆಚ್ಚು ಆಹಾರವನ್ನು ಸೇವಿಸುತ್ತಾನೆ. ಮಾನಸಿಕ ಅತೃಪ್ತಿಯೇ ಈ ಕಾರಣ. ಮನೆಯಲ್ಲಿ ಅತೃಪ್ತಿಯಾಗಬಹುದು. ಮದುವೆಯಾಗಿ ಸಂಸಾರ ಹೂಡಿದಾಗ ಬಡವನಾಗಿಯೇ ಇರುತ್ತಾನೆ. ಅದಕ್ಕೆ ತಕ್ಕ ಹೆಂಡತಿಯೂ ಸಿಕ್ಕಿರುತ್ತಾಳೆ. ಎಲ್ಲವೂ ಯೌವನದ ಗಾರ್ಹಸ್ಥ್ಯದ ಚಟುವಟಿಕೆಯಲ್ಲಿ ಸುಖ ಮುಕ್ತಾಯವಾಗುತ್ತದೆ. ಆದರೆ ನಾಲ್ವತ್ತರ ಪ್ರಾಯ ಬರುವ ವೇಳೆಗೆ ಸಮಾಜದಲ್ಲಿ ಒಂದು ಸ್ಥಾನವನ್ನು ಹೊಂದಿರುತ್ತಾನೆ. ಸ್ನೇಹಿತ ರೆಲ್ಲರೂ ಶ್ರೀಮಂತ ಗುಂಪಿನವರು. ಅಂತಹವರು ಮನೆಗೆ ಬಂದಾಗ ಕುಶಲ ಸಂಭಾಷಣೆ ಮಾಡುವುದರಲ್ಲಾಗಲಿ, ಆತಿಥ್ಯ ನಡಸುವುದರಲ್ಲಾಗಲಿ, ಹೆಂಡತಿಯು

ಅಸಮರ್ಥಳಾಗುತ್ತಾಳೆ. ಎಷ್ಟು ಹೇಳಿಕೊಟ್ಟರೂ ಕಲಿಯುವ ಜಾಣತನ ಇಲ್ಲದಿದ್ದಾಗ. ಮನೆಯಾತನಿಗೆ ಅತೃಪ್ತಿಯು ಸ್ವತಃಸಿದ್ಧ. 'ಗಂಡಸು' ಎಂದ ಹೇಳಿದಾಗ, ಇದೇ ರೀತಿಯ ಅತೃಪ್ತಿಯು ಗಂಡನ ನಡವಳಿಕೆಯಿಂದ ಹೆಂಡತಿಗೂ ಬರಬಹುದು ಎಂದು ಬೇರೆ ಹೇಳಬೇಕಾಗಿಲ್ಲ. ಸಮಾನಧರ್ಮವಿಲ್ಲದ ಸಂಸಾರದಲ್ಲಿ, ತಕ್ಕಮಟ್ಟಿಗೆ ಸಂಪಾದನೆ ಇರುವ ಸಂಸಾರದಲ್ಲಿ, ಇದು ಅನಿವಾರ್ಯ. ಸಮಾನಧರ್ಮ ಇರುವ ಸಂಸಾರವು ಪ್ರಾಯಶಃ ಸ್ವರ್ಗದಲ್ಲೇ ಇರಬೇಕು. ಭೂಲೋಕದಲ್ಲಿ 'ಆದಷ್ಟು ಮಟ್ಟಿಗೆ' ಎಂಬ ನೀತಿಯೇ ಎಲ್ಲ ಚಟುವಟಿಕೆಗಳಿಗೂ ಅನ್ವಯಿಸುತ್ತದೆ. ಹಾಗಾಗಿ ಅತೃಪ್ತಿಯೂ 'ತಕ್ಕಮಟ್ಟಿಗೆ' ಇದ್ದೇ ಇರುತ್ತದೆ.

ಸಂಸಾರದಲ್ಲಿ ಏಗುವ ತರಹವೇ ದುಡಿಮೆ ಮಾಡುವ ಕಚೇರಿಯಲ್ಲಿ ಕೂಡ. ಅಲ್ಲೂ ಮೇಲಧಿಕಾರಿಗಳು, ಸಾಹುಕಾರರು, ಧಣಿಗಳು, ಇಂತಹವರೊಡನೆ ಏಗಬೇಕು. ಅತೃಪ್ತಿಯು ಸಹಜವಾಗಿ ಆಗಲೇಬೇಕು.

ಇಂತಹ ಅತೃಪ್ತಿಯನ್ನು ನಿವಾರಿಸಬೇಕಾದರೆ ಸಂಸಾರವನ್ನು ತ್ಯಜಿಸಬೇಕು; ಕೆಲಸಕ್ಕೆ ರಾಜಿನಾಮೆ ಕೊಡಬೇಕು. ಯೌವನದಲ್ಲಿ, ಸಂಸಾರವನ್ನು ಸರಿಮಾಡಬಹುದು ಎಂಬ ಆಸೆಯಿರುತ್ತದೆ, ಕೆಲಸಕ್ಕೆ ರಾಜಿನಾಮೆ ಕೊಡುವ ದುಡುಕು ಧೈರ್ಯವಿರುತ್ತದೆ. ಹಾಗಾಗಿ ಅತೃಪ್ತಿಯು ಅಷ್ಟಾಗಿರುವುದಿಲ್ಲ. ನಾಲ್ವತ್ತರ ವಯಸ್ಸಿನ ಹೊತ್ತಿಗೆ ಸಂಸಾರವನ್ನು ಸರಿಮಾಡುತ್ತೇನೆಂಬ ಆಸೆಯು ಕಡಮೆಯಾಗಿರುತ್ತದೆ. ಇದ್ದ ಕೆಲಸಕ್ಕೆ ರಾಜೀನಾಮೆ ಕೊಟ್ಟು ಬೇರೆ ಕೆಲಸವನ್ನು ಹುಡುಕುವ ಧೈರ್ಯವಿರುವುದಿಲ್ಲ. ಹಾಗಾಗಿ ಅತೃಪ್ತಿಯು ಸಾಮಾನ್ಯವಾಗಿ ಇದ್ದೇ ಇರುತ್ತದೆ. ಈ ಅತೃಪ್ತಿಯನ್ನು ನಿವಾರಿಸಲು ಹೆಚ್ಚು ಆಹಾರವನ್ನು, ಬಯಸಿದ ಆಹಾರವನ್ನು, ತಿನ್ನುವ ಚಟ ಶುರುವಾಗುತ್ತದೆ. ಮನೆಯ, ಹಾಗೂ ನೌಕರಿಯ ಮೇಲಿನ ಸೇಡನ್ನು ಊಟದ ಮೇಲೆ ತೀರಿಸಿಕೊಳ್ಳುತ್ತಾನೆ.

ಮಾನಸಿಕ ಅತೃಪ್ತಿಯನ್ನು ಶಮನ ಮಾಡಲು ದೈಹಿಕ ಆನಂದವನ್ನು ಪಡೆಯುವುದೂ ಪ್ರಕೃತಿಯ ಒಂದು ನೀತಿ, ಒಂದು ರೀತಿ. ಈ ನೀತಿಯೇ ಮನೋದೈಹಿಕ ಬೇನೆಗಳ ಮೂಲಕಾರಣ ಎಂಬುದು ಸ್ವತಃಸಿದ್ಧ.

ಯೌವನದಲ್ಲಿ ಬೆಳೆದುಬಂದ ಆಹಾರದ ಚಪಲ, ಮನಸ್ಸಿನಲ್ಲಿರುವ ನೀಗ

ಲಾಗದ ಅತೃಪ್ತಿ, ಇವೆರಡೂ ಕಾರಣಗಳಿಂದ ಹೆಚ್ಚು ಆಹಾರವನ್ನು ಸೇವಿಸಿ 'ಧಡಿಯ'ರಾಗುವ ವಯಸ್ಸು, ನಾಲ್ವತ್ತರ ಸುಮಾರಿನದು.

ಈ ಸ್ಥೂಲತ್ವದ ಕಾರಣದಿಂದಲೇ ದೈಹಿಕ ಚಟುವಟಿಕೆಗಳು ಕೂಡ ಮಂದಗತಿಯನ್ನು ಹಿಡಿಯುತ್ತವೆ. ಶ್ರಮವಹಿಸಿ ದುಡಿಯಲು ಕಷ್ಟವಾಗುತ್ತದೆ. ಕೆಲಸವನ್ನು ಮಾಡೋಣ ಎನ್ನುವ ಹುಮ್ಮಸ್ಸು ಹೋಗಿ, 'ಮಾಡಿಸೋಣ' ಎಂಬ ಆಸೆ ಬಲಿಯುತ್ತದೆ.

ಸಾಮಾನ್ಯವಾಗಿ ಹೀಗಿದ್ದರೂ, ಆಕಸ್ಮಿಕವಾಗಿ ಶ್ರಮ ವಹಿಸಲೇ ಬೇಕಾದರೆ ಮನಸ್ಸು ಗಟ್ಟಿಮಾಡಿ ದುಡಿಯಲು ಸಾಧ್ಯವಾಗುತ್ತದೆ. ದೇಹದಲ್ಲಿ ಹುದುಗಿರುವ ಶಕ್ತಿಯನ್ನು ಮಾನಸಿಕ ಉದ್ರೇಕದಿಂದ ಚುರುಕುಗೊಳಿಸಲು ಸಾಧ್ಯ. ಈ ರೀತಿ ಹಠತೊಟ್ಟು ಶ್ರಮವಹಿಸಿ ದುಡಿಯುವುದನ್ನು ಅನೇಕ ಸಾರಿ ಮಾಡಿದರೆ, ದೇಹದ ಅನಾರೋಗ್ಯಕ್ಕೆ ದಾರಿ ಮಾಡಿಕೊಟ್ಟಂತಾಗುತ್ತದೆ. ರಕ್ತದ ಒತ್ತಡ, ಮಧುಮೂತ್ರ, ಜೀರ್ಣಮಾಂದ್ಯ ಇತ್ಯಾದಿ ಬೇನೆಗಳಿಗೆ ನಾಂದಿ ಹಾಡಿದಂತಾಗುತ್ತದೆ.

ಪಂಚೇಂದ್ರಿಯಗಳು ಸುಸೂತ್ರವಾಗಿ ಕೆಲಸಮಾಡುತ್ತಿದ್ದರೂ ಕೆಲವೇ ವರ್ಷಗಳಲ್ಲಿ 'ಚಾಳೀಸು' ಬರಬಹುದು, ಎದುರಿಗೆ ಮಾತನಾಡುತ್ತಿರುವವರು 'ಸ್ವಲ್ಪ ಗಟ್ಟಿಯಾಗಿ ಮಾತನಾಡಬಾರದೇ ?' ಅನ್ನುವುದಕ್ಕೆ ಪ್ರಾರಂಭವಾಗಿರುತ್ತದೆ. ಮೆದುಳಿನ ಹಾಗೂ ಸ್ಪೈನಲ್‌ಕಾರ್ಡಿನ ನರಸಮೂಹಗಳ ಪ್ರತಿಕ್ರಿಯೆಗಳೂ ಸ್ವಲ್ಪಮಟ್ಟಿಗೆ ಮಂದಗತಿಯನ್ನು ಹೊಂದುತ್ತವೆ. ಹಾಗಾಗಿ. ವ್ಯಾಯಾಮದ ಸ್ಪರ್ಧೆಗಳಲ್ಲಿ ಅತ್ಯವಶ್ಯಕವಾದ ಅಂಗಾಂಗಗಳ ಚುರುಕುಕೆಲಸಗಳು ಸಾಧ್ಯವಾಗುವುದಿಲ್ಲ. ಆದ್ದರಿಂದ ಈ ವಯಸ್ಸಿನಲ್ಲಿ ಆಟಪಾಟಗಳ ಸ್ಪರ್ಧೆಯಲ್ಲಿ ಜಯಗಳಿಸುವುದಕ್ಕಾಗುವುದಿಲ್ಲ.

ಮಾನಸಿಕ ಚಟುವಟಿಕೆಗಳೂ ಈ ವಯಸ್ಸಿನಲ್ಲಿ ಮಾರ್ಪಾಡುಹೊಂದುತ್ತವೆ. ಹಗಲುಗನಸು ಕಾಣುವ ಚಟುವಟಿಕೆಯು ಊಹಾಪೋಹಗಳಿಂದ ಹೆಚ್ಚಾಗಿ ಕೂಡಿರುವುದಿಲ್ಲ, ಏಕೆಂದರೆ ಲೋಕದ ಅನುಭವವು ಸಾಕಷ್ಟು ಬಂದಿರುತ್ತದೆ. ಹಾಗೂ ಹಗಲುಗನಸುಗಳಿಗೆ ಆವಶ್ಯಕವಾದ 'ತನ್ನ ಘನತೆಯೇ ಹೆಚ್ಚು, ತಾನು ಮಾಡಿದ್ದೇ ಸರಿ' ಎಂಬೀ ನಂಬಿಕೆಗಳು, ಬಾಲ್ಯಾವಸ್ಥೆಯಲ್ಲಿದ್ದಷ್ಟು, ಧ್ಯೇಯವಾದೀ ಯೌವನದಲ್ಲಿದ್ದಷ್ಟು ಈ ವಯಸ್ಸಿನಲ್ಲಿ ಇರುವುದಿಲ್ಲ.

ಆದುದರಿಂದ ಹಗಲುಗನಸುಗಳು ಕೂಡ, ಅವನ ನಿತ್ಯಬಾಳಿನ ಸುತ್ತುಸುತ್ತಲೇ ಇರುತ್ತವೆ. 'ಆ ಹುಡುಗಿಯನ್ನು ಮದುವೆಮಾಡಿಕೊಂಡಿದ್ದರೆ ಹೀಗೆ ಹೀಗೆ ಬಾಳಬಹುದಾಗಿತ್ತು'—'ಬೇರೆ ಕಸುಬನ್ನು ಹಿಡಿದಿದ್ದರೆ ಧರ್ಮರತ್ನಾಕರರಂತೆ ಇರಬಹುದಾಗಿತ್ತು'—'ಆ ನಂಬರ ಲಾಟರಿ ಟಿಕೆಟ್ ಕೊಂಡಿದ್ದರೆ'—'ತಪ್ಪುಮಾಡಿದೆ, ನನ್ನ ರೂಪಿಗೆ ತಕ್ಕ ಹಾಗೆ ಸಿನಿಮಾಕ್ಕೆ ಸೇರಬೇಕಾಗಿತ್ತು'—ಹೀಗೆಲ್ಲಾ ಹಗಲುಗನಸು ಕಾಣುತ್ತಾನೆಯೇ ಹೊರತು, ಲೋಕೋದ್ಧಾರನಾಗುತ್ತೇನೆ, ಗೌರೀಶಂಕರವನ್ನು ಮೆಟ್ಟುತ್ತೇನೆ, ಎಂದು ಹಗಲುಗನಸು ಕಾಣುವುದಿಲ್ಲ. ಬಾಲ್ಯಕಾಲದ ಅವಾಸ್ತವಿಕವಾದ ಹಗಲುಗನಸು ಬೀಳುವುದಿಲ್ಲ.

ತೀರ್ಮಾನಿಸುವ ಮಾನಸಿಕ ಚಟುವಟಿಕೆಯು ಯೌವನದಲ್ಲಿಗಿಂತ ಈಗ ಸುಲಭವಾಗಿರಬೇಕಲ್ಲವೆ ? ಏಕೆಂದರೆ, ಸಾಕಾದಷ್ಟು ಲೋಕದ ಪರಿಜ್ಞಾನವು ಸ್ವಂತ ಅನುಭವಗಳಿಂದ ಉಂಟಾಗಿರುತ್ತದೆ. ಆದರೂ ಬಾಲ್ಯದಲ್ಲಿ ಮತ್ತು ಯೌವನದಲ್ಲಿ ಮನಸ್ಸಿನ ಮೇಲೆ ತೀವ್ರಪರಿಣಾಮವನ್ನುಂಟುಮಾಡಿದ ವಿಷಯಗಳು ಕೊಂಡಿಹಾಕಿಕೊಂಡು ಬಂದು. ವಿಚಾರಮಾಡಿ ತೀರ್ಮಾನಿಸುವಾಗ ತಮ್ಮ ಬಣ್ಣವನ್ನು ಕೊಡುತ್ತವೆ. ಹಾಗಾಗಿ ಎಷ್ಟೋ ವೇಳೆ ತೀರ್ಮಾನಿಸುವ ಕಾರ್ಯವು ದೋಷಪೂರ್ಣವಾಗಬಹುದು.

ಕರ್ಣನ ಬಾಳು ಇದಕ್ಕೆ ಉತ್ತಮ ನಿದರ್ಶನ. ಕರ್ಣನು ಗುರುವಿನಿಂದ ಭಾರ್ಗವಾಸ್ತ್ರ ಹಾಗೂ ಇತರ ಅಸ್ತ್ರಗಳನ್ನು ಪಡೆದ. ಆದರೆ ಅವುಗಳನ್ನು ಆವಾಹಿಸಿ ಪ್ರಯೋಗಿಸುವ ವಿದ್ಯೆಯನ್ನು ಕಲಿತಿದ್ದ. (ಅಣುಬಾಂಬಿನ ಮರ್ಮವನ್ನು ಈ ಕಾಲದಲ್ಲಿ ಕಲಿತಹಾಗೆ) ಆದರೆ ಕರ್ಣನು ಕ್ಷತ್ರಿಯನಿರಬೇಕು ಎಂದು ಪರಶುರಾಮನಿಗೆ ಅನಿಸಿದಾಗ ಆತ 'ಅವಶ್ಯಬಿದ್ದಾಗ ಈ ಅಸ್ತ್ರಗಳು ನಿನಗೆ ಫಲಿಸದೆ ಹೋಗಲಿ' ಎಂದು ಶಾಪವನ್ನು ಕೊಟ್ಟ. ಭಾರ್ಗವನು ಕಲಿಸಿದ ವಿದ್ಯೆಯು ಎಷ್ಟರ ಮಟ್ಟಿಗೆ ಕರ್ಣನ ಮಿದುಳಿನ ಸೆರೆಬ್ರಂನಲ್ಲಿ ದೃಢವಾಗಿ ಬೇರೂರಿತೋ ಶಾಪವೂ ಅಷ್ಟೇ ದೃಢವಾಗಿ ಅದರ ಪಕ್ಕದಲ್ಲೇ ಬೇರೂರಿತು. ಅವಶ್ಯಕತೆ ಒದಗಿ ಕರ್ಣನು ಅಸ್ತ್ರಗಳ ನೆನಪನ್ನು ಮಾಡಿಕೊಳ್ಳಲೆತ್ನಿಸಿದಾಗ, ಶಾಪದ ನೆನಪು ಅವನನ್ನು ನಿರುಪಾಯನನ್ನಾಗಿ ಮಾಡುತ್ತಿತ್ತು. ಅವಶ್ಯಕತೆ ಇಲ್ಲದೆ ಇದ್ದಾಗ ನೆನಸಿಕೊಂಡರೆ ಅಸ್ತ್ರಗಳ ಮರ್ಮವೆಲ್ಲವೂ ಅವನ ಮನಸ್ಸಿಗೆ ಸುಲಭವಾಗಿ ಗೋಚರವಾಗುತ್ತಿತ್ತು.

ನಮ್ಮಲ್ಲಿ ಮಾಟಮಾಡುವುದು, ಶೂನ್ಯಮಾಡಿಸುವುದು, ಇವೆಲ್ಲವೂ ಎಷ್ಟೋ ಬಾರಿ ಯಶಸ್ವಿಯಾದುದನ್ನು ಕಂಡಿದ್ದೇವೆ. ಅವಕ್ಕೆಲ್ಲ, ಶೂನ್ಯಮಾಡಿದರೆ ಕಾಯಿಲೆಬೀಳುತ್ತೇವೆ. ರಕ್ತ ಕಾರಿಕೊಳ್ಳುತ್ತೇವೆ, ಸಾಯುತ್ತೇವೆ, ತಿನ್ನುವ ಅನ್ನದಲ್ಲಿ ಹುಳುಬೀಳುತ್ತದೆ. ಎಂಬ ದೃಢ ನಂಬಿಕೆಯೇ ಮುಖ್ಯ ಕಾರಣ.

ತೀರ್ಮಾನ ಮಾಡುವ ಚಟುವಟಿಕೆಯು ನಾಲ್ವತ್ತರ ಸುಮಾರಿನ ಪ್ರಾಯದಲ್ಲಿ ಸುಲಭವಾಗಬೇಕಾದರೂ, ಬಾಲ್ಯ ಯೌವನಗಳ ಮರೆಯಲಾಗದ ನೆನಪುಗಳಿಂದ ಕಠಿಣವಾಗಬಹುದು. ಆದರೆ ಹಾಗಾಗುವುದು ಗುರುತರವಾದ ತೀರ್ಮಾನವನ್ನು ಮಾಡಬೇಕಾದಾಗ ಮಾತ್ರ. ಸಣ್ಣ ಪುಟ್ಟ ನಿತ್ಯಜೀವನದ ದೈನಂದಿನ ತೀರ್ಮಾನಗಳಿಗೆ ಇದು ಅನ್ವಯಿಸುವುದಿಲ್ಲ.

ತಾರ್ಕಿಕವಾಗಿ ವಿಚಾರಮಾಡಿ ತನ್ನನ್ನು ತಾನೇ ಸಮಾಧಾನಮಾಡಿಕೊಳ್ಳುವ ಚಟುವಟಿಕೆ ಹೊರವಾಗಿ ನಡೆಯುತ್ತದೆ. ತಾನು ಇಚ್ಛೆಪಟ್ಟಷ್ಟು, ತನಗೆ ಸಾಧ್ಯವಾಗಬಹುದಾದಷ್ಟು ಬಾಳಿನಲ್ಲಿ ಮುನ್ನಡೆಯಲಿಲ್ಲ ಎಂಬ ಕೊರಗು ವ್ಯಕ್ತವಾಗಿಯೋ ಸುಪ್ತವಾಗಿಯೋ ಕಾಡುತ್ತಲೇ ಇರುತ್ತವೆ. ಇದನ್ನು ಮರೆಮಾಚಲು ವಿಚಾರಮಾಡಿ, ಇತರರ ಮೇಲೆ ತಪ್ಪು ಹೊರಿಸಿ, ವಿಧಿಯನ್ನು ಶಪಿಸುತ್ತಾ ಸಮಾಧಾನಮಾಡಿಕೊಳ್ಳುವ ಆವಶ್ಯಕತೆಯು ಹೆಚ್ಚಾಗಿರುತ್ತದೆ.

ಪ್ರಜ್ಞಾಪ್ರೇರಿತವಾದ ಚಟುವಟಿಕೆಯು ಬಲವಾಗಿಯೇ ಇರುತ್ತದೆ. ಯೌವನದಲ್ಲಿದ್ದಷ್ಟು ಶ್ರಮಧಾರಣಾಶಕ್ತಿಯಿಲ್ಲದಿದ್ದರೂ, ಕುತೂಹಲ ಹೆಚ್ಚಾದಾಗ ಸಾಕಷ್ಟು ಶ್ರಮಪಡಲು ಸಾಧ್ಯವಾಗಿರುವುದರಿಂದ, ಪ್ರಜ್ಞಾಪ್ರೇರಿತ ಚಟುವಟಿಕೆಯು ಅಮೋಘವಾದ ಫಲಿತಾಂಶಗಳನ್ನು ಈ ವಯಸ್ಸಿನಲ್ಲಿ ದೊರಕಿಸಬಹುದು. ಪರಿಣಾಮಕಾರೀ ವೈಜ್ಞಾನಿಕ ಸಿದ್ಧಾಂತಗಳು ಈ ವಯಸ್ಸಿನವರಿಂದಲೇ ಹೆಚ್ಚಾಗಿ ಕಂಡುಹಿಡಿಯಲ್ಪಟ್ಟಿವೆ.

ಮಾನಸಿಕ ಭಾವನೆಗಳ ಚಟುವಟಿಕೆಯಲ್ಲೂ ತುಂಬಾ ವ್ಯತ್ಯಾಸವನ್ನು ಕಾಣಬಹುದು.

ಜೀವನವು ಒಂದು ರೀತಿಯಾದ ಹೋರಾಟ. ಬಾಳಸಂತೆಯಲ್ಲಿ 'ಅಯ್ಯೋ' ಎಂದರೆ ಬಿದ್ದೇಬೀಳಬೇಕಾಗುತ್ತದೆ. ತಲೆ ಎತ್ತಲು ಆಗುವುದಿಲ್ಲ. ಕಾಡುಮೃಗಗಳು ದೈಹಿಕವಾಗಿ ಹೋರಾಡುವಂತೆಯೇ ನಾಗರಿಕ ಮಾನವನು ಕೂಡ ಮಾನಸಿಕವಾಗಿ ಹೋರಾಡುತ್ತಾನೆ. ಆಡಲೇಬೇಕು. ಅದಕ್ಕೆ ಮೋಸ,

ತಟವಟ, ವಿಶ್ವಾಸಘಾತಕತನ, ಕಾನೂನಿನ ಕವಚ, ಇವೆಲ್ಲವೂ ಅವಶ್ಯಕ ಆಯುಧಗಳು ಎಂದು ತನ್ನ ಸ್ವಂತ ಅನುಭವದಿಂದ ಕಲಿತಿರುತ್ತಾನೆ.

ಹಾಗಾಗಿ ಅನುಕಂಪ, ದಯೆ, ಕರುಣೆ, ಪ್ರೇಮ, ಇವೆಲ್ಲವನ್ನೂ ತನ್ನ ಅಹಂಕಾರದಿಂದ ಮರೆಸಿಡುತ್ತಾನೆ. ಮಿತ್ರಷಡ್ವರ್ಗಗಳಾಗಿದ್ದ ಆರೂ ಗುಣಗಳು ಅವನ ಅಹಂಕಾರಕ್ಕೆ ಬೆನ್‌ಬಲವಾಗುತ್ತದೆ. ಆಗ ಅವು ಅರಿಷಡ್ವರ್ಗಗಳಾಗಿ ಅವಶ್ಯಕ ಆಯುಧಗಳನ್ನು ಒದಗಿಸಿ ಸಮಾಜದಲ್ಲಿ ಹಾನಿಯನ್ನುಂಟುಮಾಡುತ್ತವೆ. ಹಾಗೆ ಮಾಡಿಯೇ ಇಂದಿನ ಸಮಾಜದಲ್ಲಿ ಬಾಳಬೇಕು ಎಂದು ನಾಗರಿಕ ಮಾನವನು ತಿಳಿಯುತ್ತಾನೆ.

ಆದುದರಿಂದ ಸಾಮಾನ್ಯವಾಗಿ ಈ ವಯಸ್ಸಿನಲ್ಲಿ ಅನುಕಂಪದ ಭಾವನೆಗಳು ಹೆಚ್ಚಾಗಿ ಕಾಣಬರುವುದಿಲ್ಲ. ಹಾಗೆಂದರೆ ಈ ವಯಸ್ಸಿನವರು ದಾನ ಧರ್ಮ ಮಾಡುವುದಿಲ್ಲವೇ ಎಂದು ಕೇಳಬಹುದು. ತಾವು ಸಮಾಜಕ್ಕೆ ಮಾಡಿದ ಮೋಸವನ್ನು ಮರೆಯಲೋಸುಗವೇ ಎಷ್ಟೋ ದಾನಧರ್ಮಗಳು ಮಾಡಲ್ಪಡುತ್ತವೆಯೇ ಹೊರತು ಬಡವರ ಗೋಳಿನ ಜೊತೆಗೂ ಅನುಸರಿಸಿ ಕಂಪಿಸಿ ಮಾಡಲ್ಪಡುವುದಿಲ್ಲ. ಈ ವಯಸ್ಸಿನಲ್ಲಿ ಅನುಕಂಪವು ಇಲ್ಲವೇ ಇಲ್ಲ. ಎಂದಲ್ಲ. ಆದರೆ ಸಾಮಾನ್ಯವಾಗಿ ಸಮಾಜದಲ್ಲಿ ನಡೆಯುವುದರ ಕಾರಣವನ್ನು ತಿಳಿಸಲೆತ್ನಿಸಿದ್ದೇನೆ.

ಮನೋದೈಹಿಕ ಬೇನೆಗಳು ಈ ವಯಸ್ಸಿನಲ್ಲಿ ಅತಿಯಾಗಿ ಕಾಣಿಸಿಕೊಳ್ಳುತ್ತವೆ. ಅಹಂಕಾರವು ಹೆಚ್ಚಾಗಿ ಅರಿಷಡ್ವರ್ಗಗಳು ತಾಂಡವವಾಡುತ್ತಿರುವ ಮನಸ್ಸು ಮಿತಿಯಿಲ್ಲದ ಆಸೆಯನ್ನು ಹೊಂದಿರುತ್ತದೆ. ಆ ಕಾರಣದಿಂದ ಸಮಾಜದಲ್ಲಿ ತೀವ್ರ ಹೋರಾಟವನ್ನು ಮಾನಸಿಕವಾಗಿ ಯೋಚಿಸಿ, ಕಾರ್ಯಕ್ರಮಕ್ಕೆ ತರುತ್ತದೆ. ಹಾಗಾಗಿ ಮನೆಯಲ್ಲಾಗಲಿ, ಕೆಲಸದಲ್ಲಾಗಲಿ, ಏನಾದರೂ ಎಡರುತೊಡರುಗಳು ಕಾಣಿಸಿದರೆ—

೧) **ಅವನ ಹೊಟ್ಟೆ ಉರಿದುಹೋಗುತ್ತದೆ.** ಅಜೀರ್ಣವು ಕಾಣಿಸಿಕೊಳ್ಳುತ್ತದೆ. ಮನಸ್ಸಿನ ವಿಷವೆಲ್ಲಾ ನಾಲಿಗೆಗೆ ಇಳಿದು, ರುಚಿ ಕೆಟ್ಟುಹೋಗುತ್ತದೆ. ತಿಂದದ್ದೆಲ್ಲಾ ಹೊಟ್ಟೆಯಲ್ಲಿ ಗಾಳಿಯಾಗುತ್ತದೆ. ಎದೆಯನ್ನು ಒತ್ತುತ್ತದೆ. ಹೃದಯವನ್ನು ಡಬಡಬ ನುಡಿಸುತ್ತದೆ.. ಹಾಗಾಗಿ ಹೊಟ್ಟೆಯ ಬೇನೆಗಳು ಉದ್ಭವಿಸುತ್ತವೆ.

೨) **ಅವನ ಕರುಳು ಕುಯ್ದಂತಾಗುತ್ತದೆ.** ಆಗ ಭೇದಿಯಾಗುವುದು, ಹೊಟ್ಟೆಶೂಲೆ ಬರುವುದು, ಇಲ್ಲವೇ ಮಲಬದ್ಧತೆಯಾಗುವುದು, ಎಲ್ಲವೂ ಶುರುವಾಗುತ್ತದೆ. ಅಪೆಂಡಿಸೈಟಿಸ್ ಬಂತು, ಗಾಲ್‌ಬ್ಲಾಡರ್ ಬೇನೆ ಬಂತು ಎಂದು ಶಸ್ತ್ರಚಿಕಿತ್ಸೆಯನ್ನು ಮಾಡಿಸಿಕೊಳ್ಳುವುದೂ ಉಂಟು. ಯಶಸ್ವಿಯಾಗಿ ಶಸ್ತ್ರಚಿಕಿತ್ಸೆಯಾದಮೇಲೆ, ಸ್ವಲ್ಪಕಾಲಾನಂತರ ಶೂಲೆಯು ಕಾಣಿಸಿಯೇ ಕಾಣಿಸಿ ಕೊಳ್ಳುತ್ತದೆ.

೩) **ಅವನ ತಲೆಯು ಸಿಡಿಯುತ್ತದೆ.** ವಿಧವಿಧದ ತಲೆನೋವು ಕಾಣಿಸಿಕೊಳ್ಳುತ್ತದೆ. ವರ್ಷಾನುಗಟ್ಟಲೆ ಚಿತ್ರವಿಚಿತ್ರ ಚಿಕಿತ್ಸೆ ಪಡೆಯುತ್ತಾನೆ. ತಾತ್ಕಾಲಿಕವಾಗಿ ಗುಣ ಕಂಡರೂ ತಲೆನೋವು ಮರುಕೊಳಿಸುತ್ತದೆ

೪) **ಜಂಘಾಬಲವೇ ಉಡುಗಿಹೋಗುತ್ತದೆ.** ಓಡಾಡಲು ಅನನು ಕೂಲವಾಗುವಂತೆ ಕೀಲುಗಳು ಸೆಡೆದುಕೊಳ್ಳುತ್ತವೆ. ಯಥಾಪ್ರಕಾರದ ತಾತ್ಕಾಲಿಕ ಗುಣ, ಬೇನೆಯು ಮರುಕೊಳಿಸುವುದೂ ಯಥಾಪ್ರಕಾರ.

೫) **ಅವನಿಗೆ ಉಸಿರೇ ಸಿಕ್ಕಿಹಾಕಿಕೊಂಡಂತಾಗುತ್ತದೆ.** ಉಬ್ಬಸ ಕಾಣಿಸಿಕೊಳ್ಳುತ್ತದೆ. ಯಥಾಪ್ರಕಾರದ ಚಿಕಿತ್ಸೆ, ಗುಣ, ಮರುಕೊಳಿಸುವುದು ಇತ್ಯಾದಿಯಾಗಿ ಮನೋದೈಹಿಕ ಬೇನೆಗಳ ವಿರಾಟ್‌ಸ್ವರೂಪವನ್ನು ಕಾಣ ಬಹುದು. ಅಹಂಕಾರವನ್ನು ಮೆಟ್ಟಿ, ಅನು-ಕಂಪದ ಒಲವನ್ನು ಹರಡುವ ತನಕ ಈ ಮನೋಬೇನೆಗಳು ಪೂರ್ಣವಾಗಿ ಗುಣವಾಗುವುದಿಲ್ಲ. ಸ್ವಯಂಪ್ರೇರ ಣೆಯಿಂದ, ಪೂರ್ಣಪ್ರಜ್ಞೆಯಿಂದ ಹುದುಗಿರುವ ಅನುಕಂಪವನ್ನು ಹೊರತೆರೆದು ಒಲವನ್ನು ಹರಿಸದೆ ಇದ್ದರೆ, ಪ್ರಕೃತಿಯೇ ಕಾಲಕ್ರಮದಲ್ಲಿ ಮುಪ್ಪನ್ನು ಕೊಟ್ಟು, ಹುದುಗಿದ್ದ ಒಲವನ್ನು ಬಯಲಿಗೆಳೆಯುತ್ತವೆ.

## ಊ) ವಾರ್ಧಿಕ್ಯಾವಸ್ಥೆಯಲ್ಲಿ ವಾನಪ್ರಸ್ಥಾಶ್ರಮ

ಸುಮಾರು ಐವತ್ತು ಐವತ್ತೈದು ವಯಸ್ಸಿಗೆ ನಮ್ಮ ದೇಶದಲ್ಲಿ ವಾನ ಪ್ರಸ್ಥಾವಸ್ಥೆಯು ಸುರುವಾಗುತ್ತದೆ. ಮೊದಲ ಮೊಮ್ಮಗುವಾದಾಗ ಮಗನ ಕೈಲಿ ಸಂಸಾರದ ವ್ಯವಹಾರಗಳನ್ನೆಲ್ಲ ಇಟ್ಟು, ತಾನು ಯಾವ ಕಾಡಿನಿಂದ ಮೊದಲು ಬಂದನೋ ಆ ಕಾಡಿಗೇ ಹಿಂತಿರುಗಿ ಮಿಕ್ಕ ದಿನಗಳನ್ನು ಮನನ

ಮಾಡುತ್ತ ಕಳೆಯಲಿ ಎಂದು ನಮ್ಮ ಹಿರಿಯರು ಸಲಹೆಮಾಡಿದ್ದಾರೆ. ಇದು ಅತ್ಯವಶ್ಯಕವಾದ ಸಲಹೆ. ಏಕೆಂದರೆ, ಬಾಳಿನಲ್ಲಿ ರೂಢಿಸಿಕೊಂಡ ಅಭಿಪ್ರಾಯ ಗಳು ಆ ವಯಸ್ಸಿನಲ್ಲಿ ಸ್ಥಿರವಾಗಿಬಿಟ್ಟಿರುತ್ತವೆ. ಹೊಸ ವಾತಾವರಣಕ್ಕೆ ಸರಿ ಹೊಂದಿಕೊಂಡು ಬಾಳುವುದು ಕಷ್ಟವಾಗುತ್ತದೆ. ಅಸಾಧ್ಯವೆಂದರೂ ಅನ್ನ ಬಹುದು. ಹಾಗಾಗಿ ಯುವಕ ಮಕ್ಕಳೊಡನೆ ಒಂದೇ ಮನೆಯಲ್ಲಿರುವಾಗ, ತಿಕ್ಕಾಟವು ಅನಿವಾರ್ಯ. ಬಹಿರಂಗವಾಗಿ ಮಕ್ಕಳು ಎದುರುಆಡದಿದ್ದರೂ, ಮನಸ್ಸಿ ನೊಳಗೆ ಅದು ಇದ್ದೇ ಇರುತ್ತದೆ. ತಂದೆಗೂ ಇದರ ಅನುಮಾನವು ಬರಲೇ ಬೇಕು. ಬೆಳೆದ ಮಕ್ಕಳನ್ನು ಹೆಚ್ಚು ಅಂಕೆಗೆ ಒಳಪಡಿಸದೆ ಇದ್ದರೂ. ಮನಸ್ಸಿ ನಲ್ಲಿ 'ಈ ಹುಡುಗರು ಹೀಗಾದರಲ್ಲ!' ಎಂಬ ಕೊರಗು ಬಂದೇಬರುತ್ತದೆ. ಆದುದರಿಂದಲೇ ವಾನಪ್ರಸ್ಥವು ಈಗಲೂ ಅತ್ಯವಶ್ಯಕ. ಆದರೆ ಮಾನಸಿಕವಾಗಿ ಈ ಪ್ರವೃತ್ತಿಯನ್ನು ಬೆಳಸಿಕೊಂಡರೆ, ಅವರಿಗೂ ಕ್ಷೇಮ, ಅವರ ಮಕ್ಕಳಿಗೂ ಕ್ಷೇಮ. ಸಂಸಾರದಲ್ಲಿ ಶಾಂತಿ ಹಾಗೂ ಹಿತವಾತಾವರಣವಿರಬೇಕಾದರೆ ವಾನ ಪ್ರಸ್ಥಾವಸ್ಥೆ ಹಿರಿಯರಿಗೆ ಆವಶ್ಯಕ.

ಇತ್ತೀಚಿನ ಸಮಾಜದಲ್ಲಿ, ಹುಡುಗರು ಮುದುಕರು ಒಟ್ಟು ಸಂಸಾರ ಮಾಡಿಕೊಂಡಿರುವ ಸಂದರ್ಭಗಳು ಕಡಮೆಯಾಗುತ್ತಿವೆ. ಅಂದಮೇಲೆ ವಾನ ಪ್ರಸ್ಥದ ಆವಶ್ಯಕತೆ ಏಕೆ ಎನ್ನಬಹುದು. ತಮ್ಮ ಮುಪ್ಪಿನಲ್ಲಿ ಮಕ್ಕಳು ನೆರ ವಾಗಲಿಲ್ಲವಲ್ಲ ಎಂಬ ಕೊರಗೇ ಅವರನ್ನು ತಿನ್ನಲು ಆರಂಭವಾಗುತ್ತದೆ. ಅಂದ ಮೇಲೆ ಇಂದು ಮೊದಲಿಗಿಂತಲೂ ಹೆಚ್ಚಾಗಿ ವಾನಪ್ರಸ್ಥದ ಮಾನಸಿಕಸ್ಥಿತಿ ಯನ್ನು ಹದಮಾಡಿಕೊಳ್ಳಲೇಬೇಕು.

ಐವತ್ತು ಐವತ್ತೈದರ ವಯಸ್ಸಿನಲ್ಲಿ ಚರ್ಮವು ಸುಕ್ಕುಸುಕ್ಕುಬಿದ್ದಿರು ತ್ತದೆ. ಹಲ್ಲುಗಳು ಸಡಿಲವಾಗಿ, ಕೆಲವು ಬಿದ್ದುಹೋಗಿಯೂ ಇರುತ್ತವೆ, ನೆಟಿಕೆಮುರಿದರೆ ಲಟಲಟಗಳು ಹೇರಳವಾಗಿ ಬರುತ್ತವೆ. ಏಕೆಂದರೆ ಬೆರಳಿನ ಕೀಲುಗಳಲ್ಲಿ ಯೌವನದಲ್ಲಿರುವಷ್ಟು ದ್ರವವು ಇಲ್ಲದೆ ಶುಷ್ಕವಾಗಿರುವುದರಿಂದ ಮುಡಚಿದಾಗ ಮೂಳೆಯು ತಾಕಿ ಲಟಲಟ ಶಬ್ದವಾಗುತ್ತದೆ. ಎಲ್ಲ ಕೀಲು ಗಳಲ್ಲಿಯೂ ಇದೇ ಶುಷ್ಕಾವಸ್ಥೆಯು ಹೆಚ್ಚುಕಡಮೆ ಕಾಣಿಸಿಕೊಂಡಿರುತ್ತದೆ. ಮಾತನಾಡುವ ಬಾಯಿನ ಅಂಚಿನಲ್ಲಿ ಎಂಜಲು ಕಟ್ಟುತ್ತದೆ. ಏಕೆಂದರೆ ಹಲ್ಲು ಗಳು ಸಡಿಲವಾಗಿರುವುದರಿಂದ ಮಾತನಾಡುವಾಗ ಎಂಜಲು ಹೊರಗೆ ಬರು

ತ್ತದೆ. ತಂಟಿಯ ಮಾಂಸಗಳು ಕೂಡ ಪ್ರಾಯದಲ್ಲಿದ್ದಂತೆ elastic ಆಗಿರುವುದಿಲ್ಲ. ಬಾಯನ್ನು ಬಿಗಿಯಾಗಿ ಮುಚ್ಚಲು ಆಗುವುದಿಲ್ಲ. ಹಾಗಾಗಿ ಬಾಯಿನ ಅಂಚಿನಲ್ಲಿ ಎಂಜಲು ನೆರೆರೆಕಟ್ಟಿಕೊಂಡು ಕೂಡುತ್ತದೆ. ತಲೆಯ ಕೂದಲು ನರೆತಿರುತ್ತದೆ.

ಪಂಚೇಂದ್ರಿಯಗಳು ಕೂಡ ಮಂದವಾಗುತ್ತವೆ. ಓದುವಾಗ ಪುಸ್ತಕವನ್ನು ದೂರದೂರಕ್ಕೆ ಕೈ ಎಳೆದುಕೊಂಡು ಹೋಗುತ್ತವೆ. ಸಂಭಾಷಣೆಮಾಡುವಾಗ "ಆ್ಞ" "ಆ್ಞ" ಎಂದು ಹತ್ತಾರು ಬಾರಿ ಕೇಳಬೇಕಾಗುತ್ತದೆ. ಮುಟ್ಟಿದರೆ ಮ್ಯೆ ರ್ಝು ಎನ್ನುವ ಪ್ರಾಯದಲ್ಲಿ ಕಾಣಿಸುವ ಚರ್ಮದ ಪ್ರತಿಕ್ರಿಯೆಯು ಈಗ ತಟ್ಟಿದರೂ ರ್ಝು ಎನ್ನುವುದಿಲ್ಲ. ಮೂಗು ಅಲ್ಪ ಸ್ವಲ್ಪ ವಾಸನೆಯನ್ನು ತಿಳಿಯುವುದಿಲ್ಲ. ನಾಲಿಗೆಯ ರುಚಿ ಮಂದವಾದರೂ ಚಪಲದಿಂದ ರುಚಿಮಾಂದ್ಯವು ಕಾಣಬರುವುದಿಲ್ಲ. ವಂಶಾಭಿವೃದ್ಧಿಯ ಚಟುವಟಿಕೆಗಳು ಕೂಡ 'ತಂಟೆಗೆ ಸಿಗಬೇಡ, ತಮ್ಮಾ : ಸಿಕ್ಕಿದ್ದು ಬಿಡಬೇಡ' ಎಂಬ ನೀತಿಯನ್ನು ಅನುಸರಿಸುತ್ತವೆಯೇ ವಿನಾ ಮೊದಲಿದ್ದ ಉತ್ಸಾಹವಾಗಲಿ ದುಡುಕು ಉದ್ದೇಶವಾಗಲಿ ಇರುವುದಿಲ್ಲ.

ಮೆದುಳಿನ ಪ್ರತಿಕ್ರಿಯೆಯೂ ಮಂದವಾಗುತ್ತದೆ. 'ಓಡು ಅಥವಾ ಹೋರಾಡು' ಎಂಬುದೇ ಪ್ರಕೃತಿಯ ನಿಯಮ. ಶತ್ರುವು ಕಂಡುಬಂದರೆ ಈ ಎರಡರಲ್ಲಿ ಒಂದನ್ನು ಮಾಡಬೇಕು. ಈ ಎರಡೂ ಕ್ರಮಗಳಿಗೆ ಮೆದುಳಿನ ಕ್ರಿಯೆಯೂ ಮಂದವಾಗಿರುವುದರಿಂದ, ಓಡಲೂ ಕಷ್ಟ. ಹೋರಾಡಲೂ ಸಾಧ್ಯವಿಲ್ಲ. ಆದುದರಿಂದ ಸುರಕ್ಷಿತವಾದ ಅಪ್ಪಹಾಕಿದ ಆಲದ ಮರ ಅಂತ ಅಂದುಕೊಂಡು, ಆತನಕ ಭದ್ರವಾದ ಕೆಲಸಕ್ಕೂ ಮನೆಗೂ ಅಂಟಿಕೊಳ್ಳುತ್ತಾನೆಯೇ ವಿನಾ ಬೇರೆಯ ಹೊಂದಾದ ಕೆಲಸವನ್ನು ಪ್ರಾರಂಭಿಸಲು ಹೆದರುತ್ತಾನೆ. ಆಗಿಬಂದ ಮನೆ, ಕೂಡಿಬಂದ ಕೆಲಸ. ಅಂತ ತನ್ನ ಮನಸ್ಸಿಗೆ ತಾನೇ ತಾರ್ಕಿಕವಾಗಿ ಸಮಾಧಾನ ತಂದುಕೊಳ್ಳುತ್ತಾನೆ. ಹಾಗೆ ಮಾಡಿ ತನ್ನ ಹಿಂಜರಿಯುವ ಹೇಡಿತನವನ್ನು ಮರೆಮಾಚಿಕೊಳ್ಳುತ್ತಾನೆ.

ಮಾನಸಿಕ ಮಾರ್ಪಾಡುಗಳೂ ಸಾಕಷ್ಟು ಸ್ಪಷ್ಟವಾಗಿ ಕಾಣಬರುತ್ತವೆ. ಹಗಲುಗನಸು ಬೀಳುವ ಚಟುವಟಿಕೆಯು ಬಾಲ್ಯದಲ್ಲಿನಂತೆ ಊಹಾಪೋಹಗಳಿಂದ ತುಂಬಿರದೆ ಇದ್ದರೂ, 'ಹಿಂದಿನ ಜನ್ಮದಲ್ಲಿ ಹಾಗೆ ಮಾಡಿದ್ದಿರಬೇಕು, ಆದ್ದರಿಂದ ಈ ಜನ್ಮದಲ್ಲಿ ಹೀಗೆ ಹೀಗೆ ಅನುಭವಿಸಲೆಬೇಕಾಯಿತು' ಎಂದುಕೊಂಡು. ಪ್ರಕೃತ-

ಜನ್ಮದ ಬಾಳನ್ನು ಜನ್ಮಜನ್ಮಾಂತರಗಳಿಗೆ ಅನ್ವಯಿಂಸಿಕೊಳ್ಳುವ ಊಹಾಪೋಹ ಗಳಿಗೆ ಅಣಿಯಾಗುತ್ತಾನೆ.

ನಿರ್ಣಯಂಮಾಡಂವ ಆವಶ್ಯಕತೆ ಕಡಮೆಯಾಗುಂತ್ತದೆ. 'ಹಿಂದೆ ಸರಿದು ಓಡು, ಅಥವಾ ಮುಂದೆ ನುಗ್ಗಿ ಹೋರಾಡು' ಕ್ರಮವನ್ನು ಮಾಡಲಾಗದೆ ಇದ್ದುದರಿಂದ, ನಿತ್ಯಜೀವನವು ಒಂದು ರೀತಿ ಯಾಂತ್ರಿಕವಾಗಿ ನಡಸಿದಂತಿರು ತ್ತದೆ. ಹಾಗಾಗಿ ಹೊಸ ಸನ್ನಿವೇಶಗಳಾಗಲಿ, ನಿರ್ಣಯಿಸಬೇಕಾದ ಸಂದರ್ಭ ಗಳಾಗಲಿ ಕಡಮೆ. ಹಾಗೂ ಗುರುತರವಾದಸ ಮಂಸ್ಯೆಗಳು ಬಂದರೆ, (ಉದಾ ;– ಮಕ್ಕಳ ಮದುವೆ. ಆಸ್ತಿಪಾಸ್ತಿಗಳ ಕೊಳ್ಳುವಿಕೆ ಅಥವಾ ಮಾರುವಿಕೆ, ಇತ್ಯಾದಿ ಗಳು) ಆಗ ಮನೆಯಲ್ಲಿರುವ ಇತರರ ಮೇಲೆ, ಅಂದರೆ ಹೆಂಡತಿ ಮಕ್ಕಳ ಮೇಲೆ. ಸೋದರರ ಮೇಲೆ ಜವಾಬ್ದಾರಿಯನ್ನು ಹೊರಿಸಿ, ತಾನು ನುಣುಚಿ ಕೊಳ್ಳುವ ಉಪಾಯವನ್ನು ಹುಡುಕುತ್ತಾನೆ.

ತಾರ್ಕಿಕವಾಗಿ ವಿಚಾರಮಾಡಿ ಸಮಾಧಾನವನ್ನು ತಂದುಕೊಳ್ಳುವ ಚಟು ವಟಿಕೆಯು ಸಾಕಷ್ಟು ಆವಶ್ಯಕವಾಗಿರುತ್ತದೆ. ಆದರೆ ಇತರರ ಮೇಲೆ ತಪ್ಪು ಹೊರಿಸುವುದಕ್ಕಿಂತ ವಿಧಿಯ ಮೇಲೆ ಗೂಬೆ ಕೂರಿಸುವ ಹವ್ಯಾಸವು ಹೆಚ್ಚಾ ಗಿರುತ್ತದೆ. ವಿಧಿಯ ಇತರರ ಹೆಸರುಗಳು : 'ನನ್ನ ಪ್ರಾಚೀನ ಕರ್ಮ'— 'ಯಾರದೋ ಶಾಪ ನನಗೆ ತಾಕಿದೆ'—'ಜಾತಕದಲ್ಲಿ ಗ್ರಹಚೇಷ್ಟೆ ಬಲವಾಗಿದೆ. ಆರರಲ್ಲಿ ಶನಿ ಕೂತರೆ ಇನ್ನೇನು ತಾನೆ ಆಗುತ್ತೆ'—'ಅಂಗೈಯಿನ ಧನರೇಖೆ ನೋಡಿದರೆ ತಿಳಿಯುತ್ತಲ್ಲ ! ಮಂಡೋದರಿ ಅಂಗಾಲಿನಲ್ಲಿದ್ದ ಕಾಕರೇಖೆ ಯಂತಿದೆ. ಇನ್ನು ಬಾಳು ಹೇಗೆ ತಾನೆ ಹಸನಾದೀತು'—'ಮನೆ ಕಟ್ಟಿಸಿದ ಮುಹೂರ್ತಾಪ್ಪಾ ! ಮುಟ್ಟಿದ್ದೆಲ್ಲಾ ಮಣ್ಣು !'—ಇತ್ಯಾದಿ.

ಪ್ರಜ್ಞಾಪ್ರೇರಿತವಾದ ಚಟುವಟಿಕೆಯು ಚುರುಕಾಗಿಯೇ ಇರುತ್ತದೆ. ಕುತೂಹಲವೇನೂ ಕಡಮೆಯಾಗಿರುವುದಿಲ್ಲ. ಆದರೆ ಹೊರಗಿನ ವಿಷಯಗಳನ್ನು ತಿಳಿದುಕೊಳ್ಳಲು ಹೆಚ್ಚು ಕುತೂಹಲವಿರುವುದಿಲ್ಲ.

"ಲೋಕವಾರ್ತೆಯ ನೀನು ಕಿವಿಗೆ ಕೇಳಿಸಲು ಬೇಡ
ಲೋಕೇಶನಾಚರಿತೆ ಕೇಳದಿರ ಬೇಡ"

ಎಂಬ ದಾಸರ ಪದದಂತೆ ಕುತೂಹಲವೆಲ್ಲವೂ ಅಂತರ್ಮುಖಿಯಾಗುತ್ತದೆ.

"ಇಷ್ಟೆಲ್ಲಾ ಯೋಚನೆಮಾಡಿ, ಅಷ್ಟೆಲ್ಲಾ ಒಳ್ಳೆಯದೆಂದು ಕಂಡ ಯೋಜನೆಯನ್ನು ಶ್ರದ್ಧೆಯಿಂದ ಮಾಡಿದೆ. ಟೊಂಕಕಟ್ಟಿ ಊಟಬಿಟ್ಟು ತಪಸ್ಸುಮಾಡಿದಂತೆ ಒದ್ದಾಡಿದೆ. ಕಡೆಗೆ ಆದದ್ದು ಅನರ್ಥ! ಏಕೆ ಹೀಗಾಯಿತು? ಅವ್ಯಕ್ತವಾದ 'ಅದು' ಹೀಗೆ ತೊಡರಿಕೊಂಡುಬಂದು ಈ ಅನರ್ಥವನ್ನು ಮಾಡಿರಬೇಕು. 'ಅದು' ಯಾಕೆ ಹೀಗೆ ಮಾಡಿರಬಹುದು? ಮುಂದಕ್ಕೆ ಒಳ್ಳೆಯದಾಗಲಿ, ಈಗ ಸ್ವಲ್ಪ ಕಷ್ಟ ಬಂದರೂ ಬರಲಿ, ಎಂದು ತುಂಬಾ ಮುಂದಾಲೋಚನೆಯಿಂದ ಹೀಗೆ 'ಅದು' ಮಾಡಿರಬಹುದೆ?"—ಮೊದಲಾದ ತರ್ಕಬದ್ಧ ವಿಚಾರಗಳು ಮನಸ್ಸನ್ನು ಮುತ್ತುತ್ತವೆ. ಆದರೆ ಅದರ ಹಿಂಬದಿಯಲ್ಲೇ 'ಅದು' ಏನು? 'ಅದರ' ಸ್ವರೂಪ ಏನು? 'ಅದು' ಎಲ್ಲಿದೆ? –ಎಂದು ಪ್ರಜ್ಞಾಪ್ರೇರಿತವಾದ ಚಟುವಟಿಕೆ ಕೂಡ ವಿಶೇಷವಾಗಿ ದುಡಿಯುತ್ತದೆ. ಕುತೂಹಲದಿಂದ ಚಟುವಟಿಕೆಯು ಬಾಹ್ಯದ ತಿಳಿವಳಿಕೆಗೆ ದುಡಿಯುವಾಗ, ವೈಜ್ಞಾನಿಕ ಪ್ರಯೋಗಗಳ ಅವಶ್ಯಕತೆ ಇರುತ್ತದೆ. ಆದರೆ ಆಂತರ್ಯದ ತಿಳಿವಳಿಕೆಗೆ ಮನನ, ಏಕಾಗ್ರಚಿತ್ತತೆ ಇವೇ ಪ್ರಯೋಗಮಾರ್ಗಗಳು. ಹಾಗಾಗಿ ಪ್ರಜ್ಞಾಪ್ರೇರಿತವಾದ ಚಟುವಟಿಕೆಯು ಹಗಲಿರುಳೂ ನಡೆಯಲು ಸಾಧ್ಯ. ನಿತ್ಯಜೀವನದ ಕೆಲಸಕಾರ್ಯಗಳನ್ನು ಯಾಂತ್ರಿಕವಾಗಿ ಮಾಡುವಾಗಲೂ ಮನನ ಮಾಡಲು ಸಾಧ್ಯ.

ಮಾನಸಿಕ ಭಾವನೆಗಳಲ್ಲಿಯೂ ವಿಶೇಷವಾದ ಮಾರ್ಪಾಡುಗಳನ್ನು ಕಾಣಬಹುದು. ಬಾಳಗೀತವಾದ 'ಓಡು ಅಥವಾ ಹೋರಾಡು' ಇದರಿಂದ ದೂರಹೋಗುತ್ತಿರುವಾಗ, ತನ್ನ ವ್ಯಕ್ತಿತ್ವದ ಹಿರಿಮೆಯೇನೂ ಉಳಿದಿರುವುದಿಲ್ಲ. ಹಾಗಾಗಿ ಅಹಂಕಾರದ ಬೆನ್‌ಬಲಗಳಾದ ಅರಿಷಡ್ವರ್ಗಗಳು ಅನವಶ್ಯಕವಾಗುತ್ತವೆ. ಅಂದಮೇಲೆ ಅನುಕಂಪದ ಹಲವು ಮುಖಗಳು ಎದ್ದುಕಾಣುತ್ತವೆ. ಮುಪ್ಪಿನಲ್ಲಿ ಪ್ರೇಮ, ಒಲವು, ದಯೆ, ಕರುಣೆ ಇವೆಲ್ಲವೂ ಸ್ವಾಭಾವಿಕವಾಗಿ ಕಾಣಬರುತ್ತವೆ.

ದಾಯಾದಿಯೊಡನೆ ಪ್ರಾಯದಲ್ಲೆಲ್ಲಾ ವ್ಯವಹಾರವನ್ನು ಕೋರ್ಟಿನಲ್ಲಿ ನಡಸಿದವನು ಮುದುಕನಾದಾಗಲೂ ಕೋರ್ಟಿನ ತೀರ್ಮಾನವು ಹೊರಬಿದ್ದಿರುವುದಿಲ್ಲ. ಈಗ ಹೋರಾಟದ ಚಟ ಕಡಮೆಯಾದುದರಿಂದ ದಾಯಾದಿಯನ್ನು ಕರೆದು, 'ವ್ಯವಹಾರ ಸಾಕು, ನಿನಗೆ ಏನು ಬೇಕೋ ಅದನ್ನು ತೆಗೆದುಕೊಂಡು

ಸುಖವಾಗಿರು' ಎಂದು ಅನುಕಂಪದಿಂದ ಹೇಳಿದರೆ, ಆಗ ದಾಯಾದಿ ಏನು ಮಾಡುತ್ತಾನೆ ? "ಹಿರಿಯರೇ ತಾವು ಹೇಳಿದಂತೆ ನಾನು ನಡೆದುಕೊಳ್ಳುತ್ತೇನೆ" ಎನ್ನುತ್ತಾನೆ. ಆಗ ಮುದುಕನಿಗೆ ಅರಿವು ಉಂಟಾಗಿರುತ್ತದೆ. "ಅನುಕಂಪದಿಂದ ನಡೆದುಕೊಂಡರೆ, ಹೋರಾಟದಲ್ಲಿ ಪಡೆಯುವ ಫಲಕ್ಕಿಂತಲೂ ಹೆಚ್ಚು ಫಲವನ್ನು ಗಳಿಸಬಹುದು; ಶಾಶ್ವತವಾದ ವಿಶ್ವಾಸವನ್ನು ಪಡೆಯಬಹುದು" ಎಂಬ ಪಾಠವನ್ನು ಕಲಿಯುತ್ತಾನೆ.

ಎಲ್ಲ ಮುದುಕರಿಗೂ ಹೀಗೆ ಆಗುತ್ತದೆ ಎಂದಲ್ಲ. ಪ್ರಜ್ಞಾಪ್ರೇರಿತವಾದ ಚಟುವಟಿಕೆ ಸಾವಿರದಲ್ಲಿ ಒಬ್ಬರಿಗೆ ಇರುತ್ತದೆ. ಅಂತಹ ಸಾವಿರ ಮಂದಿಯಲ್ಲಿ ಒಬ್ಬಿಬ್ಬರೇ ಕುತೂಹಲದಿಂದ, ಒಮ್ಮನಸ್ಸಿನಿಂದ ಅರಿಯಲು ಯತ್ನಿಸುತ್ತಾರೆ. ಅಂದಮೇಲೆ ಈ ಪಾಠಗಳೆಲ್ಲವೂ ಸಾವಿರಾರು ಮಂದಿಯಲ್ಲಿ ಒಬ್ಬಿಬ್ಬರಿಗೆ ಸ್ಫೂರ್ತಿಕೊಡುತ್ತವೆ. ಸಾವಿರ ಕಾಲುಗಳು ತಲೆತಗ್ಗಿಸಿ ನಡೆಯುತ್ತವೆ. ಆದರೆ ಎರಡೇ ಕಾಲಿನ ಒಬ್ಬ ತಲೆಯೆತ್ತಿ ನಡೆದು ಅರಿಯಬಯಸುತ್ತಾನೆ. ಆ ಒಬ್ಬನಿಂದಲೇ ಇಡೀ ಮಾನವನ ಜ್ಞಾನಭಂಡಾರವು ವೃದ್ಧಿಯಾಗುವುದು! ಆದುದರಿಂದಲೇ ಅಂತಹ ಪ್ರಜ್ಞಾಪ್ರೇರಿತವಾದ ಚಟುವಟಿಕೆಯುಳ್ಳ ಮುದುಕನ ನಿದರ್ಶನವನ್ನು ಕೊಟ್ಟಿರುವುದು. ಮಿಕ್ಕವರೆಲ್ಲರೂ ಜಾತಕದ ಪ್ರಕಾರ ವಯಸ್ಸಿನಲ್ಲಿ ಮುದುಕರಾದರೂ, ಅವರ ಮನಸ್ಸಿನ ಬೆಳವಣಿಗೆಯು ಬಾಲ್ಯಾವಸ್ಥೆಯಲ್ಲಿಯೋ, ಯೌವನಾವಸ್ಥೆಯಲ್ಲಿಯೋ, ಗೃಹಸ್ಥಾವಸ್ಥೆಯಲ್ಲಿಯೋ ನಿಂತೇ ಹೋಗಿರುತ್ತದೆ. ಹಾಗಾಗಿ ಮುದುಕರಲ್ಲಿ ಕ್ರೀಡಾಸಕ್ತರನ್ನೂ ತರುಣೀಸಕ್ತರನ್ನೂ ಚಿಂತಾಸಕ್ತರನ್ನೂ ಕಾಣಬಹುದು. ಒಬ್ಬಿಬ್ಬರು ಮಾತ್ರ ಪರಬ್ರಹ್ಮದಲ್ಲಿ ಆಸಕ್ತಿತೋರಿಸುವ, ಪ್ರಜ್ಞಾಪ್ರೇರಿತವಾದ ಚಟುವಟಿಕೆಯನ್ನು ಹೊಂದಿರುವ, ಕುತೂಹಲಿಗಳು.

ಮನೋದೈಹಿಕ ಬೇನೆಗಳು ಈ ವಯಸ್ಸಿನಲ್ಲಿ ಅಷ್ಟಾಗಿ ಕಾಣಿಸಿಕೊಳ್ಳುವುದಿಲ್ಲ. ಪ್ರಜ್ಞಾಪ್ರೇರಿತವಾದ ಚಟುವಟಿಕೆಯಿದ್ದವರಿಗೆ ಈ ಬೇನೆಗಳು ಬರಲು ಅವಕಾಶವಿಲ್ಲ. ಮಿಕ್ಕವರು, ಯಾವ ಯಾವ ಹಂತದಲ್ಲಿ ಅವರ ಮನಸ್ಸಿನ ಬೆಳವಣಿಗೆ ಸ್ತಬ್ಧವಾಗುತ್ತದೋ ಆ ಹಂತದ ಮನೋದೈಹಿಕ ಬೇನೆಗಳನ್ನು ಅನುಭವಿಸುತ್ತಾರೆ.

## ಎ) ವಾರ್ಧಕ್ಯಾವಸ್ಥೆ — ಸಂನ್ಯಾಸಾಶ್ರಮ

ಮನಸ್ಸಿನ ಪ್ರಜ್ಞಾಪ್ರೇರಿತವಾದ ಚಟುವಟಿಕೆಯಿಂದ ಬಾಳನ್ನು ವಿಮರ್ಶಿಸಿ ನೋಡಿದ ಯಾವನಿಗಾದರೂ ಬಾಳಿನ ಮೇಲಿನ ಮೋಹವು ನಾಶವಾಗುತ್ತವೆ. ತಾನು ಈ ಲೋಕದಲ್ಲಿ ಹುಟ್ಟಿದ ಮೇಲೆ, ಮುಪ್ಪಿನ ತನಕ ಬದುಕಿ ಬಾಳಿದ್ದನ್ನೂ ನಡಸಿದ ಹೋರಾಟವನ್ನೂ ಮನಸ್ಸಿನ ಆಸೆ ಆಕಾಂಕ್ಷೆಗಳು ಯಾವ ರೀತಿ ಪರಿಣಾಮಗೊಂಡವು ಎಂಬುದನ್ನೂ ಮೆಲುಕುಹಾಕಿ ನೋಡಿದರೆ, ತನ್ನ ಸುತ್ತುಮುತ್ತಲಿನವರ ಬದುಕನ್ನೂ ಮನನಮಾಡಿ ನೋಡಿದರೆ, ಇದಕ್ಕೆಲ್ಲ ಕಾರಣವಾದ ಯಾವುದೋ ಒಂದು ಶಕ್ತಿ ಇದೆ, ಆ ಆದಿಶಕ್ತಿಯನ್ನು ಅರಿಯಬೇಕು, ಅದೇ ತಿಳಿಯಬೇಕಾದ ವಸ್ತು ಎಂದೆನ್ನಿಸಿಯೇ ಅನ್ನಿಸುತ್ತದೆ. ಹಾಗಾದಾಗ ಮಾನಸಿಕವಾಗಿಯಾದರೂ ಮನೆಯ ಮತ್ತು ಸಮಾಜದ ಸಕಲ ಬಂಧನೆಗಳನ್ನು ಕಳಚಿಕೊಂಡು, ಆ ಆದಿಶಕ್ತಿಯನ್ನು ಅರಿಯುವ ಪ್ರಯತ್ನ ಮಾಡುತ್ತಾನೆ. ಇದೇ ನಿಜವಾದ ಸಂನ್ಯಾಸ.

ಆದರೆ ಈ ತೆರದ ಪ್ರಜ್ಞಾಪ್ರೇರಿತವಾದ ಚಟುವಟಿಕೆಯು ಸಾವಿರ ಜನರಲ್ಲಿ ಒಬ್ಬರಿಗೆ ಅಥವಾ ಹತ್ತು ಸಾವಿರ ಜನರಲ್ಲಿ ಒಬ್ಬರಿಗೆ ಸಾಧ್ಯ. ಮಿಕ್ಕ ಬಹುಮಂದಿ ಬಾಳಿನ ಆಸೆ ನಿರಾಸೆ. ಸುಖ ದುಃಖ, ಮೆರೆಯುವುದು ಕೊರಗುವುದು. ಇತ್ಯಾದಿ ದ್ವಂದ್ವಮಯವಾದ ಬದುಕಿನಲ್ಲೇ ತೇಲಿಮುಳುಗುತ್ತ ಇರುತ್ತಾರೆ. ಇಂತಹವರಿಗೆ ಮುಪ್ಪಿನಲ್ಲಿ ಅರುಳುಮರುಳು ಮನಸ್ಸಾಗಿ, ದೇಹವು ಶಿಥಿಲವಾಗಿ, ಕಡೆಗಾಲದಲ್ಲಿ ಅದುರುವಾಯು, ಲಕ್ವಾ, ಇತ್ಯಾದಿ ಬೇನೆಗಳು ಬಡಿಯುತ್ತವೆ. ಹೀಗಾದಾಗಲೂ ಮುದುಕನ ಮನಸ್ಸು ಅಸ್ಥಿರವಾಗಿ, ಗತ ವೈಭವದ ನೆನಪಿನಲ್ಲೇ ಕಾಲ ತಳ್ಳುತ್ತದೆ. ಸುತ್ತಲಿನ ಆಗುಹೋಗುಗಳನ್ನು ಮುದುಕನು ಸರಿಯಾಗಿ ಅರ್ಥಮಾಡಿಕೊಳ್ಳಲಾರ. ಅಂದರೆ ಈ ಮುದುಕನೂ ಸಮಕಾಲೀನದೃಷ್ಟಿಯಿಂದ ಸರ್ವಸಂಗವನ್ನೂ ತ್ಯಜಿಸಿದಂತೆಯೇ! ಇವನೂ ಒಂದು ದೃಷ್ಟಿಯಲ್ಲಿ ಸಂನ್ಯಾಸಿಯೇ!

ಮನೋದೈಹಿಕ ಬೇನೆಗಳು ಈ ಎರಡು ತೆರನಾದ ಮುದುಕರಲ್ಲೂ ಹೆಚ್ಚಾಗಿ ಕಾಣಬರುವುದಿಲ್ಲ, ಮೊದಲ ಅಲ್ಪಸಂಖ್ಯಾತ ಗುಂಪಿನವರ ಮನಸ್ಸು

ಸಮತ್ವವನ್ನು ಸಾಧಿಸಿಕೊಂಡು ದೇಹದ ಮೇಲೆ ದುಷ್ಪರಿಣಾಮವನ್ನು ಮಾಡುವುದಿಲ್ಲ. ಎರಡನೆಯ ಬಹುಸಂಖ್ಯಾತ ಗುಂಪಿನವರ ಮನಸ್ಸು ಅರುಳು ಮರುಳಾಗಿ, ಬೇರೂರಿದ ಆಸೆಯಾಗಲಿ, ಉತ್ಕಟೇಚ್ಛೆಯಾಗಲಿ ಇರುವುದಿಲ್ಲ. ಆದುದರಿಂದ ಅವರಿಗೂ ಮನೋದೈಹಿಕ ಬೇನೆಗಳು ತಾಕುವುದಿಲ್ಲ.

## ಆರೋಗ್ಯದೃಷ್ಟಿಯಲ್ಲಿ ಮಾನವನು ಈ ತನಕ ಮನಸ್ಸಿನಿಂದ ಸಾಧಿಸಿರುವುದೇನು ?

### ಮುಪ್ಪು ಮತ್ತು ಮನೋದೈಹಿಕ ಬೇನೆಗಳು

### ೧. ಮುಪ್ಪು

ಪ್ರಕೃತಿಯಲ್ಲಿ ಒಂದು ಜನನವಾದಾಗ, ಹೊಸದೊಂದು ದೇಹ, ಅದ ರೊಳಗಿನ ಮನಸ್ಸು ಇವೆರಡೂ ಒಟ್ಟಾಗಿ ಕಾಣಿಸಿಕೊಳ್ಳುತ್ತವೆ. ಹೀಗಾಗುವು ದರ ನಿಮಿತ್ತವೇನು ಎಂಬುದನ್ನು ತತ್ವಜ್ಞಾನಿಗಳಿಗೆ ಸದ್ಯಕ್ಕೆ ಬಿಡೋಣ. ವಾಸ್ತವಿಕವಾಗಿ ಹೀಗಾದ ಮೇಲೆ ಹುಟ್ಟಿದ ಮಗುವು ದೇಹವನ್ನು ಬೆಳೆಸಿಕೊಳ್ಳು ತ್ತದೆ, ಹಾಗೂ ಮನಸ್ಸನ್ನು ಹದಗೊಳಿಸಿಕೊಳ್ಳುತ್ತದೆ. ದೇಹದ ಬೆಳವಣಿಗೆಯು ಒಂದು ಹಂತವನ್ನು ಮುಟ್ಟಿದಾಗ. ಅನಂತರದ ಬೆಳವಣಿಗೆಯು ತಟಸ್ಥವಾಗು ತ್ತದೆ. ಬೆಳವಣಿಗೆಯ ಹಂತವು ಆಯಾ ಪ್ರಾಣಿಗೆ ಆನುವಂಶಿಕವಾಗಿ ಬಂದ ಒಂದು ಗುಣ. ಆನೆಯ ಮಗುವು ೯–೧೦ ಅಡಿ ಎತ್ತರ ಬೆಳೆದಾಗ, ಸಿಂಹದ ಮರಿಯು ೩–೩.೫ ಅಡಿ ಭುಜದೆತ್ತರವಾದಾಗ, ಮಾನವನು ೫–೬ ಅಡಿ ಎತ್ತರವಾದಾಗ, ಈ ಹಂತವನ್ನು ಮುಟ್ಟುವನು. ಪ್ರಕೃತಿಯಲ್ಲಿ ಒಂದೊಂದು ಪ್ರಾಣಿಗೂ ಇಷ್ಟೇ ಎತ್ತರ, ಅಗಲ, ದಪ್ಪ ಇರಬೇಕು. ಅಷ್ಟೇ ಇದ್ದರೆ ಆ ಪ್ರಾಣಿಯ ಜೀವನಕ್ಕೆ ಬಹಳ ಅನುಕೂಲವಾದೀತು, ಎಂಬುದು ವಂಶಾನುಗತ ವಾದ ಅನುಭವದಿಂದ ಸಿದ್ಧಾಂತವಾಗಿರುತ್ತದೆ. ಯೌವನಾವಸ್ಥೆಯಲ್ಲಿ ಆಯಾ ಪ್ರಾಣಿಯು ತನ್ನ ಬೆಳವಣಿಗೆಯ ಪರಮಾವಧಿಯನ್ನು ಸಾಮಾನ್ಯವಾಗಿ ಮುಟ್ಟುತ್ತದೆ.

ಮನಸ್ಸಿನ ಬೆಳವಣಿಗೆಯು ಆರೂ ಹಂತಗಳಲ್ಲಿ ಮುಂದುವರಿಯಲು ಸಾಧ್ಯ. ಪ್ರಜ್ಞಾಪ್ರೇರಿತವಾದ ಮಾನಸಿಕ ಕುತೂಹಲ ಚಟುವಟಿಕೆಗಳು ೨೦ರ ಪ್ರಾಯದಲ್ಲಿ ಕಾಣಿಸಿಕೊಳ್ಳಬಹುದು. ವೈಜ್ಞಾನಿಕ ಸಿದ್ಧಾಂತಗಳನ್ನು ಹೊಸದಾಗಿ ಹೂಡಬಹುದು. ಅದೇ ರೀತಿ ಭಾವನಾ ಚಟುವಟಿಕೆಯೂ ಅನುಕಂಪದಿಂದ ಪ್ರೇರಿತವಾಗಿ ಹೃದಯಸ್ಪರ್ಶಿಯಾದ ಕವನ ಕಾದಂಬರಿಗಳನ್ನು ರಚಿಸಬಹುದು. ೮೦ರ ಪ್ರಾಯದಲ್ಲಿ ಕೂಡ ಈ ಎರಡೂ ಚಟುವಟಿಕೆಗಳು ಮಾನವನ ಜ್ಞಾನಭಂಡಾರವನ್ನು ಯಶಸ್ವಿಯಾಗಿ ಹೆಚ್ಚಿಸಬಹುದು. ಅಂದರೆ ಮನಸ್ಸಿನ ಬೆಳವಣಿಗೆಯು ಬದುಕಿರುವವರೆಗೂ ಸಾಧ್ಯ ಎಂದಂತಾಯಿತು. ತೊಂಭತ್ತರ ಪ್ರಾಯದಲ್ಲಿ ಬರ್ನಾರ್ಡ್ ಷಾನ ಮನಸ್ಸು ಚುರುಕಾಗಿಯೇ ಇತ್ತು. ಸಂಯಮದಿಂದ ಮನಸ್ಸನ್ನು ನಡಸಿಕೊಂಡರೆ ಹಿರಿಯ ಸಂಕಲ್ಪವೊಂದನ್ನು ಮಾಡ್ಕಿ ಆ ಗುರಿಯನ್ನು ಸಾಧಿಸುತ್ತ ಹೋದರೆ, ಅಂತಹವನ ಮನಸ್ಸು ಬಹು ಕಾಲ ಬೆಳೆಯುತ್ತ ಇರಬಹುದು. ದೈಹಿಕ ಕಾರಣಗಳಿಂದಾಗಿ, ಮೆದುಳು ಹಾಗೂ ಮೆದುಳನ್ನು ತೋಯಿಸುತ್ತಿರುವ ದ್ರವವು ಶುಷ್ಕವಾದರೆ, ಅಥವಾ ಕ್ಷಯಿಸಿ ಮುಪ್ಪಾದರೆ, ಆಗ ಮಾನಸಿಕ ಬೆಳವಣಿಗೆಯು ಸ್ತಬ್ಧವಾಗುತ್ತದೆ.

ಅಂದರೆ ದೇಹಕ್ಕೆ ಮುಪ್ಪು ಬಂದೇಬರುತ್ತದೆ. ಆದರೆ ಮನಸ್ಸು ಬಲು ಕಾಲ ಚುರುಕಾಗಿಯೇ ಇರಲು ಸಾಧ್ಯ ಎಂದಂತಾಯಿತು.

ಆದರೆ ಕಾಡುಪ್ರಾಣಿಗಳು ಮುಪ್ಪಿನ ವಯಸ್ಸನ್ನು ಮುಟ್ಟುವುದೇ ಇಲ್ಲ, ಏಕೆಂದರೆ ಅವುಗಳಿಗೆ ಶಕ್ತಿಯು ಕಡಮೆಯಾದಾಗ ಇತರ ಪ್ರಾಣಿಗಳೊಡನೆ ಊಟಕ್ಕಾಗಲಿ, ಕೂಟಕ್ಕಾಗಲಿ ಹೋರಾಡುವಾಗ ಆಕಸ್ಮಿಕಮರಣಕ್ಕೆ ತುತ್ತಾಗುತ್ತವೆ. ಹಾಗಾಗಿ ಅವುಗಳಿಗೆ ಮಾನವನಂತೆ ಮುಪ್ಪುಜೀವನವನ್ನು ಕಾಣಲು ಅಸಾಧ್ಯ. ಆದರೆ ಸಾಕುಪ್ರಾಣಿಗಳು, ಮಾನವನ ಸಂರಕ್ಷಣೆಯನ್ನು ಪಡೆದ ಹಸು, ನಾಯಿ, ಕುದುರೆ, ಬೆಕ್ಕು ಇತ್ಯಾದಿ ಪ್ರಾಣಿಗಳು ಮುಪ್ಪನ್ನು ಕಾಣಬಲ್ಲವು.

ಮುಪ್ಪಾಗುವ ಅವಕಾಶವನ್ನು ಮಾನವನು ಹೇಗೆ ಹೊಂದಿದ ? ತನ್ನ ಮನಸ್ಸಿನ ಚಟುವಟಿಕೆಗಳಿಂದ ದೇಹರಕ್ಷಣೆಗೆ ಸಮಾಜವನ್ನು ನಿರ್ಮಿಸಿಕೊಂಡು, ಸಮಾಜದ ಭದ್ರತೆಗೆ ಕಟ್ಟಳೆಕಾನೂನುಗಳನ್ನು ರಚಿಸಿಕೊಂಡು, ಈ ಯೋಗ್ಯತೆ

ಯನ್ನು ಸಾಧಿಸಿಕೊಂಡಿದ್ದಾನೆ. ಹೀಗಾಗಿ ನಾಗರಿಕ ಸಮಾಜವು ಪ್ರಗತಿ ಹೊಂದಿದಂತೆಲ್ಲಾ ಮುಪ್ಪಾದವರ ಸಂಖ್ಯೆಯೂ ಅತಿಯಾಗುವ ಅವಕಾಶಗಳು ಯಥೇಚ್ಛವಾಗಿವೆ.

ಮಾನವನು ಸಮಾಜರಚನೆಯಿಂದ, ವೈಜ್ಞಾನಿಕ ಚಟುವಟಿಕೆಗಳಿಂದ ದೇಹರಕ್ಷಣೆಯನ್ನು ಮಾಡಿಕೊಂಡ ಎಂದೆವು. ಹೇಗೆ ಎನ್ನುವುದಕ್ಕೆ ಒಂದೆರಡು ನಿದರ್ಶನಗಳನ್ನು ಕೊಡಬಹುದು.

ಕಾಡುಮೃಗಗಳು, ತಮ್ಮ ವೈರಿಮೃಗಗಳಿಂದಲೂ ಪ್ರಕೃತಿಯ ಭೌತ ಆವೇಶಗಳಾದ ಮಳೆ, ಸಿಡಿಲು, ಭೂಕಂಪ, ಹುಚ್ಚೇರಿ ಹರಿಯುವ ಹೊಳೆಗಳು. ಕ್ಷಾಮ, ಕಾಳ್ಗಿಚ್ಚು ಇವುಗಳಿಂದಲೂ ಆಕಸ್ಮಿಕಕ್ಕೆ ಒಳಗಾಗಬಹುದು. ಹಾಗೂ ಸಾಕಷ್ಟು ಆಹಾರ, ನೀರು, ದೊರಕದೆ ಗುಂಪುಗುಂಪಾಗಿ ಸಾಯಬಹುದು. ಆದರೆ ಮಾನವನು ಮೃಗಗಳಿಗೆ ಅಪಾಯ ಬಂದ ಹಾಗೆ ತನಗೆ ಬರದೆ ಇರಲೆಂದು ಸಮಾಜ ಮನೆ ಮಠಗಳನ್ನು ರಚಿಸಿಕೊಂಡಿದ್ದಾನೆ. ಭೌತ ಆವೇಶಗಳನ್ನು ತಡೆಗಟ್ಟಿ ತನ್ನ ರಕ್ಷಣೆಯನ್ನು ಆದಷ್ಟು ಮಟ್ಟಿಗೆ ಸಾಧಿಸಿದ್ದಾನೆ. ಕ್ಷಾಮ ಡಾಮರಗಳು ಬಂದಾಗ. ಸುವೃಷ್ಟಿಯಾದ ದೇಶಗಳಿಂದ ಆಹಾರ ನೀರು ತರಿಸುವ ಸಾರಿಗೆ ಸಂಪರ್ಕಗಳ ವ್ಯವಸ್ಥೆಗಳನ್ನು ಮಾಡುತ್ತಾನೆ. ಹೀಗೆ ತನ್ನ ದೇಹರಕ್ಷಣೆಯನ್ನು ಮಾಡಿಕೊಳ್ಳುತ್ತಾನೆ. ದುಷ್ಟಮೃಗಗಳಾದ ಹಾವು, ಹುಲಿ ಇತ್ಯಾದಿ ಗೋಚರವಾದ ಶತ್ರುಗಳಿಂದ ಪಾರಾಗುವ ರಕ್ಷಣಾಮಾರ್ಗಗಳನ್ನು ಯಶಸ್ವಿಯಾಗಿ ಮಾಡಿಕೊಂಡಿದ್ದಾನೆ. ಆದರೆ ಸಾಮಾನ್ಯ ಕಣ್ಣುಗಳಿಗೆ ಅಗೋಚರವಾದ ಕ್ರಿಮಿಕೀಟಗಳಿಂದ, ಬ್ಯಾಕ್ಟೀರಿಯಾಗಳಿಂದ, ವೈರಸ್‌ಗಳಿಂದ ಬಾಧಿತನಾಗಿ ಅವುಗಳೊಡನೆ ಅಹರ್ನಿಶಿ ಹೋರಾಟ ನಡಸುತ್ತಿರುತ್ತಾನೆ. ಇತ್ತೀಚಿನ ವೈಜ್ಞಾನಿಕ ಸಂಶೋಧನೆಗಳಿಂದಾಗಿ ಕಂಡುಹಿಡಿಯಲ್ಪಟ್ಟ ಸಲ್ಫ ಔಷಧಿಗಳು, ಆ್ಯಂಟಿಬಯಾಟಿಕ್ ಮದ್ದುಗಳು, ಇವುಗಳಿಂದ ಆಗೋಚರಶತ್ರುಗಳ ಹಾವಳಿಯನ್ನು ಬಲು ಯಶಸ್ವಿಯಾಗಿ ತಡೆಗಟ್ಟಿದ್ದಾನೆ. ಬ್ಯಾಕ್ಟೀರಿಯಾಗಳು, ವೈರಸ್‌ಗಳು, ಹಾಗೂ ಬೂಷ್ಟು ಜಾತಿಯ Fungiಗಳೂ ಪ್ರಕೃತಿಯಲ್ಲಿ ಒಂದನ್ನೊಂದು ಹತೋಟಿಯಲ್ಲಿಟ್ಟಿರುತ್ತಿದ್ದುವು. ನವವೈಜ್ಞಾನಿಕ ಪ್ರಯೋಗಗಳಿಂದಾಗಿ ಬ್ಯಾಕ್ಟೀರಿಯಾಗಳೂ ವೈರಸ್‌ಗಳೂ ಮಾನವನಲ್ಲಿ ಆಸರೆಪಡೆಯುವಂತಿಲ್ಲ. ಹಾಗಾಗಿ Fungiಗಳಿಗೆ ಮಾನವನ ದೇಹದಲ್ಲಿ ಹಾಸುಮಣೆ ಹಾಕಿದಂತಾಗಿದೆ. ಇವುಗಳ ಹಾವಳಿಯು ಹೆಚ್ಚಾಗುತ್ತಿದೆ.

ಇವುಗಳಿಗೂ ಅನತಿ ಕಾಲದಲ್ಲಿ ಯಶಸ್ವಿಯಾದ ಚಿಕಿತ್ಸೆಯನ್ನು ಮನುಷ್ಯನು ಕಂಡುಹಿಡಿಯುತ್ತಾನೆ. ಈ ರೀತಿ ಮುಪ್ಪಾಗುವ ಅವಕಾಶವನ್ನು ಗಳಿಸಿ ಕೊಂಡಿದ್ದಾನೆ.

## ೨. ಮನೋದೈಹಿಕ ಬೇನೆಗಳು

ಸೋಂಕುಜಾಡ್ಯಗಳಿಂದ (ಉದಾ : ಪ್ಲೇಗು, ಕಾಲರ, ವಿಷಮಶೀತಜ್ವರ, ನ್ಯೂಮೋನಿಯಾ, ಇತ್ಯಾದಿಗಳಿಂದ) ನರಳುವುದು ತಪ್ಪಿದ ಹಾಗೆಲ್ಲಾ, ಮನುಷ್ಯ ನಿಗೆ ರಕ್ತದ ಒತ್ತಡ, ಮಧುಮೂತ್ರ, ಕೀಲುಗಳ ರೋಗ, ಉಬ್ಬಸ, ಇತ್ಯಾದಿ ಬೇನೆಗಳು ಅತಿಅತಿಯಾಗಿ ಬರಲು ಆರಂಭಿಸಿವೆ. ಈ ಕಾಯಿಲೆಗಳೆಲ್ಲವನ್ನೂ ಸ್ಥೂಲವಾಗಿ Srees syndrome diseases ಎಂದು ಕರೆಯುಬಹುದು. ಅದೇ ರೀತಿಯಲ್ಲಿ ಮನೋದೈಹಿಕ ಬೇನೆಗಳ ಸಹಸ್ರಾರು ಮುಖಗಳು ಕಾಣಿಸಿ ಕೊಳ್ಳುತ್ತಿವೆ.

ನಾಗರಿಕ ಸಮಾಜದಲ್ಲಿ ಸ್ಪರ್ಧಾಜೀವನವು ತಪ್ಪಿದ್ದಲ್ಲ. ಸ್ಪರ್ಧೆಯಲ್ಲಿ ಯಶಸ್ವಿಯಾಗಬೇಕಾದರೆ, ಮನಸ್ಸಿನ ಚಟುವಟಿಕೆಗಳನ್ನು ತೀವ್ರಗೊಳಿಸ ಬೇಕು. ಹಾಗೆ ತೀವ್ರಗತಿಯಲ್ಲಿ ಕೆಲಸ ಮಾಡುವಾಗ ಅನಿರೀಕ್ಷಿತವಾದ ಎಡರುತೊಡರುಗಳು ಬಂದೇಬರುತ್ತವೆ. ಎಡರುತೊಡರುಗಳ ನಿವಾರಣೆಗೆ ಮನಸ್ಸು ಉಪಾಯಗಳನ್ನು ಕಂಡುಹಿಡಿಯಬೇಕು. ಆ ಉಪಾಯಗಳು ಕಾರ್ಯಗತವಾಗುವ ತನಕ, ಮನಸ್ಸಿಗೆ ನೆಮ್ಮದಿ ಇರುವುದಿಲ್ಲ; ದುಗುಡವು ತಪ್ಪಿದ್ದಲ್ಲ.

ಒಬ್ಬ ವ್ಯಾಪಾರಿಯ ಉದಾಹರಣೆಯನ್ನು ತೆಗೆದುಕೊಳ್ಳೋಣ. ಇಂದಿನ ಸಮಾಜದಲ್ಲಿ, ನಾಗರಿಕ ಹಂತದಲ್ಲಿ, ವ್ಯಾಪಾರಿಯು ಸುಲಭದರದಲ್ಲಿ ವಸ್ತುಗಳು ಎಲ್ಲಿ ಸಿಗುತ್ತವೋ ಅಲ್ಲಿ ಅವುಗಳನ್ನು ಕೊಂಡು. ಎಲ್ಲಿ ಆ ವಸ್ತುಗಳ ಅಭಾವ ಎದೆಯೋ ಅಲ್ಲಿಗೆ ಬೇಗ ಸಾಗಿಸಿ ಮಾರಿದರೆ ಹಣ ಸಂಪಾದಿಸಬಹುದು. ಹೀಗೆ ಮಾಡಬೇಕಾದರೆ ಯಾವ ಯಾವ ವಸ್ತುಗಳು ಎಲ್ಲೆಲ್ಲಿ ಹೇರಳವಾಗಿ ದೊರೆಯು ತ್ತವೆಯೋ ಅದನ್ನು ತಿಳಿದುಕೊಳ್ಳಬೇಕು. ಅವುಗಳ ಅತಿ ಕಡಿಮೆ ಬೆಲೆಯನ್ನು ತಿಳಿದುಕೊಳ್ಳಬೇಕು. ಎಲ್ಲಿ ಆ ವಸ್ತುಗಳು ದುರ್ಲಭವಾಗಿವೆಯೋ ಅಲ್ಲಿಗೆ

ಅವನ್ನು ತ್ವರಿತವಾಗಿ ಸಾಗಿಸಬೇಕು. ಅಲ್ಲಿ ಅವನ್ನು ಆದಷ್ಟು ಅಧಿಕ ಬೆಲೆಗೆ ಮಾರಬೇಕು.

ಹಿಂದಿನ ಕಾಲದಲ್ಲಿ ವ್ಯಾಪಾರಿಗಳು ಗಾಡಿ ಕಟ್ಟಿಸಿಕೊಂಡು ಭತ್ತ ಬೆಳೆಯುವ ಹಳ್ಳಿಗಳಿಗೆ ಹೋಗಿ, ಕೊಂಡು ತಂದು, ಪಟ್ಟಣಗಳಲ್ಲಿ ಮಾರುತ್ತಿದ್ದರು. ಎರಡು ಮೂರು ವಾರಗಳ ಪ್ರಯಾಣ ಆವಶ್ಯಕವಾಗಿತ್ತು. ಒಂದು ಹಳ್ಳಿಗೆ ಹೋಗಿ ವ್ಯಾಪಾರ ಕುದುರಿಸಿ ಪಟ್ಟಣಕ್ಕೆ ಬರಲು, ಅನಂತರ ಹತ್ತಾರು ಜಾಗಗಳಿಗೆ ಕಾಗದ ಬರೆದು ವಿಷಯವನ್ನು ಎರಡು ಮೂರು ದಿನಗಳಲ್ಲಿ ಸಂಗ್ರಹಿಸಿ, ಇಂತಹ ಹಳ್ಳಿಯಲ್ಲಿ ಸುಲಭದರಕ್ಕೆ ಕೊಳ್ಳಬಹುದು ಎಂದು ತಿಳಿದು ಅಲ್ಲಿಗೆ ರೈಲಿನಲ್ಲಿಯೋ ಮೋಟಾರಿನಲ್ಲಿಯೋ ಹೋಗಿ ವ್ಯಾಪಾರಮಾಡಿ ಕೊಳ್ಳುತ್ತಿದ್ದ. ಅನಂತರ ರೈಲಿನಲ್ಲಿ ಮಾಲನ್ನು ಸಾಗಿಸಿ ಪಟ್ಟಣಗಳಲ್ಲಿ ದಾಸ್ತಾನು ಮಾಡಿ, ಅವು ಮಾರುಕಟ್ಟೆಯಲ್ಲಿ ದುರ್ಲಭವಾದಾಗ, ಮಾರಿ ಹಣ ಸಂಪಾದಿಸಲು ಶುರು ಮಾಡಿದ. ಈಚೀಚೆಗೆ ತಂತಿಯ ಮೂಲಕ ಸುದ್ದಿ ತಿಳಿದು, ತಂತಿಯ ಮೂಲಕವೇ ಬೇರೆ ಊರಿನಲ್ಲಿ ಮಾರಿ, ಮಾಲನ್ನು ನೋಡದೆ ಲಾಭ ಗಳಿಸುತ್ತಾನೆ.

ಈ ಪ್ರಗತಿಯಲ್ಲಿ ಸಾರಿಗೆಸಂಪರ್ಕಗಳು ಅತಿ ಮುಖ್ಯ. ಟೆಲಿಫೋನಿನಲ್ಲಿ, ದೂರವಾಣಿಯಂತ್ರದಲ್ಲಿ, ಮಾತನಾಡಿ, ಒಂದೆರಡು ನಿಮಿಷಗಳಲ್ಲಿ ವ್ಯಾಪಾರವನ್ನು ಕುದುರಿಸಬಹುದು. ಕೂತಲ್ಲೇ ಇದ್ದು, ಮನಸ್ಸಿನ ಚುರುಕಿನಿಂದ ಲಾಭ ಸಂಪಾದಿಸಬಹುದು. ಆದರೆ ಸಾರಿಗೆಸಂಪರ್ಕದ ವಿಧಾನಗಳಾದ ದೂರವಾಣಿಯಂತ್ರ, ವಿಮಾನಸಾಗಾಣಿಕೆ, ಮೋಟಾರುಸಾಗಾಣಿಕೆ ಇತ್ಯಾದಿಗಳೇನಾದರೂ ಯಾಂತ್ರಿಕ ತೊಂದರೆಯಿಂದ ತುಂಡಾದರೆ, ಅವನಿಗೆ ಕೈಮುರಿದಂತಾಗುತ್ತದೆ. ಮೈ ಪರಚಿಕೊಳ್ಳುವಂತಾಗುತ್ತದೆ. ಅವನ ಮನಸ್ಸು ಆತಂಕ, ದುಗುಡ, ಅಸಮಾಧಾನ, ಮುಂದಾಗಬಹುದಾದ ನಷ್ಟದ ಭೀತಿ ಇವುಗಳಿಂದ ತುಂಬಿ ಹೋಗುತ್ತದೆ.

ಅಂದರೆ, ಯಾವ ಮನಸ್ಸಿನ ಪ್ರಗತಿಯಿಂದ ತನ್ನ ನಿತ್ಯಜೀವನದ ಸ್ಪರ್ಧೆಯಲ್ಲಿ ಮುಂದಾಗಲು ಅನುಕೂಲ ಸೌಕರ್ಯಗಳನ್ನು ರಚಿಸಿಕೊಂಡನೋ ಅದೇ ಮನಸ್ಸು ಆ ಸೌಕರ್ಯಗಳ ಯಾಂತ್ರಿಕ ತೊಂದರೆಯುಂಟಾದಾಗ ಆತಂಕದಿಂದ, ದುಗುಡದಿಂದ ನರಳುತ್ತದೆ, ಅಲ್ಲದೆ ಯಾಂತ್ರಿಕತೊಂದರೆ ಉಂಟಾಗಬಹುದು

ಎಂಬ ಭೀತಿಯಿಂದಲೂ ಆತಂಕಪಡಲೇಬೇಕು, ಹೀಗಾಗಿ ನಾಗರಿಕಜೀವನದಲ್ಲಿ ಮನಸ್ಸು ಆತಂಕ ದುಗುಡಗಳಿಂದ ತುಂಬಿರಲು ಹೇರಳವಾದ ಅವಕಾಶಗಳಿವೆ.

ಮಾನಸಿಕ ಆತಂಕ, ದುಗುಡ, ಅಸಮಾಧಾನ, ಭೀತಿ — ಇವುಗಳೇ Stress Syndrome ಕಾಯಿಲೆಗಳಿಗೆ ಮೂಲಭೂತವಾದ ಒಂದು ಕಾರಣ ಎಂಬುವುದೂ ಸಿದ್ಧಾಂತವಾಗಿದೆ.

ಅಂದಮೇಲೆ ಈ ತನಕ ಮಾನವನು ಸಾಧಿಸಿರುವುದು ಎರಡು :

೧. ದೇಹ, ಮನಸ್ಸು ಎರಡೂ ಸಮಾಜಕ್ಕೆ ನಿಷ್ಪ್ರಯೋಜಕವಾದಾಗಲೂ ಬದುಕನ್ನು ಮುಂದುವರಿಸುವ ಉಪಾಯವನ್ನು ಕಂಡುಹಿಡಿದಿದ್ದಾನೆ. ಮಕ್ಕಳು ಮರಿಗಳ ವಿಶ್ವಾಸ ಎಂಬುದನ್ನು ಮನಸ್ಸಿನಲ್ಲಿ ರೂಢಿಸಿಕೊಂಡು, ಮುಪ್ಪಿನಲ್ಲಿ ರಕ್ಷಣೆಯನ್ನು ಪಡೆದಿದ್ದಾನೆ. ಆಸ್ತಿಪಾಸ್ತಿಗಳು ತನ್ನವು ಎಂದು ಸಮಾಜದಲ್ಲಿ ಕಾನೂನು ಮಾಡಿ ಭದ್ರಪಡಿಸಿಕೊಂಡು ಮುಪ್ಪಿನ ಜೀವನಕ್ಕೆ ಅಣಿಮಾಡಿಕೊಂಡಿದ್ದಾನೆ.

೨. ಸಾಂಕ್ರಾಮಿಕ ಜಾಡ್ಯಗಳನ್ನು ತಡೆಗಟ್ಟಿ, ಜೀವನದ ಸೌಕರ್ಯಗಳನ್ನು ಹೆಚ್ಚು ಮಾಡಿಕೊಂಡಂತೆಲ್ಲಾ ಮಾನಸಿಕ ಆತಂಕ ದುಗುಡಗಳನ್ನೂ ಬೆಳೆಸಿಕೊಂಡಿದ್ದಾನೆ. ಇವುಗಳಿಂದಾಗಿ ಮನೋದೈಹಿಕ ಬೇನೆಗಳನ್ನು ಪಡೆದುಕೊಂಡಿದ್ದಾನೆ. ಅಂದರೆ, ಕಂಡ ಬೇನೆಗಳನ್ನು ಪರಿಹರಿಸಿ, ಕಾಣದ ಬೇನೆಗಳನ್ನು ಆಹ್ವಾನಿಸಿಕೊಂಡಿದ್ದಾನೆ.

## ಸಾರಾಂಶ

ಈ ತನಕ ಮಾನವನು ಸಾಧಿಸಿರುವುದನ್ನು ಹೆಗ್ಗುರೆಗಳಲ್ಲಿ ತಿಳಿದೆವು. ಹಾಗೂ ಮನಸ್ಸಿನ ಪ್ರಜ್ಞಾಪ್ರೇರಿತ ಚಟುವಟಿಕೆಯಿಂದ ಇದು ಸಾಧ್ಯವಾಯಿತು ಎಂದೆವು. ಹೀಗಾಗಿ ದೇಹದ ಸುರಕ್ಷತೆಗಳನ್ನು ಕಾಪಾಡಿಕೊಳ್ಳುವುದಕ್ಕೆ ಮನಸ್ಸು ಏನೇನು ಉಪಾಯಗಳನ್ನು ರಚಿಸಿಕೊಂಡಿದೆ ? ಸಮಾಜದ ಕಟ್ಟಳೆ ಕಾನೂನುಗಳು, ನಿತ್ಯಜೀವನಕ್ಕೆ ದೇಹಶ್ರಮವಿಲ್ಲದೆ ದೊರಕುವ ಸೌಕರ್ಯಗಳು, ಕಣ್ಣಿಗೆ ಕಂಡ ಶತ್ರುಗಳಿಂದ ಪಾರಾಗುವ ಬಗೆ, ಕಾಣದ ಕ್ರಿಮಿ ಬ್ಯಾಕ್ಟೀರಿಯಾದಿ ಶತ್ರುಗಳಿಂದ ಪಾರಾಗುವ ವಿಧಾನಗಳು, ಇತ್ಯಾದಿ ಇವೆಲ್ಲವನ್ನೂ

ತಿಳಿದೆವು. ಮನಸ್ಸು ದೇಹ ಇವೆರಡೂ ಬಹಳ ನಿಕಟವಾದ ಸಂಪರ್ಕವನ್ನಿಟ್ಟು ಕೊಂಡು, ಪರಸ್ಪರ ಸಹಾಯಕವಾಗಿ, ಇಂದಿನ ಮಾನವನ ಪ್ರಗತಿಗೆ ಕಾರಣ ವಾಗಿದೆ ಎಂದು ಅರಿತೆವು. ಮನಸ್ಸಿಲ್ಲದ ಬರೀ ದೇಹವನ್ನು ಯಾರೂ ಕಂಡಿಲ್ಲ. ದೇಹವಿರದ ನಗ್ನ ಮನಸ್ಸನ್ನು ಯಾರೂ ನೋಡಿಲ್ಲ. ಆದುದರಿಂದಲೇ ಇವೆರಡರ ಪರಸ್ಪರ ಚಟುವಟಿಕೆಯಿಂದಾಗಿ ಮಾನವನು ಪ್ರಗತಿ ಹೊಂದುತ್ತಿದ್ದಾನೆ ಎಂದು ಹೇಳಲೇಬೇಕು.

ಆದರೂ ಒಮ್ಮೊಮ್ಮೆ ದೇಹವು ನೋವಿನಿಂದ ಬಾಧಿತವಾಗಿದ್ದರೂ ಮನಸ್ಸು ಕುತೂಹಲದಿಂದ ತುಂಬಿ ಪ್ರಜ್ಞಾಪ್ರೇರಿತ ಚಟುವಟಿಕೆಗಳಲ್ಲಿ ಮಗ್ನ ವಾಗಿ, ಸಂಶೋಧನೆ ನಡಸಿ, ವೈಜ್ಞಾನಿಕ ಪವಾಡಗಳನ್ನು ಸಾಧಿಸಿದೆ. ಹಲ ವಾರು ಹೆಸರಾಂತ ವೈಜ್ಞಾನಿಕರು ತೀವ್ರ ಬೇನೆಗಳಿಂದ ನರಳುತ್ತಿದ್ದಾಗಲೇ ಅಸಾ ಧಾರಣ ಸಂಶೋಧನೆಗಳನ್ನು ನಡಸಿದ್ದಾರೆ. ಅದೇ ರೀತಿ ಕ್ಷಯ ಮುಂತಾದ ಕ್ರೂರ ರೋಗಗಳಿಂದ ನರಳುತ್ತಿದ್ದ ಕೀಟ್ಸ್ ಮುಂತಾದ ಕವಿಗಳು ಆ ಕಾಲ ದಲ್ಲೇ ಅನುಕಂಪದಿಂದ ತುಂಬಿದ, ಎದೆಯನ್ನು ಸಮಾಧಾನ ಪಡಿಸುವ ಕವನ ಗಳನ್ನು ಹಾಡಿದರು.

ಕೆಲವು ದೈಹಿಕ ಬೇನೆಗಳು ಮೊದಲ ಮೊದಲ ಹಂತದಲ್ಲಿ ಮನಸ್ಸಿನ ಪ್ರಜ್ಞಾಪ್ರೇರಿತ ಚಟುವಟಿಕೆಗಳನ್ನು ತೀವ್ರಗೊಳಿಸುತ್ತವೆ ಎಂಬುದೂ ಸಿದ್ಧಾಂತ ವಾಗಿದೆ. ಹಾಗಾಗಲು ಕಾರಣಗಳೇನೆಂಬುದೂ ಸ್ವಲ್ಪಮಟ್ಟಿಗೆ ತಿಳಿದುಬಂದಿದೆ.

ಕ್ಷಯ ಬಂದಾಗ ಜ್ವರ ಕಾಣಿಸಿಕೊಳ್ಳುವುದು, ಕ್ಷಯಕ್ರಿಮಿಗಳನ್ನು ಬೇಯಿಸಿ ನಾಶಪಡಿಸಲೋಸುಗ ಎಂಬುದನ್ನು ಈಗಾಗಲೇ ತಿಳಿದಿದ್ದೇವೆ. ಅಂದರೆ ದೇಹದ ರಕ್ಷಣಾಕ್ರಮಗಳನ್ನು ಉದ್ರೇಕ ಮಾಡಲು ಜ್ವರವು ಆವಶ್ಯಕ ಎಂದಂತಾಯಿತು. ಮನಸ್ಸು ಕೂಡ ತನ್ನ ವಾಸಸ್ಥಾನವಾದ ದೇಹದ ರಕ್ಷಣೆ ಯನ್ನು ಮಾಡಿಕೊಳ್ಳಬೇಕಲ್ಲವೆ ? ಆ ದೇಹವೇ ನಾಶವಾದರೆ ಮನಸ್ಸಿನ ಪಾಡೇನು ? ಆದುದರಿಂದ ಕ್ಷಯದ ಜ್ವರ ಬಂದಾಗ ಮನಸ್ಸು ತನ್ನ ಚಟುವಟಿಕೆ ಗಳನ್ನು ತೀವ್ರಗೊಳಿಸುತ್ತದೆ. ಹಾಗಾಗಿ ನಿಸ್ವಾರ್ಥೀ ಚಟುವಟಿಕೆಯಾದ ಪ್ರಜ್ಞಾಪ್ರೇರಿತ ಚಟುವಟಿಕೆಯೂ ಚುರುಕಾಗುತ್ತದೆ. ಆಗ ಭಾವನಾರೂಪಿ ಯಾದ ಅನುಕಂಪವು ಕವನಗಳಾಗಿ ಹೂವಿನಂತೆ ಕಂಗೊಳಿಸುತ್ತದೆ. ಸಮಾಧಾನ ವನ್ನು ಸಂತೋಷವನ್ನು ಕಂಡವರಿಗೆ ಕೊಡುತ್ತದೆ. ಈ ಚಟುವಟಿಕೆಯಿಂದ

ಇಂತಹ ಮನಸ್ಸಿರುವ ದೇಹದ ರಕ್ಷಣೆಯನ್ನು ಮಾಡಿದಂತಾಯಿತೆ ? ಇಲ್ಲ. ಇದು ನಿಸ್ವಾರ್ಥೀ ಚಟುವಟಿಕೆ. ಎಂದರೆ ತನ್ನ ದೇಹ, ತನ್ನ ಮನಸ್ಸು, ಎಂಬ ವಿಚಾರ ಇಲ್ಲಿ ಗೌಣವಾಗಿರುತ್ತದೆ. ಆದುದರಿಂದಲೇ ಸುಮಾರು ಎಲ್ಲ ಮಾನವರ ಸಮಾಧಾನವನ್ನು ಸಾಧಿಸುವ ಅವರ ಕವನಗಳು ಸೃಷ್ಟಿಯಾಗಿವೆ. ಕ್ಷಯದಿಂದ ನರಳುತ್ತಿರುವ ಕವಿಯ ದೇಹಕ್ಕೆ ಈ ಚಟುವಟಿಕೆಯಿಂದ ತ್ರಾಸ ಆಗಬಹುದು. ಆದರೂ ಆ ದೇಹದಲ್ಲಿನ ಮನಸ್ಸಿಗೆ ಹಿತವಾಗುತ್ತದೆ, ಆನಂದ ತುಂಬಿಬಂದಿರುತ್ತದೆ.

ಜ್ವರ ಬಂದವರಿಗೆಲ್ಲಾ ಪ್ರಜ್ಞಾಪ್ರೇರಿತ ಚಟುವಟಿಕೆಗಳು ಹೆಚ್ಚಾಗುವು ದಾದರೆ ಲೋಕದ ತುಂಬಾ ಅನುಕಂಪವೂ ವೈಜ್ಞಾನಿಕ ಪವಾಡಗಳೂ ಹುಚ್ಚು ಹೊಳೆಯಂತೆ ಹರಿದಿರಬೇಕು. ಮೊದಲೇ ಹೇಳಿದಂತೆ, ಲಕ್ಷಾಂತರ ಮಾನವರಲ್ಲಿ, ಹತ್ತಾರು ವರ್ಷಗಳಲ್ಲಿ, ಒಬ್ಬಿಬ್ಬರಿಗೆ ಮಾತ್ರ ಆಗೊಮ್ಮೆ ಈಗೊಮ್ಮೆ ಈ ರೀತಿಯ ಪ್ರಜ್ಞಾಪ್ರೇರಿತ ಚಟುವಟಿಕೆಗಳು ಸಾಧ್ಯ. ಅಂತಹ ಬಹಳ ಕಡಮೆ ಸಂಖ್ಯಾತರ ವಿಷಯವನ್ನೇ ಇಲ್ಲಿ ನಿದರ್ಶಿಸುತ್ತಿರುವುದು. ಏಕೆಂದರೆ ಅಂತಹವ ರಿಂದಲೇ ಮಾನವನ ಇಡೀ ಜ್ಞಾನಭಂಡಾರವು ಹೆಚ್ಚುತ್ತ ಹೋಗುವುದು. ಅವರುಗಳೇ ಕಾಲದೇಶಗಳನ್ನು ಮೀರಿದ ಸೀಮಾಪುರುಷರು.

ಅಂದರೆ, ಮನಸ್ಸು, ದೇಹ, ಇವೆರಡರ ಪರಸ್ಪರ ಕಾರ್ಯಕ್ರಮದಿಂದಲೇ ಮಾನವನ ಪ್ರಗತಿ ಎಂದಂತಾಯಿತು. ಈ ರೀತಿಯ ಕಾರ್ಯಕ್ರಮವು ನಡೆಯಲು ಮೂಲಭೂತವಾದ ಕಾರಣ ಯಾವುದಾದರೂ ಇದೆಯೆ ? ಇವೆರಡರ ಜೊತೆಗೂ ಹಾಸುಹೊಕ್ಕಾಗಿ ಬೆರೆತು, ಹಾಗೂ ದೂರದಲ್ಲಿರುವ ಪ್ರೇರಕದಂತೆ ಇವೆರಡನ್ನೂ ಸೆಳೆಯುತ್ತಿರುವ ಯಾವುದಾದರೂ ಒಂದು ಶಕ್ತಿ ಇದೆಯೆ ? ಇದೆ, ಆನಂದವೇ ಬಾಳಿನ ಪ್ರೇರಕ. ಈ ವಿಷಯವನ್ನು ಮನನ ಮಾಡೋಣ.

## ಅಧ್ಯಾಯ ಮೂರು

# ಆನಂದಾನ್ವೇಷಣೆ

ಪ್ರಾಣಿಗಳ ಎಲ್ಲ ಚಟುವಟಿಕೆಗಳನ್ನೂ ಊಟದ ಚಟುವಟಿಕೆಗಳು ಮತ್ತು ಕೂಟದ ಚಟುವಟಿಕೆಗಳು ಎಂದು ಸ್ಥೂಲವಾಗಿ ವಿಭಾಗಿಸಬಹುದು. ಒಂದು ದೃಷ್ಟಿಯಲ್ಲಿ ಊಟಮಾಡಿ ದೇಹವನ್ನು ಸಂರಕ್ಷಿಸುವುದು ಕೂಡ ಕೂಟದ ನಿಮಿತ್ತಕ್ಕೇ, ವಂಶಾಭಿವೃದ್ಧಿಗಾಗಿಯೇ, ಎನ್ನಬಹುದು. ಆದರೂ ಕಣ್ಣಿಗೆ ಕಂಡಂತೆ ಊಟವು ದೇಹಕ್ಕೆ ಅತ್ಯಗತ್ಯ. ಊಟದ ವಿಷಯವನ್ನೇ ತೆಗೆದು ಕೊಂಡು ಮನನಮಾಡೋಣ.

ಒಂದು ಪ್ರಾಣಿ, (ಉದಾಹರಣೆಗೆ ಹುಲಿ ಎನ್ನೋಣ) ಊಟವನ್ನು ಏಕೆ ಹುಡುಕುತ್ತದೆ ? ಅದಕ್ಕೆ ಹೊಟ್ಟೆ ಹಸಿವಾಗಿರುವುದರಿಂದ. ಹಸಿವು ಎಂದ ರೇನು ? ಅದರ ಹೊಟ್ಟೆಯಲ್ಲಿ ಏನೋ ಒಂದು ರೀತಿಯ ಅಸಮಾಧಾನ, ಒಂದು ತೆರನಾದ ತಳಮಳ ಉಂಟಾಗುತ್ತದೆ. ಆನುವಂಶಿಕವಾಗಿ ಬಂದ ನೆನಪಿನಿಂದ ಏನನ್ನಾದರೂ ತಿಂದರೆ ಹೊಟ್ಟೆಯ ತಳಮಳವು ನಾಶವಾಗುತ್ತದೆ ಎಂಬುದು ಗೊತ್ತು. ಹಾಗಾಗಿ ತನಗೆ ಒಗ್ಗಿಬಂದ ಆಹಾರವನ್ನು ಬೇಟೆಯಾಡಿ ಸಂಪಾದಿಸಲು ಹೊರಡುತ್ತದೆ. ಬೇಟೆಯಾಡುವಾಗ ಬೇಕಾದ ಜಾಣತನವೆಲ್ಲಾ ಅದರ ಮೆದುಳಿನಲ್ಲಿ ಆನುವಂಶಿಕವಾಗಿ ಸಂಗ್ರಹಿಸಲ್ಪಟ್ಟಿರುತ್ತದೆ. ಅದರ ನೆನಪಿನಿಂದ ದನವನ್ನು ಬೇಟೆಯಾಡುತ್ತದೆ, ಅನಂತರ ಯಾರೂ ಬಾರದೆ ಇರುವ ಪೊದೆಯಂ

ಮರೆಗೆ ದನವನ್ನು ಎಳೆದುಕೊಂಡು ಹೋಗಿ ಹೊಟ್ಟೆ ತುಂಬಾ ತಿನ್ನುತ್ತದೆ. ಆಗ ಹೊಟ್ಟೆಯ ತಳಮಳವು ನಿಂತುಹೋಗುತ್ತದೆ, ಹೊಟ್ಟೆಗೆ ಆನಂದವಾಗುತ್ತದೆ.

ಹೊಟ್ಟೆಯು ಹಸಿವಾಗಿದ್ದಾಗ ಹುಲಿಯ ಮನಸ್ಸು ಕೆರಳಿರುತ್ತದೆ. ಕೆರಳಿದ ಮನಸ್ಸು ಬೇಟೆಗೆ ಅನುಕೂಲ. ಹೊಟ್ಟೆಯು ಗಡದ್ದಾಗಿ ತುಂಬಿದಾಗ, ಹುಲಿಯ ಮನಸ್ಸು ಕೂಡ ಸಮಾಧಾನಹೊಂದುತ್ತದೆ. ಅನಂತರ ಹುಲಿಯು ಮಲಗಿ ಸುಖವಾಗಿ ನಿದ್ರೆಮಾಡುತ್ತದೆ.

ಹಸಿದ ಹೊಟ್ಟೆಯಲ್ಲಿ ಒಂದು ರೀತಿಯ ಉರಿನೋವು—Hungar Pains—ಕಾಣಬರುತ್ತದೆ. ಇದು ನಿವಾರಣೆಯಾದಾಗ ಆನಂದ ಉಂಟಾಗುತ್ತದೆ. ದನವನ್ನು ಹಲ್ಲುಗಳಿಂದ ಕಿತ್ತು ಬಾಯೊಳಗೆ ಅಗಿಯುವಾಗ, ಅಗಿದು ನುಂಗುವಾಗ, ನುಂಗಿದ ಮೇಲೆ ಹೊಟ್ಟೆಯಲ್ಲಿ, ಹುಲಿಗೆ ಸುಖವೇ ಆಗುತ್ತಿರುತ್ತದೆ. ದೈಹಿಕ ಸುಖವೂ ಆನಂದದ ಒಂದು ಕಿರಿಯ ರೂಪ.

ಹೊಟ್ಟೆ ಹಸಿದಿರುವಾಗ ಮನಸ್ಸು ಕೆರಳುತ್ತದೆ. ಆ ಕಾಲದಲ್ಲಿ ಮಾನಸಿಕ ಚಟುವಟಿಕೆಗಳೆಲ್ಲಾ ಆಹಾರವನ್ನು ಕುರಿತದ್ದೇ ಆಗಿರುತ್ತವೆ. ಕೆರಳಿದ ಹುಲಿಯ ಮನಸ್ಸು ಸಮಾಧಾನ ಹೊಂದಬೇಕಾದರೆ ಅದರ ಹೊಟ್ಟೆಯು ತುಂಬಲೇಬೇಕು.

ಹುಲಿಯು ಊಟಮಾಡುವುದರಿಂದ ಅದರ ಹೊಟ್ಟೆಗೆ ಆನಂದವಾಗುತ್ತದೆ, ಹಸಿವಿನ ಉರಿಬಾಧೆ ನಾಶವಾಗುತ್ತದೆ; ಹಾಗೂ ಅದರ ಮನಸ್ಸಿನ ಕೆರಳುವಿಕೆಯು ಹೋಗಿ, ಸಮಾಧಾನ ಉಂಟಾಗುತ್ತದೆ. ಅಂದರೆ, ಹುಲಿಯು ಆಹಾರ ಸೇವನೆ ಮಾಡುವುದರ ಮೂಲ ಕಾರಣ ಸುಖವನ್ನು ಅನುಭವಿಸುವುದು. ಇದು ದೈಹಿಕವಾಗಿಯೂ ಸುಖ. ಸುಖ ಎಂದಾಗ. ಹೊಟ್ಟೆಯ ಉರಿಬಾಧೆ, ಮನಸ್ಸಿನ ಕೆರಳಿಕೆ, ಇವುಗಳು ನಾಶವಾಗುವುದು ಎಂದು ಅರ್ಥಮಾಡಬಹುದು.

ಸಂತಸಪಡುವುದೇ, ಸುಖ ಅನುಭವಿಸುವುದೇ, ಆನಂದದಿಂದ ಇರುವುದೇ, ದೇಹ ಮತ್ತು ಮನಸ್ಸನ್ನು ನಡಸಿಕೊಂಡು ಹೋಗುವ ಮೂಲಧರ್ಮ ಎನ್ನಬಹುದು. ಈ ಮೂಲಧರ್ಮವು ದೇಹ ಮತ್ತು ಮನಸ್ಸು ಇವೆರಡರಲ್ಲೂ ಹಾಸುಹೊಕ್ಕಾಗಿ ಇದೆ ಎಂದೂ ಹೇಳಬಹುದು.

ನಾಗರಿಕ ಮಾನವನ ನಿದರ್ಶನವನ್ನು ತೆಗೆದುಕೊಳ್ಳೋಣ. ಇವನಿಗೂ ಹುಲಿಗಾದಂತೆಯೇ ಹಸಿವಾಗುತ್ತದೆ. ಹೊಟ್ಟೆ ತಳಮಳಗುಟ್ಟುತ್ತದೆ, ಮನಸ್ಸಿಗೆ

ಕಿರಿಕಿರಿಯಾಗುತ್ತದೆ. ಆಗ ಊಟಮಾಡುತ್ತಾನೆ. ಹೊಟ್ಟೆಯು ತುಂಬಿ ಸಂತಸ ಗೊಳ್ಳುತ್ತದೆ. ಮನಸ್ಸೂ ಸಂತಸಗೊಳ್ಳುತ್ತದೆ. ಹೀಗೇ ಆಗಿದ್ದಿದ್ದರೆ ನಾಗರಿಕ ಮಾನವನಿಗೆ ಹೆಚ್ಚು ತಾಪತ್ರಯಗಳೂ ಮನೋದೈಹಿಕ ಬೇನೆಗಳೂ ಬರುತ್ತಿರ ಲಿಲ್ಲ. ತನ್ನ ರಕ್ಷಣೆಗಾಗಿ ಸಮಾಜವನ್ನು ಮಾನವನು ರಚಿಸಿಕೊಂಡಾಗಲೇ ಸಮಾಜದ ಕಟ್ಟಳೆನಿಯಮಗಳನ್ನೂ ರೀತಿರೂಢಿಗಳನ್ನೂ ತನ್ನ ಸುತ್ತಲೂ ಕಟ್ಟಿಕೊಂಡಿರುತ್ತಾನೆ. ಹಾಗಾಗಿ ಹಸಿವಾದಾಗ ಊಟ ಮಾಡುವುದಿಲ್ಲ. ನಿಯಮಿತವಾದ ಹೊತ್ತಿನಲ್ಲಿ ಊಟಮಾಡುತ್ತಾನೆ. ಹೊಟ್ಟೆಯ ಹಸಿವಿಲ್ಲ ದಿದ್ದರೂ ರುಚಿಯಾದ ತಿಂಡಿ ಸಿಕ್ಕಿದರೆ ತಿನ್ನುತ್ತಾನೆ. ಅಲ್ಲದೆ ಸಾಮಾಜಿಕ ಸದ್ವರ್ತನೆಯ ಹೆಸರಿನಲ್ಲಿ, ಪುಕಟ್ಟು ತಿಂಡಿ ಸಿಕ್ಕಿದಾಗ ಅದನ್ನೂ ಗಿಡಿದುಕೊಂಡು ತಿನ್ನುತ್ತಾನೆ.

'ರುಚಿಯಾದ ತಿಂಡಿ' ಎಂದೆವು. ಹಾಗೆಂದರೇನು ? ಹಿಂದೆ ಎಂದೋ ಒಮ್ಮೆ ಅಂಥ ತಿಂಡಿಯನ್ನು ತಿಂದಿರುತ್ತಾನೆ. ಅದು ಬಲು ರುಚಿಯಾಗಿರುತ್ತದೆ. ಆ ನೆನಪು ಅವನ ಮನಸ್ಸಿನಲ್ಲಿ ಅಚ್ಚಳಿಯದೆ ಉಳಿದಿರುತ್ತದೆ. ಅದೇ ತಿಂಡಿ ಯನ್ನು ಈಗ, ಹೊಟ್ಟೆ ತುಂಬಿದಾಗ ಕೂಡ ಕಂಡರೆ, ಹಳೆಯ ನೆನಪು ಕೆರಳಿ, ಅದನ್ನು ತಿನ್ನಬೇಕು ಎಂದು ಅನ್ನಿಸುತ್ತದೆ. ಮುದುಕರು, ಪ್ರಾಯದಲ್ಲಿ ತಿಂದಿದ್ದ ತಿಂಡಿಗಳನ್ನು ನೆನೆಸಿಕೊಂಡು, 'ಅಷ್ಟು ತಿಂದು ಜೀರ್ಣಿಸಿಕೊಂಡಿದ್ದೆ' ಎಂದೆಲ್ಲಾ ಬಣ್ಣಿಸಿ ಹೇಳುವಾಗ, ಆ ತಿಂಡಿಯನ್ನು ತಿಂದಾಗ ಆದ ಸಂತೋಷ ವನ್ನು ಮನಸ್ಸಿನಲ್ಲಿ ಅನುಭವಿಸುತ್ತಾರೆ. ಈ ವಯಸ್ಸಿನಲ್ಲಿ ಆ ತಿಂಡಿಗಳನ್ನು ಆ ಪ್ರಮಾಣದಲ್ಲಿ ತಿಂದರೆ ಅತಿಸಾರ ಇತ್ಯಾದಿ ರೋಗಗಳಿಂದ ಪೀಡಿತರಾಗು ತ್ತಾರೆ. ಅಂದರೆ ಮಾನವನು ತಿಂದು ಸಂತಸಗೊಳ್ಳುವುದು ಹಾಗಿರಲಿ ; ಎಂದೋ ತಿಂದ ತಿಂಡಿಯ ಸೊಗಸಿನ ನೆನಪಿನಿಂದ ಈಗ ಮಾನಸಿಕ ಸಂತಸವನ್ನು ಪಡೆಯ ಬಲ್ಲ. ಹಾಗೂ ಹಲವಾರು ವೇಳೆ, ತಿನ್ನುವುದಕ್ಕಿಂತ ತಿಂದ ನೆನಪೇ ಹೆಚ್ಚು ಸುಖಕಾರಿಯಾಗಿರುತ್ತದೆ ಎನ್ನಬಹುದು.

ಇದೇ ರೀತಿ ಕೂಟದ ವಿಷಯವು ಕೂಡ. ಹುಲಿಯು ಕೆಲವೊಂದು ಋತುಗಳಲ್ಲಿ ಸಂತಾನಾಭಿವೃದ್ಧಿಗೆ ಸಿದ್ಧವಾಗುತ್ತದೆ. ಆಗ ಗಂಡುಹುಲಿಯು ಹೆಣ್ಣುಹುಲಿಗಾಗಿ ಹುಡುಕಾಡಿ, ಅವಶ್ಯಕಬಿದ್ದರೆ ಇತರ ಗಂಡುಹುಲಿಗಳೊಡನೆ ಹೋರಾಡಿ ಅವನ್ನು ಓಡಿಸಿ, ಹೆಣ್ಣಿನ ಜೊತೆಯಾಗುತ್ತದೆ, ವಂಶಾಭಿವೃದ್ಧಿ

ಮಾಡಿಕೊಳ್ಳುತ್ತದೆ. ಮರಿಗಳು ಆದಮೇಲೆ, ಒಂದಿಷ್ಟು ಕಾಲ ಹೆಣ್ಣಿನ ಮತ್ತು ಮಕ್ಕಳ ಸಂರಕ್ಷಣೆಗಾಗಿ ಅವುಗಳೊಡನೆ ಇರುತ್ತದೆ. ತಾಯಿ ಹುಲಿಯು ಬಾಣಂತಿತನವನ್ನು ಕಳೆದುಕೊಂಡು ತನ್ನ ಕೆಲಸವನ್ನು ನೋಡಿಕೊಳ್ಳುವಂತಾದಾಗ ಗಂಡು ತನ್ನ ಪಾಡಿಗೆ ತಾನು ಹೋಗುತ್ತದೆ. ಕೂಟದ ಸಂಬಂಧವು ಮುರಿದುಹೋಗುತ್ತದೆ.

ಆದರೆ ನಾಗರಿಕ ಮಾನವನಿಗೆ ಕೂಟಕ್ಕೆ ಇಂತಹದೇ ಕಾಲ ಎಂಬ ನಿಯಮವಿಲ್ಲ. ಹನ್ನೆರಡು ತಿಂಗಳೂ ಅವನಿಗೆ ಸಕಾಲವೇ. ಮದುವೆ ಎಂಬ ಸಾಮಾಜಿಕವಾದ ಕಟ್ಟಳೆ ಮಾಡಿಕೊಂಡು, ಇತರ ಗಂಡುಗಳ ಜೊತೆ ನೇರವಾಗಿ ಹೋರಾಡುವುದನ್ನು ತಪ್ಪಿಸಿಕೊಂಡಿದ್ದಾನೆ. ಹೀಗಾಗಿ ವಂಶಾಭಿವೃದ್ಧಿಗಾಗಿಯೇ ಕೂಟದ ಅಗತ್ಯ ಎನ್ನುವುದು ಕಾಡುಮೃಗಗಳಲ್ಲಿ ದಿಟವಾಗಿದ್ದರೂ, ನಾಗರಿಕ ಮಾನವನಲ್ಲಿ ಕೂಟಕ್ಕಾಗಿಯೇ ಕೂಟ ಎನ್ನುವಂತಾಗಿದೆ. ಇದಕ್ಕೆ ದೈಹಿಕ ಪ್ರೇರಣೆಯು ಎಷ್ಟು ಮುಖ್ಯವೋ ಅದಕ್ಕೂ ಹೆಚ್ಚಾಗಿ ಮಾನಸಿಕ ಪ್ರೇರಣೆಯೇ ಅತಿ ಮುಖ್ಯ. ಮಾನಸಿಕ ಪ್ರೇರಣೆಯು ಹಳೆಯ ನೆನಪಿನಿಂದಾಗಿ ಕೂಡ ಆಗಬಹುದು. ಹಲವಾರು ಬಾರಿ ನೆನಪಿನಿಂದ ಉಂಟಾಗುವ ಸಂತೋಷವು, ನೆನಪಿಗೆ ಕಾರಣವಾದ ವ್ಯಕ್ತಿಯು ದೊರಕುವಿಕೆಯಿಂದ ಉಂಟಾಗುವುದಿಲ್ಲ. ಪ್ಲೇಟೋ ಮಹಾಶಯನು ವಿವರಿಸಿದ ಈ ಮಾನಸಿಕ ಕಾರ್ಯಕ್ರಮವೇ Platonic Love ಎಂದು ಪ್ರಸಿದ್ಧಿಯಾಗಿರುವುದು.

ಮನೋದೈಹಿಕ ಬೇನೆಗಳಿಗೆ ಮುಖ್ಯವಾಗಿ ಊಟ, ಕೂಟ, ಇವೆರಡನ್ನು ಕುರಿತ ದುಗುಡವೇ ಕಾರಣ.

ಪ್ರಾಣಿಗಳ ಅಂಗಾಂಗಗಳ ಸಂತಸವನ್ನೂ ದೈಹಿಕಪೂರೈಕೆಗಳಿಂದ ಮನಸ್ಸಿನಲ್ಲುಂಟಾದ ಆನಂದವನ್ನೂ ಮನೋವೈಜ್ಞಾನಿಕ ಫ್ರಾಯ್ಡ್ (Freud) ಮಹಾಶಯನು The Pleasure Principle ಎಂದು ಕರೆದಿದ್ದನು. ID ಎಂದು ಆತ ಕರೆದಿರುವ ಬದುಕಿನ ಮೂಲಭೂತ ಪ್ರೇರಣೆಯು ಎಲ್ಲ ಪ್ರಾಣಿಗಳಲ್ಲಿಯೂ ದೈಹಿಕ ಬೇಡಿಕೆಗಳ ಪೂರೈಕೆಗೆ ಸಾಧನೆಯಾಗಿದೆ. ಮಾನವನಲ್ಲಿಯೂ ಇದು ಶಕ್ತಿಯುತವಾಗಿ ಇದ್ದೇ ಇದೆ. ಆದರೆ ಮಾನವನ ಮಾನಸಿಕ ಚಟುವಟಿಕೆಗಳು ID ಅನ್ನು, ಹತೋಟಿಯಲ್ಲಿಡಲು ಪ್ರಯತ್ನಿಸುತ್ತವೆ. ಸಾಮಾಜಿಕ ಕಟ್ಟಳೆಗಳಿಗೆ ಸರಿಯಾಗಿ ನಡೆದುಕೊಳ್ಳುವಂತೆ ID ಅನ್ನು ತಹಬಂದಿ

ಯಲ್ಲಿಡುತ್ತವೆ. ಮಾನಸಿಕ ಚಟುವಟಿಕೆಗಳು ಈ ಕಾರ್ಯದಲ್ಲಿ ಪೂರ್ಣ ಯಶಸ್ವಿಯಾದರೆ, ನಾಗರಿಕ ಮಾನವನು ಸಮಾಜದಲ್ಲಿ ಆರೋಗ್ಯದಿಂದ ಇರಲು ಸಾಧ್ಯ. ಹಾಗಾಗದೆ ಇದ್ದರೆ ಮನೋದೈಹಿಕ ಬೇನೆಗಳು ಕಾಣಿಸಿಕೊಳ್ಳುತ್ತವೆ.

ನಾಗರಿಕ ಮಾನವನ ಮಾನಸಿಕ ಚಟುವಟಿಕೆಗಳೆಲ್ಲವೂ ಸಮಸಮನಾಗಿ ಮುಂದುವರಿದರೆ, ನಿಃಸ್ವಾರ್ಥಿಯಾದ ಕುತೂಹಲವೂ ಅನುಕಂಪವೂ ಸಮಸಮನಾಗಿ ನಡೆದರೆ, ಆಗ ಆರೋಗ್ಯವು ಸ್ವತಃಸಿದ್ಧ. ಆದರೆ ಈಗಿನ ಮಾನವನ ಪ್ರಗತಿಯಲ್ಲಿ ಕುತೂಹಲವನ್ನು ಕೆರಳಿಸುವ ಅಥವಾ ಸ್ವಾರ್ಥಿಯಾದ ಮಾನಸಿಕ ಚಟುವಟಿಕೆಗಳಿಗೆ ಅತಿಯಾಗಿ ಉತ್ತೇಜನವು ದೊರಕಿದೆ. ಅನುಕಂಪದ, ಮನಸ್ಸಿಗೆ ಸಮಾಧಾನವನ್ನು ಕೊಡುವ ಮಾನಸಿಕ ಚಟುವಟಿಕೆಗಳು ತೆರೆಮರೆಯಾಗಿವೆ. ಹಾಗಾಗಿ ಮನೋದೈಹಿಕ ಬೇನೆಗಳು ಹೆಚ್ಚುಹೆಚ್ಚಾಗುವುದನ್ನು ನಿರೀಕ್ಷಿಸಲೇಬೇಕು.

ಅಂದಮೇಲೆ, ದೇಹ, ಮನಸ್ಸು ಇವೆರಡನ್ನೂ ಕಾರ್ಯೋನ್ಮುಖವಾಗುವಂತೆ ಪ್ರೇರಿಸುವ ಮೂಲಭೂತ ಕಾರಣ 'ಆನಂದ' ಎನ್ನಬಹುದು. ದೈಹಿಕ ಆನಂದವು ದೊರಕಿದಾಗ ಸಂತಸ ಸಮಾಧಾನಗಳು ಉಂಟಾಗುತ್ತವೆ. ನೋವು, ಉರಿ, ತುರಿಕೆ, ಮೊದಲಾದ ದುಃಖದ ರೂಪಗಳು ಮಾಯವಾಗುತ್ತವೆ. ಮಾನಸಿಕ ಆನಂದವು ದೊರಕಿದಾಗಲೂ ಸಂತೋಷ, ಸಮಾಧಾನಗಳು ಉಂಟಾಗುತ್ತವೆ ; ಆತಂಕ, ಕೋಪ, ಭಯ, ದುಗುಡ ಮೊದಲಾದ ದುಃಖದ ರೂಪಗಳು ಮಾಯವಾಗುತ್ತವೆ.

ಆದರೆ ನಿಃಸ್ವಾರ್ಥಿಯಾದ ಪ್ರಜ್ಞಾಪ್ರೇರಿತ ಮಾನಸಿಕ ಚಟುವಟಿಕೆಯಿಂದ ದೊರಕುವ ಆನಂದವು ಬೇರೆ ರೀತಿಯದು. ದೈಹಿಕ ಆನಂದ ದೊರೆತಾಗ ದುಃಖದ ರೂಪಗಳು ಮಾಯವಾಗಿ ಸಮಾಧಾನ ದೊರೆಯುತ್ತದೆ. ಮಾನಸಿಕ ಆನಂದ ಉಂಟಾದಾಗಲೂ ದುಃಖದ ರೂಪಗಳು ಮಾಯವಾಗಿ ಸುಖ ಉಂಟಾಗುತ್ತದೆ. ಅಂದರೆ ದ್ವಂದ್ವದ ಒಂದು ಮುಖ ಮರೆಯಾಗಿ, ಇನ್ನೊಂದು ಮುಖ ಕಾಣಿಸುತ್ತದೆ.

ಪ್ರಜ್ಞಾಪ್ರೇರಿತವಾದ ಮಾನಸಿಕ ಆನಂದ ದೊರೆತಾಗ, ಯಾವ ದ್ವಂದ್ವದ ಘರ್ಷಣೆಯೂ ಇರುವುದಿಲ್ಲ. ಯಾವ ಸ್ವಾರ್ಥದ ಉದ್ದೇಶದಿಂದಲೂ ಪ್ರೇರಿತವಾಗಿಲ್ಲದಿರುವುದರಿಂದ ಈ ಆನಂದವು, ದೇಹ ಮನಸ್ಸುಗಳಲ್ಲಿ ಅನುಭವಿಸ

ಲ್ಪಟ್ಟಂತೆ ಕಂಡರೂ, ದೇಹ ಮನಸ್ಸು ಇವೆರಡರಿಂದ ಹೊರತಾದುದು ಎಂದೂ ಅನ್ನಬಹುದು. ಅಲ್ಲದೆ ಇದರ ಒಂದು ಕಿರಿಯ ಅಂಶವೇ ದೈಹಿಕ ಆನಂದವಾಗಿಯೂ, ಇನ್ನೊಂದು ಸಣ್ಣ ಅಂಶವೇ ಮಾನಸಿಕ ಆನಂದವಾಗಿಯೂ ಕಾಣಿಸಿಕೊಳ್ಳುತ್ತದೆ ಎಂದೂ ಅನ್ನಬಹುದು. ಏಕೆಂದರೆ ಪ್ರಜ್ಞಾಪ್ರೇರಿತವಾದ ಮನಸ್ಸಿಗೆ ಆನಂದವು ಉಂಟಾದಾಗ, ಆತನು ತನ್ನ ಮೈಯನ್ನು ಮರೆಯುಬಹುದು. ರೂಢಿಸಿಕೊಂಡು ಬಂದ ಮನಸ್ಸಿನ ಸಾಮಾಜಿಕಕಟ್ಟು ನಡವಳಿಕೆಗಳನ್ನು ಮರೆಯುಬಹುದು. ಹಾಗೆ ಮರೆತು ಹುಚ್ಚನಂತೆ ಆಡಬಹುದು.

ಉದಾಹರಣೆಗೆ: ಆರ್ಕಿಮಿಡೀಸ್ ಮಹಾಶಯನಿಗೆ ಕುತೂಹಲವು ಕೆರಳಿತ್ತು. ಯಾವುದೋ ಸಮಸ್ಯೆಯು ಅವನ ಮನಸ್ಸನ್ನು ಹಿಡಿದು ಕಾಡುತ್ತಿತ್ತು. ಒಂದು ದಿನ ಸ್ನಾನಮಾಡುತ್ತಿದ್ದಾಗ ಆ ಸಮಸ್ಯೆಯನ್ನು ಪರಿಹರಿಸುವ ವಿಧಾನವು ಅವನಿಗೆ ಹೊಳೆಯಿತು. ಆನಂದದಿಂದ ಅವನು 'ಯುರೇಕಾ' ಎಂದು ಕೂಗಿಕೊಂಡು, ಸ್ನಾನಮಾಡುತ್ತಿದ್ದವನು ಹಾಗೆಯೇ ಹುಚ್ಚುಹುಚ್ಚಾಗಿ ಓಡಿಬಿಟ್ಟ ಎಂದು ಕೇಳಿದ್ದೇವೆ. ಪ್ರಜ್ಞಾಪ್ರೇರಿತವಾದ ಮಾನಸಿಕ ಚಟುವಟಿಕೆಯಲ್ಲಿ ಅವನ ಮನಸ್ಸು ತೊಡಗಿದ್ದಾಗ, ಸಮಸ್ಯೆ ಪರಿಹಾರವಾದಾಗ, ಅವನಿಗೆ ಆನಂದವೂ ಉಕ್ಕಿಬಂತು. ಆಗ ಹುಚ್ಚುಹುಚ್ಚಾಗಿ ಕೂಗುತ್ತ ಓಡಿದಾಗ ಅವನು ಮೈಮರೆತಿದ್ದ. ಸಮಾಜದಲ್ಲಿನ ಸಭ್ಯವರ್ತನೆಗಳು ಅವನ ಮನಸ್ಸಿನಲ್ಲಿ ರೂಢಿಯಾಗಿದ್ದರೂ ಅವನ್ನೂ ಮರೆತ. ಹುಚ್ಚುಆನಂದದಿಂದ ಓಡಿದ.

ಪ್ರಪಂಚದಲ್ಲಿ ಈ ತನಕ ಲೆನಾರ್ಡೊ ಡ ವಿಂಚಿಯ ತರಹ ಪ್ರಾಜ್ಞನು ಇನ್ನೊಬ್ಬ ಬಹುಶಃ ಜನಿಸಿಲ್ಲ. ಈ ಮೇಧಾವಿಯು ಹಕ್ಕಿಗಳ ಹಾರಾಟವನ್ನು ವೀಕ್ಷಿಸುತ್ತಿದ್ದ. ಮನುಷ್ಯನು ತಾನೂ ಪಕ್ಷಿಯಂತೆ ಹಾರಬೇಕಾದರೆ ಏನೇನು ಮಾಡಬೇಕು ? ರೆಕ್ಕೆಗಳನ್ನು ಹೇಗೆ ರಚಿಸಿಕೊಳ್ಳಬೇಕು ? ಇತ್ಯಾದಿ ಕುತೂಹಲದಿಂದ ಯೋಚಿಸುತ್ತಿದ್ದ. ಪಕ್ಷಿಗಳ ಹಾರಾಟವನ್ನು ಆ ಕಾರಣದಿಂದ ನೋಡುತ್ತಿದ್ದ. ನೋಡಿ ಕಲಿತಿದ್ದನ್ನು ಷರಾ ಬರೆದುಕೊಳ್ಳುತ್ತಿದ್ದ. ಹೇಗೆ ಬರೆದುಕೊಳ್ಳುತ್ತಿದ್ದ ಗೊತ್ತೇ ? ಕನ್ನಡಿಯಲ್ಲಿ ಅಕ್ಷರಗಳು ಕಾಣಿಸುವುದಿಲ್ಲವೇ, ಆ ರೀತಿ ಯಾರಿಗೂ ಅರ್ಥವಾಗದಂತೆ ಪಕ್ಕಅಕ್ಕ ಮಾಡಿ ಬರೆದಿಡುತ್ತಿದ್ದ. ಕಾರಣ ಇಷ್ಟೇ ! ಊರಿನ ಜನರೆಲ್ಲ ಅವನಿಗೆ ಹುಚ್ಚು ಅಂತ ಅನುಮಾನಪಡುತ್ತಿದ್ದರು.

ಪಕ್ಷಿಗಳ ಹಾರಾಟದ ಷರಾ ಬರೆದುಕೊಂಡ ಅಂದರೆ 'ಇದರಿಂದ ಏನು ಪ್ರಯೋಜನ? ಇವ ದಿಟವಾಗಿಯೂ ಹುಚ್ಚ' ಎಂದು ಎಲ್ಲಿ ಅನ್ನುತ್ತಾರೋ ಎಂಬ ಭಯದಿಂದ.

ಅಂದರೆ ಈ ರೀತಿಯ ಆನಂದವನ್ನು ಅನುಭವಿಸುವವರು ಇತರ ಸಾಮಾನ್ಯಜನರ ಕಣ್ಣಿಗೆ ಹುಚ್ಚರಂತೆಯೇ ಆ ಕಾಲದಲ್ಲಿ ಕಾಣಿಸಬಹುದು.

ಪ್ರಜ್ಞಾಪ್ರೇರಿತವಾದ ಭಾವನಾಚಟುವಟಿಕೆಯಲ್ಲಿ ಕೂಡ ಆನಂದವು ದೊರೆತಾಗ, ಆ ಕಾಲದಲ್ಲಿ ಅನುಕಂಪದ ಹೊಳೆ ಹರಿದಾಗ, ಅಂತಹವರು ಕೂಡ ತಮ್ಮ ಮೈಯನ್ನೂ ಮನಸ್ಸಿನ ಸಾಮಾನ್ಯ ಚಟುವಟಿಕೆಗಳನ್ನೂ ಮರೆತಿರುತ್ತಾರೆ. ಕವಿಗಳೂ ಕಲಾವಿದರೂ ಸಮಾಜದಲ್ಲಿ ಎದ್ದುಕಾಣುವಂತೆ ನಡೆದುಕೊಳ್ಳುವುದೂ ಈ ಕಾರಣದಿಂದಲೇ.

ಗಂಡು ಹೆಣ್ಣು ಕೂಡಿದ್ದಾಗ
ತಾಯಿ ಕೂಸ ನೋಡಿದಾಗ
ಜೀವ ಸೆಲೆಯ ತೋಡಿದಾಗ
ಬಹನೇ ಕೈ ತಾ !

ಎಂದು ಬೇಂದ್ರೆಯವರು ಹಾಡಿದಾಗ. ಗಂಡುಹೆಣ್ಣೊಲವನ್ನು ಕಂಡು ಮೈಮನ ಮರೆಯುವ ಚಟುವಟಿಕೆಯನ್ನು ಮಾನಸಿಕವಾಗಿ ಅನುಕಂಪದಿಂದ ನೋಡಿ ತಾವೂ 'ಆನಂದ'ದಿಂದ ತುಂಬಿದ್ದಿರಬೇಕು. ಗಂಡುಹೆಣ್ಣೊಲವಿನ ಆನಂದವೇ ಒಂದು ರೀತಿ. ಅದನ್ನು ಊಹಿಸಿ ಆನಂದಪಡುವ ಕವಿಯು ಪ್ರಜ್ಞಾಪ್ರೇರಿತವಾದ ಆನಂದವನ್ನು ಅನುಭವಿಸುತ್ತಾನೆ. ತಾಯಿ ಕೂಸನ್ನು ಒಲವಿನಿಂದ ನೋಡುವಾಗ ಆನಂದಿಸುತ್ತಾಳೆ, ದಿಟ. ತನ್ನ ಮಗುವಾದರೂ ಆಯಿತು, ಯಾರ ಮಗುವಾದರೂ ತನ್ನದೆಂಬ ಭಾವನೆ ಉಕ್ಕಿಬಂದು ಆ ರೀತಿ ಆಕೆಯು ಆನಂದಪಡಬಹುದು. ಅದರಲ್ಲಿ 'ಆಕೆಯು' ಎಂಬುದೇ ಮುಖ್ಯಪಾತ್ರ ವಹಿಸುತ್ತದೆ. ಆದರೆ ಕವಿ ತಾನು ತಾಯಿಯೂ ಅಲ್ಲ, ಮಗುವೂ ಅಲ್ಲ. ಆದರೂ ಆ ಆನಂದವನ್ನು ಕಂಡು, ಆ ಒಲವಿನ ಜೊತೆಗೂ ಅನುಸರಿಸಿ ಕಂಪಿಸುವ ಅನುಕಂಪಿಸುವ, ಕವಿಯು ಆನಂದಪಡುವಾಗ ತಾನು ಎಂಬುದೇ ಮರೆತುಹೋಗಿರುತ್ತೆ. ಕವಿಗಳಾದರೂ ಕಂಡ ದೃಶ್ಯಗಳಿಗೆಲ್ಲಾ ಅನುಕಂಪ ತೋರಲು ಅಸಾಧ್ಯ. ತೋರಿದಾಗ ಹಾಡಿಯೇಹಾಡುತ್ತಾರೆ. ಸ್ಫೂರ್ತಿ ಬಂದಿತು ಎನ್ನುತ್ತಾರೆ. ಅಂದರೆ

ಅವರುಗಳಿಗೂ ಪ್ರಜ್ಞಾಪ್ರೇರಿತವಾದ ಮಾನಸಿಕ ಚಟುವಟಿಕೆಯು ಆನಂದವನ್ನು ಕೊಡುವುದು ಆಗಿಂದಾಗ್ಗೆಯೆ ಹೊರತು ಯಾವಾಗಲೂ ಅಲ್ಲ.

ಜೀವನದ ಗಹನವಾದ ವಿಷಯುಗಳನ್ನು ಕುರಿತು, ಅನುಕಂಪ ಉಂಟಾದಾಗ, ಕವಿಯು ಹಾಡುತ್ತಾನೆ. ಆದರೆ ಸಮಾಜದಲ್ಲಿ ತಲೆಯೆತ್ತಿ ಸರ್ವವ್ಯಾಪಿಯಾಗಿರುವ ಲಂಚಕೋರರಲ್ಲೂ ಅನುಕಂಪ ತೋರಿಸಬಹುದು. ಲಂಚ ಕೊಡುವವರೂ ತೆಗೆದುಕೊಳ್ಳುವವರೂ ಇಬ್ಬರೂ ಸಮಾಜದ ಕಟ್ಟಳೆ ನಿಯಮಗಳನ್ನು ಮುರಿದಿರುತ್ತಾರೆ. ಎಷ್ಟೋ ವೇಳೆ ಸಮಾಜದ ಕಟ್ಟಳೆ ನಿಯಮಗಳನ್ನು ಅನುಸರಿಸಿಯೇ ಕೊಳ್ಳೆಹೊಡೆಯುವವರಿಲ್ಲವೆ? ಅವರನ್ನು ನೋಡಿ ಇವರು ಲಂಚಕೋರರಾಗಿರಬಹುದು; ದಾರಿದ್ರ್ಯದಿಂದಾಗಿರಬಹುದು. ಅವರು ಹಾಗಾಗಲು ಸಮಾಜವೇ ಕಾರಣ ಎಂದು ಅನ್ನಿಸಿದಾಗ ಲಂಚಕೋರರಲ್ಲಿಯೂ ಅನುಕಂಪ ತೋರುವಂತೆ ಕವಿಗೆ ಆಗಬಹುದು. ಆಗ ಆತನು ಅಣಕವಾಡುಗಳನ್ನು ಹಾಡುತ್ತಾನೆ, ಆನಂದಪಡುತ್ತಾನೆ. ಪ್ರಜ್ಞಾಪ್ರೇರಿತವಾದ ಮಾನಸಿಕ ಆನಂದವನ್ನು ಪಡೆಯುತ್ತಾನೆ. ಅವನಿಗೂ ವೈಮನಸ್ಯಗಳು ಆ ಕಾಲದಲ್ಲಿ ಮರೆತಿರುತ್ತವೆ.

ಅಂದರೆ, ಭಾವನಾಚಟುವಟಿಕೆಗಳ ಪ್ರಜ್ಞಾಪ್ರೇರಿತವಾದ ಆನಂದವು ಸುಮಾರು ಜನರಲ್ಲಿ ತುಸು ಕಾಲವಾದರೂ ಆಗಿರಲೇಬಹುದು. ದೈಹಿಕ ಆನಂದವನ್ನು ಎಲ್ಲ ಪ್ರಾಣಿಗಳೂ, ಹಾಗೂ ಮಾನವರೂ ಅನುಭವಿಸಿಯೆ ಇರುತ್ತಾರೆ. ಮಾನಸಿಕ ಆನಂದವನ್ನು, ಜೀವನಪ್ರಗತಿಯಲ್ಲಿ ಮುಂದುವರಿದ ಪ್ರಾಣಿಗಳು ಹಾಗೂ ಮಾನವರು ಅನುಭವಿಸುತ್ತಾರೆ. ಪ್ರಜ್ಞಾಪ್ರೇರಿತವಾದ ಚಟುವಟಿಕೆಗಳು ಮಾನವನಲ್ಲಿ ಮಾತ್ರ ಕಂಡುಬಂದಿರುವುದರಿಂದ, ಈ ರೀತಿಯ ಆನಂದವನ್ನು ಮಾನವರಲ್ಲಿ ಮುಂದುವರಿದವರು ಸ್ವಲ್ಪಕಾಲವಾದರೂ ಅನುಭವಿಸಿಯೇ ಇರುತ್ತಾರೆ. ಇಂತಹ ಮುಂದುವರಿದ ಅಲ್ಪಸಂಖ್ಯಾತ ಮಾನವರಲ್ಲಿ ಹಲವಾರು ಜನರು ಈ ಆನಂದವನ್ನು ಹೆಚ್ಚು ಕಾಲ ಅನುಭವಿಸುತ್ತಾರೆ. ಅಂತಹವರು ಹುಚ್ಚರಂತೆ ನಡೆದುಕೊಳ್ಳುವುದೂ ಉಂಟು. ಆದರೂ ಜನರು ಇಂತಹವರನ್ನು ಕಾರಣ ತಿಳಿಯದಿದ್ದರೂ ಆರಾಧಿಸುವುದೂ ಉಂಟು. ರಾಮಕೃಷ್ಣ ಪರಮಹಂಸ, ಅಕ್ಕಮಹಾದೇವಿ, ನಂದನಾರ್ ಮೊದಲಾದವರು ಆ ಆನಂದವನ್ನೇ ತಮ್ಮ ಗುರಿಯಾಗಿ ಮಾಡಿಕೊಂಡು ಜೀವನವನ್ನು ಸಫಲಮಾಡಿಕೊಂಡರು.

ಪ್ರಾಣಿಗಳು, ಅವುಗಳಲ್ಲೊಂದಾದ ಮಾನವ, ಇವರುಗಳ ವಿಷಯವನ್ನೇ ಮನನಮಾಡಿದ್ದೇವೆ. ಇತರ ಜೀವಂತವಸ್ತುಗಳಾದ ಸಸ್ಯವರ್ಗದವುಗಳಿಗೆ ಮನಸ್ಸಿದೆಯೆ ? ಇದ್ದರೆ ಅದು ಯಾವ ರೀತಿಯಲ್ಲಿ ಕೆಲಸಮಾಡುತ್ತದೆ ? ಅದರ ಸ್ವರೂಪವೇನು ? ಎಂಬುದೊಂದೂ ನಮಗೆ ತಿಳಿದಿಲ್ಲ. ಅವುಗಳಿಗೆ ಮನಸ್ಸೇ ಇಲ್ಲ ಎಂದು ಹೇಳಲೂ ಬರುವುದಿಲ್ಲ.

ಅದೇ ರೀತಿಯಲ್ಲಿ ನಿರ್ಜೀವವಸ್ತುಗಳು ಎಂದು ನಾವು ಕರೆಯುವ ಕಲ್ಲು ಮಣ್ಣು ಗುಡ್ಡ ಬೆಟ್ಟಗಳಿಗೆ ಮನಸ್ಸಿದೆಯೆ ? ಇದ್ದರೆ, ಅದರ ಸ್ವರೂಪವೇನು ಎಂದು ಹೇಳಲು ಏನೂ ಸಾಕ್ಷ್ಯಗಳಿಲ್ಲ.

ಆದರೆ ಬಳ್ಳಿಯು ಹೂ ಬಿಟ್ಟಾಗ ಆನಂದಪಡಬಹುದು. ಬೆಟ್ಟದ ಮೇಲಿನ ಕಲ್ಲು, ಮಳೆ ಬಂದಾಗ ಜಾರಿ, ನದಿಗೆ ಬಿದ್ದು ಗುಂಡುಗುಂಡಾದ ಸಾಲಿಗ್ರಾಮವಾದಾಗ, ಅದೂ ಆನಂದಪಡುತ್ತೋ ಏನೋ ! ಏಕೆಂದರೆ, ಆಗ ಅದನ್ನು ಆರಾಧಿಸಿ ಎಷ್ಟೋ ಜನರು ಆನಂದಪಡುತ್ತಾರೆ. ಮಳೆ ಬಿದ್ದಾಗ ಮೋಡಕ್ಕೆ ಆನಂದ. ಮಿಂಚು ಹೊಳೆದಾಗ ಎರಡೂ ಮೋಡಗಳಿಗೆ ದೇಹಾನಂದ. ನದಿಯು ಹರಿದಾಗ ಅದಕ್ಕೂ ಆನಂದ. ಹೀಗೆ ಪ್ರಕೃತಿಯ ಎಲ್ಲ ರೂಪ ಗಳಿಗೂ ಆನಂದವು ಸ್ವತಃಸಿದ್ಧವಿರಬಹುದೋ ಏನೋ.

ಅಂದಮೇಲೆ ಆನಂದವನ್ನು ದೈಹಿಕವಾಗಿ ಹಾಗೂ ಮಾನಸಿಕವಾಗಿ ಅನುಭವಿಸುವುದೇ ಪ್ರಾಣಿಗಳ ಗುರಿ ಎಂದಂತಾಯಿತು. ಮಾನಸಿಕ ನಿಸ್ವಾರ್ಥೀ ಚಟುವಟಿಕೆಯು ಅನುಕಂಪದಿಂದ ಪ್ರೇರಿತವಾದಾಗ ಆನಂದಾನುಭವವು ಉಂಟಾಗುತ್ತದೆ. ಆದರೆ ಅನುಕಂಪದಿಂದ ಉಂಟಾದ ಆನಂದವು ಹೆಚ್ಚು ಕಾಲ ಉಳಿದೀತು. ಕುತೂಹಲದಿಂದ ಉಂಟಾದ ಆನಂದವು ಸ್ವಲ್ಪಕಾಲ ಮಾತ್ರ ಉಳಿದೀತು, ಎಂದು ಹೇಳಬಹುದು.

ದೇಹಾನಂದವು ವ್ಯಾವಹಾರಿಕವಾಗಿ ದಿನಂಪ್ರತಿ ಕಾಣಬಹುದಾದುದು. ದೇಹಾನಂದದಿಂದ ಉಂಟಾದ ಮಾನಸಿಕ ಆನಂದವೂ ವ್ಯಾವಹಾರಿಕವಾಗಿ ದಿನವೂ ಕಾಣಿಸುತ್ತದೆ. ಆದರೆ ಕುತೂಹಲದಿಂದ ಅಥವಾ ಅನುಕಂಪದಿಂದ ಉಂಟಾದ ಆನಂದವು, ತಾನು ಬಂದಾಗ ಬರುತ್ತದೆ. ಅದು ನಮ್ಮ ಅಧೀನಕ್ಕೆ ಒಳಪಟ್ಟಿಲ್ಲ, ಎಂದೂ ಅನ್ನಬಹುದು.

## ಅಧ್ಯಾಯ ನಾಲ್ಕು

# ಸೌಂದರ್ಯಾನ್ವೇಷಣೆ

ಹುಲಿಗೆ ಹಸಿವಾಯಿತು. ಆಗ ಬೇಟೆಯಾಡಿ, ಸಿಕ್ಕಿದ ದನವನ್ನು ತಿನ್ನುತ್ತದೆ. ಅದರ ದೇಹ ಮನಸ್ಸು ಎರಡೂ ಆನಂದದಿಂದ ತುಂಬುತ್ತದೆ. ಆದರೆ ಹುಲಿಯು 'ನನಗೆ ಚೆಂದ ಕಾಣಿಸುವ ಬಿಳಿಹಸುವೇ ಊಟಕ್ಕೆ ಬೇಕು' ಎಂದು ಒದ್ದಾಡುವುದಿಲ್ಲ. ಆದರೆ ನಾಗರಿಕ ಮಾನವನು ಊಟಕ್ಕೆ ಕುಳಿತಾಗ, 'ಚಿತ್ರ ರಚಿಸಿದಂತಿರುವ ಚಿತ್ರಾನ್ನವೇ ಬೇಕು, ಚೆಂದ ಕಾಣುವ ಚಿರೋಟಿಯೇ ಬೇಕು, ಬಾಳೆಲೆಯಲ್ಲೇ ಉಣ್ಣಬೇಕು,' ಎಂದು ಬಯಸುತ್ತಾನೆ. ಇಂದಿನ ಮಾನವನ ಊಟವು ಕಣ್ಣಿಗೆ ಚೆಂದ ಕಾಣಿಸಬೇಕು. ಆಗಲೇ ಅವನು ಮಾನಸಿಕವಾಗಿ ಹಸಿವನ್ನು ಹೊಂದುವುದು.

'ನರಭಕ್ಷಕ ಹುಲಿಗಳಿಲ್ಲವೆ ? ಅವು ದನಕರುಗಳನ್ನು ಬಿಟ್ಟು ಮನುಷ್ಯನನ್ನೇ ತಿನ್ನಲು ಹವಣಿಸುವುವಲ್ಲ ?' ಎನ್ನಬಹುದು. ಯಾವುದಾದರೂ ಕಾರಣದಿಂದ, ಕುಂಟಾಗಿಯೋ, ಮುಳ್ಳು ಚುಚ್ಚಿಕೊಂಡೋ, ಎಂದಿನಂತೆ ಓಡಿ ಛಂಗಿ ಬೇಟೆಯಾಡಲು ಸಾಧ್ಯವಾಗದಿದ್ದಾಗ, ಹುಲಿಗಳು ಸುಲಭವಾಗಿ ಸಿಕ್ಕುವ ಮನುಷ್ಯನನ್ನು ಹಿಡಿದು ತಿನ್ನುತ್ತವೆ. ಒಂದು ಸಾರಿ, ಇಷ್ಟು ಸುಲಭವಾಗಿ ಬೇಟೆ ಸಿಕ್ಕುತ್ತದೆ ಎಂದು ತಿಳಿದಾಗ, ಅಲ್ಲಿಂದ ಮುಂದೆ ಅದು ನರಭಕ್ಷಕವಾಗುತ್ತದೆ ಎಂದು ವನ್ಯಮೃಗ ಪರಿಣತರು ಹೇಳಿದ್ದಾರೆ. ಅಲ್ಲದೆ ಮನುಷ್ಯನನ್ನು

ಬೇಟೆಯಾಡುವಾಗ, ಸಿಕ್ಕಿದವನನ್ನು ದಕ್ಕಿಸಿಕೊಳ್ಳುತ್ತದೆಯೇ ಹೊರತು, ಚೆಂದುಳ್ಳಿ ಮೀಸೆ ಇರುವ ಯುವಕನನ್ನೇ ಆರಿಸುವುದಿಲ್ಲ. ದುಂಡುದುಂಡಾಗಿ ಬೆಳೆದ ಮನುಷ್ಯನೇ ಬೇಕು ಎಂದು ಕಾಯುವುದಿಲ್ಲ ಸುಲಭವಾಗಿ ಸಿಕ್ಕುವ ಬೇಟೆಯನ್ನು ಅರಸುತ್ತದೆ. ತನಗೆ ಅಪಾಯವಿಲ್ಲದಿರುವ ರೀತಿಯಲ್ಲಿ ಬೇಟೆ ಯಾಡುತ್ತದೆಯೇ ಹೊರತು, ಚೆನ್ನು ಚಾರ ಎಂದು ನೋಡುವುದಿಲ್ಲ.

ಹುಲಿಗೂ ನಾಗರಿಕ ಮಾನವನಿಗೂ ಇರುವ ಈ ವ್ಯತ್ಯಾಸವು ಪ್ರಕೃತಿಯಲ್ಲಿ ಅವುಗಳಿಗೆ ಸ್ವಾಭಾವಿಕವಾದ ರಕ್ಷಣಾಮಾರ್ಗಗಳಿಂದಲೇ ಉಂಟಾಗಿರುವುದು. ಹುಲಿಯು ಸಾಮಾನ್ಯವಾಗಿ ಒಂಟಿಯಾಗಿ ಬೇಟೆಯಾಡುತ್ತದೆ. ಆದರೆ ದನಗಳು, ಕೋತಿಗಳು, ಸೀಳುನಾಯಿಗಳು ರಕ್ಷಣೆಗಾಗಿ ಗುಂಪು ಕಟ್ಟಿಕೊಂಡು, ಸಮಾಜವನ್ನು ರಚಿಸಿಕೊಂಡೇ ಆಹಾರವನ್ನು ಹುಡುಕುತ್ತವೆ. ಆದರೆ ಇವು ಯಾವುದೂ ನಾಗರಿಕ ಮಾನವನಂತೆ, ನೂರಾರು ತಲೆಮಾರಿನ ಸಹಸ್ರಾರು ಪಿತೃಗಳ ಅನುಭವವನ್ನು ರೂಢಿಸಿಕೊಂಡು ರಕ್ಷಣೆಯನ್ನು ರಚಿಸಿಕೊಂಡಿಲ್ಲ. ಹಾಗಾಗಿ ಅವುಗಳು ಗುಂಪು ಕೂಡಿಕೊಂಡಿದ್ದರೂ, ಆನುವಂಶಿಕವಾಗಿ ಕಲಿತು ತಮಗೆ ಒಳ್ಳೆಯದೆಂದು ಕಂಡುಬಂದ ಆಹಾರವನ್ನು ತಿನ್ನುತ್ತವೆಯೇ ಹೊರತು. ಆ ಆಹಾರದಲ್ಲಿ ಚೆನ್ನ ಚಾರ ನೋಡುವುದಿಲ್ಲ. ಸಿಕ್ಕಿದ ಹುಲ್ಲನ್ನು ಹಸು ತಿನ್ನುತ್ತದೆಯೇ ಹೊರತು, ಗರಿಕೆಯೇ ಬೇಕು ಎಂದು ಕಾಯುವುದಿಲ್ಲ

ಆದರೆ ನಾಗರಿಕ ಮಾನವನು, ಚೆನ್ನ ಯಾವುದು? ರುಚಿ ಯಾವುದು? ಎಂದು ಅನುಭವದ ನೆನಪಿನಿಂದ ತಿಳಿಯುತ್ತಾನೆ. ಅದಕ್ಕಾಗಿಯೇ ಕಾಯುತ್ತಾನೆ. ತುಂಬಾ ಹಸಿವಾದಾಗ, ಹೊಟ್ಟೆಯು ಉರಿಬಿದ್ದಾಗ ಮಾತ್ರ, ಪ್ರಾಣಿಗಳಂತೆ ಏನು ಸಿಕ್ಕಿದರೂ ತಿನ್ನುತ್ತಾನೆ. 'ತನ್ನವರನ್ನೇ ತಿನ್ನುತ್ತಾನೆ' ದಿಟ. ಆದರೆ ನಾಗರಿಕ ಮಾನವನು ಆಹಾರದ ಏರ್ಪಾಡನ್ನು ತಕ್ಕಷ್ಟು ಸುವ್ಯವಸ್ಥೆಯಿಂದ ನಡಸಿಕೊಂಡಿರುವುದರಿಂದ. 'ಆಹಾರದಲ್ಲಿ ಚೆನ್ನಾಗಿ ಕಾಣಿಸುವುದು ಯಾವುದು? ರುಚಿಯಾಗಿರುವುದು ಯಾವುದು? ಘಂ ಅಂತ ವಾಸನೆ ಯಾತರಲ್ಲಿ ಬರುತ್ತದೆ? ಮುಟ್ಟಿದರೆ ಹಿತವಾಗಿ ಮೆದುವಾಗಿರುವುದು ಯಾವುದು? ಎಂದೆಲ್ಲ ಯೋಚಿಸಿ ಅಂಥವುಗಳನ್ನೇ ಹುಡುಕುತ್ತಾನೆ. ಅಂದರೆ ಆಹಾರದಲ್ಲಿ ಸೌಂದರ್ಯವನ್ನು ಹುಡುಕುತ್ತಾನೆ.

ಹೊರಗಿರುವ ವಸ್ತುಗಳ ಅರಿವು ಪಂಚೇಂದ್ರಿಯಗಳ ಮೂಲಕ ನಮಗೆ ಉಂಟಾಗಬೇಕು. ಬಾಲ್ಯದಲ್ಲಿ ತಿಂದಿದ್ದ ಯಾವುದಾದರೂ ವಸ್ತುವು ಸುಖದ ಅನುಭವವನ್ನು, ತುಸು ಆನಂದವನ್ನು ಕೊಟ್ಟಿದ್ದರೆ, ಆ ಅನುಭವವು ನೆನಪಾಗಿ ಉಳಿಯುವಾಗ, ಪಂಚೇಂದ್ರಿಯಗಳ ಅನುಭವಗಳನ್ನೂ ಜೊತೆಜೊತೆಯಲ್ಲೇ ಉಳಿಸಿಕೊಳ್ಳುತ್ತದೆ. ಘಂ ಎಂದು ವಾಸನೆ ಬಂದಾಗ, ಅಂತಹ ವಾಸನೆಯಿದ್ದ ಪದಾರ್ಥಗಳು ಹಿಂದೆಂದೋ ಸೇವಿಸಲ್ಪಟ್ಟಾಗ ಆನಂದದಾಯಕವಾಗಿದ್ದಿರಬೇಕು, ಸುಖದಾಯಕವಾಗಿದ್ದಿರಬೇಕು. ಆದುದರಿಂದಲೇ ಘಂ ವಾಸನೆ ಬಂದರೆ ಸಾಕು, ಅವನಿಗೆ ತುಸು ಸುಖ ಉಂಟಾಗುತ್ತದೆ. ಅದೇ ರೀತಿ ಇತರ ಇಂದ್ರಿಯಗಳ ಅನುಭವಗಳು ಕೂಡ.

ಹಾಗಾಗಿ, ಸುಂದರ ಎಂದು ನಾವು ಕರೆಯುವ ವಸ್ತುವು ಸುಖ ಕೊಟ್ಟ ಹಳೆಯ ನೆನಪುಗಳಿಂದ ಮೆರಗುಹೊಂದಿದೆ. ಅದು ಪಂಚೇಂದ್ರಿಯಗಳ ಅನುಭವಗಳನ್ನೂ ಶೇಖರಿಸಿಟ್ಟುಕೊಂಡೇ ಇದು ಸಾಧ್ಯವಾಗಿದೆ ಎನ್ನಬಹುದು.

ಆಗುಂಬೆಯಲ್ಲಿ ಮುಳುಗುವ ಸೂರ್ಯನನ್ನು ಹಿಂದೆಂದೂ ನೋಡದವರು ಕೂಡ ಮೊದಲ ಬಾರಿ ನೋಡಿದಾಗ 'ಎಷ್ಟು ಸುಂದರ!' ಎಂದು ಉದ್ಗಾರ ತೆಗೆದು ಆನಂದಿಸುತ್ತಾರೆ. ರವಿಯ ಸಂಧ್ಯಾರಾಗದ ಕಣ್ಸೆಳೆವ ಬಣ್ಣಗಳೊಂದೇ ಈ ರೀತಿಯ ಆನಂದಾನುಭವಕ್ಕೆ ಕಾರಣ. ಹಳೆಯ ನೆನಪುಗಳ ಸಾಧ್ಯತೆ ಯಿಲ್ಲವಲ್ಲ. ಆದರೂ ಆನಂದವನ್ನುಂಟುಮಾಡಿತಲ್ಲವೆ ? ಇದು ಯಾವ ತೆರನ ಸೌಂದರ್ಯ ?

ಉಡಿಗೆ ತೊಡಿಗೆ, ಊಟ ಕೂಟ ಇತ್ಯಾದಿ ಸ್ವಾರ್ಥೀ ಅನುಭವಗಳಲ್ಲಿ 'ಸೌಂದರ್ಯ' ಎನ್ನಿಸಿಕೊಳ್ಳುವುದು ರೂಢಿಸಿಕೊಂಡುಬಂದ ಹಳೆಯ ನೆನಪುಗಳಿಂದ ಎನ್ನಬಹುದು. ಈ ರೀತಿಯ ಸೌಂದರ್ಯಾನುಭವವು ದೇಹ, ಮನಸ್ಸು ಎರಡನ್ನೂ ಆವರಿಸಿಕೊಂಡು, ಇವೆರಡೂ ಸುಖ ಅನುಭವಿಸುತ್ತಿವೆ ಎಂದು ತಿಳಿಸುತ್ತದೆ.

ಆದರೆ, ಕಲಾತ್ಮಕವಸ್ತುಗಳನ್ನು ಕಂಡು ಆನಂದಿಸಿ, 'ಎಷ್ಟು ಸುಂದರ' ಎಂದು ಉದ್ಗಾರ ತೆಗೆಯುವಾಗ, ದೇಹ ಮನಸ್ಸು ಇವೆರಡರ ಇರುವಿಕೆಯೇ ಮರೆತುಹೋಗುತ್ತದೆ. ವ್ಯಕ್ತಿ ತನ್ನನ್ನೇ ತಾನು ಮರೆಯುತ್ತಾನೆ.

ಅಂದರೆ, ಸೌಂದರ್ಯಾನುಭವದಲ್ಲಿ ಎರಡು ತರಹ ಇವೆ : ಒಂದು ಮೈ ಮನಸ್ಸುಗಳನ್ನು ತುಂಬಿ ಸುಖ ಕೊಡುತ್ತದೆ ; ಇನ್ನೊಂದು ಮೈಮನಸ್ಸುಗಳನ್ನು ಮರೆಯುವಂತೆ ಮಾಡಿ ಆನಂದದಾಯಕವಾದುದು ಎಂದು ಹೇಳಬಹುದು.

ಮಿಡಿ ಉಪ್ಪಿನಕಾಯಿ ಬಲು ಚೆಂದ ಎನ್ನಿಸುತ್ತದೆ, ಮಲೆನಾಡಿನವರಿಗೆ ; ಘೋರವಾಗಿ ಕಾಣಿಸುತ್ತದೆ ಪಾಶ್ಚಾತ್ಯರಿಗೆ. ಹುಳುಬಿದ್ದ ಚೀಸ್ ಬಲು ಸುಂದರ ಕಾಣಿಸುತ್ತದೆ, ಪಾಶ್ಚಾತ್ಯರಲ್ಲಿ ಹಲವರಿಗೆ ; ಆದರೆ ಅದನ್ನು ಕಂಡರೆ ನಮ್ಮವರು ವಾಂತಿ ಮಾಡಿಬಿಡುತ್ತಾರೆ. ಸತ್ತಿದ್ದರೂ ಪಿಳಿಪಿಳಿ ನೋಡುವ ಮೀನನ್ನು ಹಾಗೆಯೇ ಪಾಶ್ಚಾತ್ಯರು ಬಡಿಸುತ್ತಾರೆ; ಅದನ್ನು ಕಂಡರೆ ಸಸ್ಯಾಹಾರಿಗಳಿಗೆ ವಾಕರಿಕೆ ಬರುತ್ತದೆ. ಕೋಳಿಮೊಟ್ಟೆಯು ಬಲು ಚೆಂದ ಕಾಣಿಸುತ್ತದೆ ಮಾಂಸಾಹಾರಿಗಳಿಗೆ ; ಅದನ್ನು ಕಂಡರೆ ಭೀಭತ್ಸ ಉಂಟಾಗುತ್ತದೆ ನಮ್ಮ ಪುರೋಹಿತರಿಗೆ. ಅಂದರೆ, ಆಹಾರದಲ್ಲಿ ಕಾಣಬರುವ ಸೌಂದರ್ಯವು ಆಹಾರದ ಗುಣವಲ್ಲ, ಅದು ಕಂಡವರ ಕಣ್ಣುಗಳ ಹಿಂದೆ ಇರುವ ಮೆದುಳಿನ ಪ್ರತಿಕ್ರಿಯೆಯಲ್ಲಿದೆ ಎನ್ನಬಹುದು.

ಊಟದಲ್ಲಿನ ಸೌಂದರ್ಯ ಉಣ್ಣುವವನ ಮನಸ್ಸನ್ನು ಅವಲಂಬಿಸಿದೆ ಎಂದಂತಾಯಿತು. ಅವನ ಹಳೆಯ ನೆನಪುಗಳು ಬಾಲ್ಯದಲ್ಲಿ ಅವನ ಮನೆಯಲ್ಲಿ, ರೂಢಿಯಲ್ಲಿದ್ದ ಅಡಿಗೆಗಳು, ಅವುಗಳನ್ನು ಬಡಿಸುವ ರೀತಿ, ಬಡಿಸಿದವರು ಇವೆಲ್ಲವೂ ತಿನ್ನುವ ವಸ್ತುಗಳನ್ನು ಸುಂದರವಾಗಿ ಕಾಣಿಸುತ್ತವೆ. ಇಷ್ಟೇ ಅಲ್ಲ, ಒಲವಿನಿಂದ ಬಡಿಸಿದರೆ ಆಹಾರವು ರುಚಿ ಕಾಣುತ್ತದೆ, ಅಂದರೆ ಸುಂದರವಾಗಿರುತ್ತದೆ. ಅದಕ್ಕೇ ತಾಯಿ ಬಡಿಸಿದರೆ ಮಕ್ಕಳಿಗೆ ಹಿತವಾಗುವುದು. ಊಟವನ್ನು ಮಾಡುವ ಹೋಟಲಿನಲ್ಲಿ, ಬಡಿಸುವ ಮಾಣಿಯು ನಗುತ್ತ ಆದರದಿಂದ ಬಡಿಸಿದರೆ, ಆ ಊಟ ಸುಂದರವಾಗಿರುತ್ತದೆ. ಆದರೆ ಮುಖ ಸಿಂಡರಿಸಿಕೊಂಡು, 'ನೀವು ಕೊಟ್ಟ ಹಣಕ್ಕೆ ಇಷ್ಟು ಋಣ ಬಡಿಸಿದ್ದೇನೆ ; ತಿಂದುಕೊಂಡು ಹೋಗಿ, ಬಿಟ್ಟರೆ ಬಿಡಿ' ಎನ್ನುವ ನೋಟದಿಂದ ಬಡಿಸಿದರೆ, ಆ ಊಟವು ರುಚಿ ಕಾಣಿಸುವುದಿಲ್ಲ. ಶ್ರೀಮಂತರ ಮನೆಯ ಊಟವು ಕೂಲಿಗೆ ಇರುವ ಅಡಿಗೆಯವನಿಂದ ಬಡಿಸಲ್ಪಡುವುದರಿಂದಲೇ ಅವರುಗಳು ಹೋಟಲ ತಿಂಡಿಯ ಚಟವನ್ನು ಹೊಂದುತ್ತಾರೆ ಎಂದು ಶಂಕಿಸಬಹುದು.

ಅಂದಮೇಲೆ ಊಟವು ಸುಂದರವಾಗಿ ಕಾಣಿಸಬೇಕಾದರೆ, ಅದು ಉಣ್ಣುವವನು ರೂಢಿಸಿಕೊಂಡು ಬಂದ ಪ್ರವೃತ್ತಿಯಿಂದಲೇ ಎಂದು ಹೇಳಬಹುದು.

ಕೂಟದಲ್ಲಿಯೂ ಹೀಗೆಯೇ, ಹೆಣ್ಣುಹುಲಿಗೆ ವರ್ಷದ ಋತುಕಾಲ ಒದಗಿದಾಗ ಗಂಡುಹುಲಿಯೂ ಹದವಾಗಿರುತ್ತದೆ. ಅದು ಜೊತೆಗಾತಿಯನ್ನು ಹುಡುಕುತ್ತದೆ. ಇತರ ಗಂಡುಗಳೊಡನೆ ಸ್ಪರ್ಧೆ ನಡಸಬೇಕಾದರೆ ನಡಸಿ, ಸಿಕ್ಕಿದ ಜೊತೆಯನ್ನು ಕೂಡುತ್ತದೆ. ಇಷ್ಟೇ ಎತ್ತರ ಇರುವ ಹೆಣ್ಣುಹುಲಿ ಬೇಕು, ಇಷ್ಟೇ ಪಟ್ಟೆಗಳಿರುವ ಗಂಡು ಬೇಕು, ಬಾಲ ಇಷ್ಟಿರಬೇಕು, ಮೀಸೆ ಹೀಗೆ ಬಿಟ್ಟಿರಬೇಕು, ಎಂದು ಹುಲಿಗಳು ಜೊತೆಗಾಗಿ ಕಾಯುವುದಿಲ್ಲ.

ಆದರೆ ಪಕ್ಷಿಗಳಲ್ಲಿ ಗಂಡು. ಹೆಣ್ಣುಗಳ ಕಣ್ಸೆಳೆಯಲು ಹಲವು ತೆರನಾದ, ಸುಂದರವಾಗಿ ಕಾಣುವ ರೆಕ್ಕೆಪುಕ್ಕಗಳನ್ನು ಹೊಂದಿರುತ್ತವೆ. ಆದರೆ ಹೆಣ್ಣು ನಮ್ಮ ಕಣ್ಣಿಗೇನೋ ಮಂಕುಮಂಕಾಗಿಯೇ ಕಾಣುತ್ತದೆ. ಋತುಕಾಲದಲ್ಲಿ ಹೆಣ್ಣನ್ನು ಬಯಸಿದ ಗಂಡು, ಹೆಣ್ಣಿನ ಗಮನವನ್ನು ತನ್ನತ್ತ ಸೆಳೆಯಲು, ವಿಧ ವಿಧವಾದ ನೃತ್ಯಗಳನ್ನು ನಡಸುತ್ತದೆ. ರೆಕ್ಕೆಪುಕ್ಕಗಳನ್ನು ಕೆದರಿ ಕುಣಿದಾಡುತ್ತಾ ಇತರ ಗಂಡುಗಳೊಡನೆ ಸ್ಪರ್ಧಿಸುತ್ತದೆ. ನವಿಲಿನ ನೃತ್ಯವನ್ನು ಮುಂಗಾರು ಕಾಲದಲ್ಲಿ ನೋಡಿ! ಹೆಣ್ಣು ಈ ರೀತಿ ಕಷ್ಟಪಡುವುದಿಲ್ಲ. ಸ್ಪರ್ಧೆಯಲ್ಲಿ ಗೆದ್ದ ಗಂಡನ್ನು ಹೆಣ್ಣು ಕೂಡುತ್ತದೆ.

ಆದರೆ ನಾಗರಿಕ ಮಾನವನು ಸಮಾಜದಿಂದ ಸಮಾಜದಲ್ಲಿ ರಕ್ಷಣೆಯನ್ನು ಪಡೆದಿದ್ದಾನೆ. ತನ್ನ ಕೆಲಸದಿಂದ ಸಮಾಜದಲ್ಲಿ ಒಂದು ಸ್ಥಾನ ಗಳಿಸಿ, ಗಂಡಾದ ತಾನು ಹೆಣ್ಣಿನ ರಕ್ಷಣೆಯನ್ನು ವಹಿಸಿಕೊಳ್ಳಬಲ್ಲೆ ಎಂದು ಅನ್ನುವಂತಾಗುತ್ತಾನೆ. ರಕ್ಷಣೆಯನ್ನು ಯಶಸ್ವಿಯಾಗಿ ಕೊಡುವ ಗಂಡಿನ ಕೈ ಹಿಡಿಯಲು ಹೆಣ್ಣುಗಳು ಸ್ಪರ್ಧೆ ನಡಸಬೇಕು. ಅದಕ್ಕಾಗಿ ಹೆಣ್ಣುಗಳು ಶೃಂಗಾರ ಮಾಡಿಕೊಳ್ಳುತ್ತವೆ, ಕಲಾಭಿರುಚಿಯನ್ನು ಬೆಳಸಿಕೊಳ್ಳುತ್ತವೆ. ಹಾಗಾಗಿ ನಾಗರಿಕ ಮಾನವರಲ್ಲಿ ಹೆಣ್ಣು ಶೃಂಗರಿಸಿಕೊಳ್ಳುತ್ತಾಳೆ, ಗಂಡು ನವಿಲಿನಂತೆ. ಆದರೆ ಗಂಡು ಮಾನವನ ಹೆಣ್ಣು ನವಿಲಿನಂತೆ ಸಾಮಾನ್ಯವಾಗಿ ಪೆಚ್ಚುಪೆಚ್ಚಾಗಿ ಕಾಣುತ್ತಾನೆ.

ನಾಗರಿಕಮಾನವರಲ್ಲಿ ಹೆಣ್ಣು ಸೌಂದರ್ಯಾರಾಧನೆಯನ್ನು ಹೆಚ್ಚಾಗಿ ಮಾಡುವುದು ಈ ಕಾರಣದಿಂದ. ಗಂಡು ಸೌಂದರ್ಯಾನ್ವೇಷಣೆಯನ್ನು ಮಾಡುತ್ತಾನೆಂಬುದು ಸ್ವತಃಸಿದ್ಧ.

ಇಷ್ಟೆಲ್ಲಾ ದೈಹಿಕ ಸೌಂದರ್ಯಕ್ಕೆ ಅನ್ವಯಿಸುತ್ತದೆ. ಅಂದರೆ ಕಂಡವನ ಮನಸ್ಸಿನ ಪ್ರತಿಕ್ರಿಯೆಯು ಈ ರೀತಿ ಎಂದಂತಾಯಿತು. ಆದರೆ, ನಾಗರಿಕ ಮಾನವನು ತನ್ನ ಮನಸ್ಸನ್ನು ಹಿತಗೊಳಿಸಿದವರನ್ನು ಮೆಚ್ಚುತ್ತಾನೆ. ಹಾಗೆ ಹಿತಗೊಳಿಸಿದವರು ಕುರೂಪಿಗಳಾಗಿದ್ದರೂ ಆಕೆ ಚೆಂದಾಗಿಯೇ ಕಾಣುತ್ತಾರೆ. ತಾಯಿಯು ಹೇಗೇ ಇರಲಿ, ಮಕ್ಕಳ ಕಣ್ಣಿಗೆ ಮೆಚ್ಚು. ಅಜ್ಜಿಗೆ ನರೆ ಬಂದಿದ್ದರೂ ಮೊಮ್ಮಕ್ಕಳ ಕಣ್ಣಿಗೆ ಚೆಂದವಾಗಿಯೇ ಕಾಣಿಸುತ್ತಾಳೆ. ಕುರೂಪಿಯಾದ ಹೆಂಡತಿಯನ್ನು ಸುರೂಪಿಯಾದ ಗಂಡನು ಒಲವಿನಿಂದ ನೋಡುವುದೂ ಆಕೆಯ ಅನುಕಂಪದಿಂದಲೇ. ಆತನ ಕಷ್ಟಕ್ಕಾದಳು, ಅವಮಾನದಲ್ಲಿ ಭಾಗಿಯಾದಳು ಎಂಬ ಭಾವನೆಯಿಂದಲೇ. ಈ ಮಾನಸಿಕ ಅನುಕಂಪವು ಇಲ್ಲದಿರುವ ಚೆಂದುಳ್ಳ ಹೆಂಡತಿ, ಹಾಗೂ ಸುರೂಪಿ ಗಂಡ, ಇವರ ಸಂಸಾರದಲ್ಲಿ ಒಲವಿರುವುದಿಲ್ಲ ; ಹಿತ ಕಾಣಿಸುವುದೇ ಇಲ್ಲ.

ಅಂದರೆ, ದೈಹಿಕ ಸೌಂದರ್ಯವು ನಾಗರಿಕ ಮಾನವರಲ್ಲಿ ಪರಸ್ಪರವಾಗಿ ಬಂಧಿಸುವ ಕ್ರಿಯೆಯಾದರೂ, ಸಂಸಾರದ ಬಾಳ್ವೆಯಲ್ಲಿ ಮಾನಸಿಕ ಅನುಕಂಪವೇ, ಮಾನಸಿಕ ಸಮಾನತೆಯೇ ಹಿರಿಯ ಬಂಧನಶಕ್ತಿಯಾಗುತ್ತದೆ. ಪಾಶ್ಚಾತ್ಯರಲ್ಲಿ ದೈಹಿಕ ಸೌಂದರ್ಯವನ್ನೇ ಹಿರಿಯ ಪ್ರೇರಣೆಯಾಗಿ ಮಾಡಿಕೊಂಡಿರುವುದರಿಂದ ವಿವಾಹವಿಚ್ಛೇದಗಳೂ ಹೇರಳವಾಗಿವೆ. ಸಮಾಜದ ಕಾನೂನುಗಳೂ ಅದಕ್ಕೆ ಅನುಗುಣವಾಗಿವೆ. ಆದರೆ ಪೌರ್ವಾತ್ಯರಲ್ಲಿ, ಸಂಸ್ಕೃತಿಯು ಹಿರಿದಾದವರಲ್ಲಿ, ದೈಹಿಕ ಸೌಂದರ್ಯವೊಂದೇ ಪ್ರೇರಣೆಯಾಗುವುದಿಲ್ಲ. ಅದಕ್ಕಾಗಿಯೇ ಸಮಾಜದ ಕಾನೂನುಗಳೂ ವಿವಾಹವಿಚ್ಛೇದನಕ್ಕೆ ಆಗಿನ ಕಾಲದಲ್ಲಿ ಅವಕಾಶ ಮಾಡಿಕೊಡಲಿಲ್ಲ.

ನಾಗರಿಕ ಮಾನವನ ಸೌಂದರ್ಯಾರಾಧನೆಯು ಈ ರೀತಿ ಇರುವುದರಿಂದ ನಮ್ಮ ಸಮಾಜದ ಕಾನೂನು ಕಟ್ಟಳೆಗಳೂ ಈ ರೀತಿ ಇರುವುದರಿಂದ, ನೂರಕ್ಕೆ ೪೦-೫೦ರಷ್ಟು ಸಂಸಾರಗಳಲ್ಲಿ ಸಮಾನ ಮಾನಸಿಕ ಧರ್ಮವಿಲ್ಲದೆ, ಬೇರೆ ಉಪಾಯವಾವುದೂ ಇಲ್ಲದಿರುವುದರಿಂದ ಮನೋದೈಹಿಕ ಬೇನೆಗಳು ಕಾಣ ಬರುತ್ತವೆ.

ಮಾನವನ ಮನಸ್ಸಿನ ಸ್ವಾರ್ಥ ಚಟುವಟಿಕೆಗಳಿಗೆ ಈ ಸೌಂದರ್ಯದ ಅನುಭವವು ಅನ್ವಯಿಸುತ್ತದೆ. ಆದರೆ, ನಿಃಸ್ವಾರ್ಥ ಚಟುವಟಿಕೆಯಾದ,

ಪ್ರಜ್ಞಾಪ್ರೇರಿತ ಕುತೂಹಲದಿಂದ ಉಂಟಾದುದಾಗಲಿ, ಭಾವನಾ ಅನುಕಂಪ ದಿಂದ ಉಂಟಾದುದಾಗಲಿ, ಅದೂ ಸೌಂದರ್ಯವನ್ನು ಕಾಣುತ್ತದೆಯೆ ? ಅಂತಹ ಮನಸ್ಸಿನ ಸ್ಥಿತಿಯಲ್ಲಿ ಬಾಲ್ಯದ ಅನುಭವಗಳು ಸೌಂದರ್ಯದ ರೂಪರೇಖೆ ಗಳನ್ನು ತೋರಿಸಲು ಸಾಧ್ಯ. ಹಾಗಾದರೆ, ಅಂತಹ ಮಾನಸಿಕ ಚಟುವಟಿಕೆ ಇರುವವರಿಗೆ ಸುಂದರವಾಗಿ ಕಾಣಿಸುವುದು ಯಾವುದು ?

ಫ್ಲೆಮಿಂಗ್ ಮಹಾಶಯನು ಬ್ಯಾಕ್ಟೀರಿಯಾಗಳನ್ನು ಮಡಿಯಾಗಿ ಗಾಜಿನ ತಟ್ಟೆಬಟ್ಟಲುಗಳಲ್ಲಿ ಬೆಳಸುತ್ತಿದ್ದ. ಅವೂ ಹೊರವಾಗಿ ಬೆಳೆಯುತ್ತಿ ದ್ದವು. ಯಾವುದೋ ಮಾಯದಲ್ಲಿ ಒಂದು ತಟ್ಟೆಗೆ ಮೈಲಿಗೆಯಾಯಿತು. ಯಾವುದೋ ಬೂಷ್ಟು ಒಂದು ತಟ್ಟೆಯಲ್ಲಿ ಝಾಂಡಾ ಹೂಡಿತು. ಹೂಡಿದ ಎರಡು ಮೂರು ದಿನಗಳಲ್ಲಿ ಸುತ್ತಲಿದ್ದ ಬ್ಯಾಕ್ಟೀರಿಯಾಗಳೆಲ್ಲವೂ ಕರಗಿ ಹೋದುವು. ಫ್ಲೆಮಿಂಗನ ಕುತೂಹಲ ಕೆರಳಿತು. ಇದು ಯಾಕೆ ಹೀಗಾಯಿತು, ಎಂದು ಸಮಸ್ಯೆ ತೋರಿತು. ಸಾಮಾನ್ಯ ವೈಜ್ಞಾನಿಕ ಕೆಲಸಗಾರನಾಗಿದ್ದರೆ, ಮೈಲಿಗೆಯಾದ ತಟ್ಟೆಯನ್ನು ತೊಳೆದು, ಸಂಪ್ರೋಕ್ಷಣೆಮಾಡಿ, ಮಡಿಯಾಗಿ ಹೊಸ ಬ್ಯಾಕ್ಟೀರಿಯಾಗಳನ್ನು ಬೆಳಸುತ್ತಿದ್ದ. ಆದರೆ, ಫ್ಲೆಮಿಂಗ್ ವೈಜ್ಞಾನಿಕ ನಾಗಿದ್ದ, ಬರೀ ವಿಜ್ಞಾನದ ಕೆಲಸಗಾರನಾಗಿರಲಿಲ್ಲ. ಅವನಿಗೆ ಈ ಬೂಷ್ಟಿನ ಮೈಲಿಗೆಯು ಸುಂದರವಾಗಿಯೇ ಕಾಣಿಸಿತು. ಇತರರಿಗೆ ಸೋಂಕು, ಮೈಲಿಗೆ, ಸೂತಕ ಎಂದು ಮಾನಸಿಕ ಪ್ರತಿಕ್ರಿಯೆಯನ್ನು ಮಾಡುವ ಬೂಷ್ಟು, ಫ್ಲೆಮಿಂಗಿನ ಪ್ರಜ್ಞಾಪ್ರೇರಿತ ಮನಸ್ಸಿನ ಸ್ಥಿತಿಯಲ್ಲಿ ಸುಂದರವಾಗಿ ಕಾಣಿಸಿತು. ಅದನ್ನೇ ಆರಾಧನೆಮಾಡಿದ. ಆ ಆರಾಧನೆಯ ಫಲವೇ 'ಪೆನಿಸಿಲಿನ್'. ವೈದ್ಯಕೀಯ ಚಿಕಿತ್ಸಾಕ್ರಮಗಳಲ್ಲಿ ಪೆನಿಸಿಲಿನ್ ಹೊಸದೊಂದು ಯುಗವನ್ನೇ ಆರಂಭಿಸಿತು. ಮಾನವನ ಜ್ಞಾನಭಂಡಾರವು ಹಿರಿಯದಾಯಿತು. ಫ್ಲೆಮಿಂಗನು ಕಂಡ ಸಮಸ್ಯೆಯ ಪರಿಹಾರಮಾರ್ಗವೂ ಸತ್ಯವನ್ನು ಹುಡುಕುವ ಮಾರ್ಗವೇ. ಅಂದರೆ ಫ್ಲೆಮಿಂಗನು ಕುತೂಹಲಗೊಂಡು ಸತ್ಯಾನ್ವೇಷಣೆಯನ್ನು ಮಾಡಿದಾಗ, ಸೌಂದರ್ಯಾನ್ವೇಷಣೆಯನ್ನೂ ಮಾಡಿದ ಎನ್ನಬೇಕು. ಪ್ರಜ್ಞಾಪ್ರೇರಿತವಾದ ಮಾನಸಿಕ ಚಟುವಟಿಕೆಯು ಕುತೂಹಲದಿಂದ ಕೆರಳಿದಾಗ ಸತ್ಯವೇ ಸುಂದರವಾಗಿ ಕಾಣಿಸುತ್ತದೆ.

ಮಹಾಭಾರತದ ಕತೆಯನ್ನು ಭಾರತದಲ್ಲಿ ಕೇಳದವರೇ ಇಲ್ಲ. ರನ್ನನು

ಈ ಕತೆಯನ್ನು ಕೇಳಿದಾಗ, ಅವನಿಗೆ ದುರ್ಯೋಧನನಲ್ಲಿ ಅನುಕಂಪವುಂಟಾಯಿತು. "ದುರ್ಯೋಧನನ ತಂದೆ ಹಸ್ತಿನಾವತಿಯ ರಾಜ. ಅಂದಮೇಲೆ ಅವನ ಮಗ ಯುವರಾಜನಾಗಬೇಕು. ಆದರೆ ಚಿಕ್ಕಪ್ಪನ ಮಗನಾದ ಧರ್ಮರಾಯನಿಗೆ ಪಟ್ಟಕಟ್ಟಬೇಕು ಎಂದು ಹಲವರು ಹಿರಿಯರು ಚಳುವಳಿ ಹೂಡಿದರು. ಧರ್ಮರಾಯನು ಸದ್ಗುಣಿ ಎಂದರು. ಇದು ಅನ್ಯಾಯ ಎನ್ನಿಸಿತು ದುರ್ಯೋಧನನಿಗೆ. ತನ್ನ ಹಕ್ಕನ್ನು ಕದಿಯುವ ಏರ್ಪಾಡಿದು ಎನ್ನಿಸಿತು. ತನ್ನ ರಕ್ಷಣೆಗೆ ಆತ ಮಾಡಿದ್ದೆಲ್ಲವೂ ಕೃಷ್ಣನ ಉಪಾಯದಿಂದ ಮಣ್ಣಾಯಿತು. ಕೊನೆಗೆ ಪ್ರಾಣವನ್ನೇ ತೆತ್ತ. ಎಂತಹ ಧೀರನಿಗೆ, ಯಾವುದೋ ಶಕುನಿಯ ಪ್ರೇರಣೆಯಿಂದ ಎಂಥ ಗತಿ ಬಂತು ?" ಎಂದು ಅನುಕಂಪವುಂಟಾಗಿರಬೇಕು, ರನ್ನನಿಗೆ. ಅನುಕಂಪವು ನುಡಿದಾಗ ಗದಾಯುದ್ಧ ಕಾವ್ಯ ರೂಪುಗೊಂಡಿತು. ಕನ್ನಡದ ಅಮರಕೃತಿಗಳಲ್ಲಿ ಹಿರಿದಾಯಿತು.

ರನ್ನನ ಮನಸ್ಸು ನಿಃಸ್ವಾರ್ಥಿಯಾಗಿದ್ದಾಗ, ಪ್ರಜ್ಞಾಪ್ರೇರಿತ ಚಟುವಟಿಕೆಯಲ್ಲಿ ತೊಡಗಿ ಭಾವನಾಪ್ರಪಂಚದಲ್ಲಿ ಅನುಕಂಪ ತೋರಿಸಿದಾಗ ಗದಾಯುದ್ಧವು ಮೂಡಿಬಂತು. ಹಾಗಾಗಲು ದುರ್ಯೋಧನನ ದುರಂತವಾದ ಬಾಳು ರನ್ನನಿಗೆ ಸುಂದರವಾಗಿಯೇ ಕಂಡಿರಬೇಕು. ರನ್ನನ ಜೀವನವು ಹೇಗಿತ್ತೊ ? ಅವನಿಗೂ ದುರ್ಯೋಧನನಂತೆ ಹಕ್ಕುಬಾಧ್ಯತೆಗಳಿಗೆ ಚ್ಯುತಿ ಬಂದಿತ್ತೋ, ದೇವರೇ ಬಲ್ಲ. ಆದರೆ ಅವನು ಅನುಕಂಪದಿಂದ ನುಡಿದ ಗದಾಯುದ್ಧವು, ಬಾಳು ದುರಂತವಾಗಬಹುದಾದ ಜನರಿಗೆ, ಅಂದರೆ ಸುಮಾರು ಎಲ್ಲ ಜನರಿಗೂ ಓದಿದಾಗ ಹಿತವನ್ನು ಕೊಡುತ್ತದೆ. ಅಂದರೆ, ಇದೂ ಸತ್ಯದ ಒಂದು ಮುಖ. ಅನುಕಂಪದಿಂದ ಕಂಡಾಗ, ಪ್ರಜ್ಞಾಪ್ರೇರಿತ ಮನಸ್ಸಿಗೆ, ಸತ್ಯದರ್ಶನವಾಗುತ್ತದೆ, ಅದೂ ಸುಂದರವಾಗಿರುತ್ತದೆ ಎನ್ನಬಹುದು.

ಅಂದಮೇಲೆ, ನಾಗರಿಕ ಮಾನವನು ಸೌಂದರ್ಯಾನ್ವೇಷಣೆಯನ್ನು ಮಾಡುತ್ತಾನೆ. ಸೌಂದರ್ಯವು ಅವನ ಮಾನಸಿಕಪ್ರವೃತ್ತಿಯನ್ನೂ ಹಳೆಯ ನೆನಪುಗಳನ್ನೂ ಅವಲಂಬಿಸಿದೆಯೇ ಹೊರತು. ವಸ್ತುವಿನಲ್ಲಿ ಇಲ್ಲ. ದೈಹಿಕ ಸೌಂದರ್ಯ, ಮತ್ತು ಸ್ವಾರ್ಥಿಯಾಗಿರುವ ಮಾನಸಿಕ ಸೌಂದರ್ಯಗಳು, ಸುತ್ತಮುತ್ತಲಿನ ಸಮಾಜವನ್ನೂ ಅದರ ರೂಢಿನಡವಳಿಕೆಗಳನ್ನೂ ಅವಲಂಬಿಸಿದೆ. ಆದರೆ ನಿಃಸ್ವಾರ್ಥಿಯಾದ ಪ್ರಜ್ಞಾಪ್ರೇರಿತ ಮಾನಸಿಕ ಚಟುವಟಿಕೆಯು

ಕುತೂಹಲದಿಂದ ಕೆರಳಿದರೂ, ಅನುಕಂಪದಿಂದ ಮಿಡಿದರೂ, ಅದು ಕಂಡದ್ದು ಸುಂದರವಾಗಿರುತ್ತದೆ, ಅದೇ ಸತ್ಯವೂ ಆಗಿರುತ್ತದೆ, ಎಂದಂತಾಯಿತು.

ನಾಗರಿಕ ಮಾನವನು ಸೌಂದರ್ಯಾನ್ವೇಷಣೆಯನ್ನು ಮಾಡುವುದಾದರೂ ಏಕೆ ? ಆನಂದವನ್ನು ಪಡೆಯುವುದಕ್ಕೆ. ವಿಶಾಲವಾದ ಆನಂದ ಲಹರಿಗಾಗಿಯೇ ಸೌಂದರ್ಯಲಹರಿಯು ಸಾಧನವಾಗಿರಬೇಕು ; ನಾಗರಿಕತೆಯು ಮೊದಲ ಕುರು ಹಾಗಿರಬೇಕು. 'ಆನಂದಲಹರಿ'ಯ ಆರಂಭದ ಪದ್ಯಗಳು 'ಸೌಂದರ್ಯಲಹರಿ' ಅಲ್ಲವೆ !

ಸೌಂದರ್ಯಾನುಭವದಲ್ಲಿ ಮೈ ಮನಗಳನ್ನು ತುಂಬುವುದು ಒಂದು, ಮೈಮನಗಳನ್ನು ಮರೆಸುವುದು ಇನ್ನೊಂದು ; ಹೀಗೆ ಎರಡು ವಿಧಗಳನ್ನು ಕಾಣಬಹುದು ಎಂದೆವು.

ಮೈ ಮನಸ್ಸುಗಳನ್ನು ಮರೆಯುವಂತೆ ಮಾಡುವ ಸೌಂದರ್ಯಾನುಭವವು ಪ್ರಜ್ಞಾಪ್ರೇರಿತವಾದ, ನಿಃಸ್ವಾರ್ಥೀ ಮಾನಸಿಕ ಚಟುವಟಿಕೆಯಿಂದಲೇ ಎನ್ನಬಹುದು. ಕುತೂಹಲದಿಂದ ಈ ಚಟುವಟಿಕೆಯು ಕೆರಳಿದ್ದಾದರೆ, ಆಗ ವೈಜ್ಞಾನಿಕ ಜ್ಞಾನಸಂಪಾದನೆಯಾಗುತ್ತದೆ. ವೈಜ್ಞಾನಿಕವಾಗಿ ಆ ಕಾಲಕ್ಕೆ ಸತ್ಯವಾದುದನ್ನು ಕಂಡುಹಿಡಿದಾಗ, ಅದು ಸುಂದರವಾಗಿ ಕಾಣಿಸುತ್ತದೆ. ಅದು ಆನಂದದಾಯಕವೂ ಹೌದು. ಮೈಮನಗಳನ್ನು ಮರೆಯಿಸುತ್ತದೆ. ಆದರೆ ಕುತೂಹಲದಿಂದ ಕೆರಳಿದ ಮನಸ್ಸು ಸತ್ಯದ ಸುಂದರವಾದ ಅಂಚನ್ನು ಕಂಡಾಗ, ಉಳಿದುದೆಲ್ಲವನ್ನೂ ಅರಿಯಬೇಕು ಎಂದು ಕುತೂಹಲವನ್ನು ಹೆಚ್ಚು ಬೆಳಸುತ್ತದೆ. ಅಂದರೆ, ಈ ಮಾರ್ಗದಲ್ಲಿ 'ಮುಗಿಯಿತು' ಎನ್ನುವ ಹಾಗೆ ಇಲ್ಲವೇ ಇಲ್ಲ.

ಪ್ರಜ್ಞಾಪ್ರೇರಿತವಾದ ಮಾನಸಿಕ ಚಟುವಟಿಕೆಯು ಅನುಕಂಪದಿಂದ ಪ್ರೇರಿತವಾದರೆ, ಆಗಲೂ ಆನಂದಾನುಭವ ಉಂಟಾಗುತ್ತದೆ ; ಆಗಲೂ ಸೌಂದರ್ಯಾನುಭವ ಆಗುತ್ತದೆ. ಆದರೆ 'ಈ ಅನುಭವದಲ್ಲಿ ಶಾಂತಿ ಸಮಾಧಾನಗಳು ದೊರಕುತ್ತವೆ, ಇನ್ನೂ ಅರಿಯುವುದು ಇದೆ' ಎನ್ನುವಂತಿರುವುದಿಲ್ಲ. 'ಅಮಿತವಾದ ಆನಂದದ ಅನುಭವವಾಯಿತು. ಸುಂದರವಾದ ಈ ಅನುಭವವೇ ಸತ್ಯದ ಪೂರ್ಣದರ್ಶನ' ಎಂದು ದೃಢವಾದ ನಂಬಿಕೆಯು ಹುಟ್ಟುತ್ತದೆ. "ಇಷ್ಟೇ ಅರಿಯಬೇಕಾದುದು" ಎಂದು ಹೇಳಲು ಸಾಧ್ಯವಾಗುತ್ತದೆ. "ಆನಂದ

ತೀರ್ಥದಲ್ಲಿ ಮುಳುಗಿದೆವು. ಪೂರ್ಣಪ್ರಜ್ಞರಾದೆವು. ಸೋऽಹಂ. ತತ್ ತ್ವಂ ಅಸಿ" ಎಂದು ಘೋಷಿಸಲು ಸಾಧ್ಯವಾಗುತ್ತದೆ.

ನಿಃಸ್ವಾರ್ಥೀ ಮಾನಸಿಕ ಚಟುವಟಿಕೆಯಿಂದ ಸೌಂದರ್ಯಾನ್ವೇಷಣೆಯನ್ನು ಅಂದರೆ ಸತ್ಯಾನ್ವೇಷಣೆಯನ್ನು ಮಾಡುವ ನಾಗರಿಕ ಮಾನವನಿಗೆ ಮನೋದೈಹಿಕ ಬೇನೆಗಳ ಕಾಟವು ಬರುವ ಸಂಭವವಿಲ್ಲ. ಆದರೆ ಪ್ರಜ್ಞಾಪ್ರೇರಿತ ಮನಸ್ಸಿನ ಸೌಂದರ್ಯೋಪಾಸನೆಯನ್ನು ಬಿಟ್ಟು, ಸ್ವಾರ್ಥಿಯಾದ ಇತರ ಮಾನಸಿಕ ಚಟುವಟಿಕೆಗಳಿಂದ ಸೌಂದರ್ಯವನ್ನು ಅರಸಲು ಹೋಗುವ ಮಾನವನು, ಮನೋದೈಹಿಕ ಬೇನೆಗಳಿಗೆ ಸುಲಭವಾಗಿ ತುತ್ತಾಗಬೇಕು. ಏಕೆಂದರೆ, ಅಂತಹ ಸೌಂದರ್ಯವು ಅವನ ಮನಸ್ಸಿನ ಪ್ರತಿಕ್ರಿಯೆಯೇ ಆಗಿರುತ್ತದೆ. ಸೂರ್ಯನ ಮುಂದೆ ನಿಂತು, ಹಿಂದೆ ಬಿದ್ದ ನೆರಳನ್ನು ಹಿಡಿಯುವವನಂತೆ, ಮಾನವನು ತಾನು ಬಯಸಿದ್ದನ್ನು ಸುಮಾರು ಸಲ ಹೊಂದಲಾರದೆ, ಮನೋದೈಹಿಕ ಬೇನೆಗಳಿಗೆ ವಾಸಸ್ಥಾನವಾಗುತ್ತಾನೆ.

## ಅಧ್ಯಾಯ ಐದು

# ಸತ್ಯಾನ್ವೇಷಣೆ

### ಬಾಳಿಗೊಂದು ನಂಬಿಕೆ

ಕೆಲವು ವಿಜ್ಞಾನಿಗಳ ಸಿದ್ಧಾಂತದಂತೆ, ಮಗುವಾದಾಗಿನಿಂದ, ತಾಯಿ ಗರ್ಭದಲ್ಲಿರುವಾಗಿನಿಂದಲೂ, ಯಾವಯಾವದನ್ನೆಲ್ಲ ಅನುಭವಿಸಿದ್ದನೋ, ಅವೆಲ್ಲ ಅನುಭವಗಳನ್ನು ಮನಸ್ಸಿನಲ್ಲಿ ನೆನಪನ್ನಾಗಿ ಮಾನವನು ಶೇಖರಿಸಿಡುತ್ತಾನೆ. ಯಾವ ಅನುಭವಗಳು ಅವನಿಗೆ ಸುಖಕೊಟ್ಟವೋ, ಆನಂದವನ್ನು ಉಂಟು ಮಾಡಿದವೋ, ಅವೆಲ್ಲವನ್ನೂ ಸುಂದರವಾದುದು, ಚೆಂದಾದುದು ಎಂದು ತಿಳಿಯುತ್ತಾನೆ. ಅವುಗಳ ನೆನಪು ಮನಸ್ಸಿಗೆ ಚೆಂದ ಕಾಣಿಸುತ್ತದೆ. ತದ್ವಿರುದ್ಧ ವಾದ ನೋವು ಸಂಕಟ ಇತ್ಯಾದಿ ದುಃಖವನ್ನು ಉಂಟುಮಾಡಿದ ನೆನಪು ಗಳೆಲ್ಲವೂ ಅಸಹ್ಯ, ಅವಲಕ್ಷಣ ಎಂದು ತಿಳಿಯುತ್ತಾನೆ.

ಮನಸ್ಸಿನಲ್ಲಿರುವ ಸುಖದ ನೆನಪುಗಳನ್ನು ತಿರುಗಿ ಅನುಭವಿಸಬೇಕು ಎಂದು ಪ್ರಯತ್ನಿಸುವಾಗ ಮಾನವನು ಸೌಂದರ್ಯಾನ್ವೇಷಣೆಯನ್ನು ಮಾಡಿ ದಂತೆಯೇ ಎನ್ನಬೇಕು.

ಉದಾಹರಣೆಗೆ ಜಿಲೇಬಿಯ ಬಣ್ಣ, ರುಚಿ, ಆಕಾರ ಇವೆಲ್ಲವೂ ಸುಂದರ ವಾಗಿ ಕಾಣಿಸುತ್ತದೆ, ತಿಂದು ಸುಖಪಟ್ಟವನಿಗೆ ಅಷ್ಟೇ ಸಿಹಿ ಇರುವ, ನಾಲಿಗೆಗೆ

ಅಷ್ಟೇ ರುಚಿಯಾದ ಬೇರೊಂದು ತಿಂಡಿಯನ್ನು ಕೊಟ್ಟರೂ, ಅವನಿಗೆ ಜಿಲೇಬಿಯನ್ನು ತಿಂದ ಸುಖ ತಟ್ಟುವುದಿಲ್ಲ. ಅವನ ಮನಸ್ಸು ಜಿಲೇಬಿಯ ನೆನಪು, ಅದರ ಬಣ್ಣ, ಆಕಾರ, ಗರಿಗರಿಯಾಗಿರುವುದು, ಇವೆಲ್ಲವನ್ನೂ ಅವ ಲಂಬಿಸಿರುತ್ತದೆ ; ಬರೀ ನಾಲಿಗೆಯ ರುಚಿಯನ್ನು ಮಾತ್ರವಲ್ಲ. ಸುಂದರವಾದ ಜಿಲೇಬಿಯೇ ಇನ್ನೊಮ್ಮೆ ಬೇಕು ಎಂಬ ಬಯಕೆಯು ಅವನಲ್ಲಿ ಹುಟ್ಟುತ್ತದೆ. ಜಿಲೇಬಿ ಎಲ್ಲಿ ಸಿಗಬಹುದು, ಅದನ್ನು ಹೇಗೆ ದೊರಕಿಸಿಕೊಳ್ಳಬಹುದು, ಎಂದೆಲ್ಲಾ ಯೋಚಿಸಿ, ಅದನ್ನೇ ಹುಡುಕುತ್ತಾನೆ. ತನ್ನ ಬಯಕೆಯ ತೀರು ವಿಕೆಗೆ ಸಕಲ ಯತ್ನಗಳನ್ನೂ ಮಾಡುತ್ತಾನೆ.

ಎರಡು ವರ್ಷದ ವ್ಯಾಸಂಗಕ್ಕೆ ಅವನು ಇಂಗ್ಲೆಂಡಿನಲ್ಲಿದ್ದ ಎಂದು ಇಟ್ಟು ಕೊಳ್ಳೋಣ. ಅಲ್ಲಿ ಜಿಲೇಬಿಯ ಬಯಕೆ ಹುಟ್ಟಿದರೆ, ಅದು ತೀರುವು ದಾದರೂ ಹೇಗೆ ? ತೀರಿಸಲಾಗದ ಬಯಕೆಯು ನಿರಾಸೆ, ದುಃಖ, ಬೇಸರ, ಇತ್ಯಾದಿ ಭಾವನೆಗಳಿಂದ ಮನಸ್ಸನ್ನು ತುಂಬುತ್ತದೆ. ಅಂದರೆ, ಅವನ ದೇಹದ ರಕ್ಷಣೆಗೆ ಆವಶ್ಯಕವಾದ ಆಹಾರ ದೊರಕಲಿಲ್ಲ ಎಂದಲ್ಲ ; ಅವನ ಚಪಲ, ಅವನ ಬಯಕೆ, ಈಡೇರಲಿಲ್ಲ ಅಂತ. ದೇಹರಕ್ಷಣೆಗೆ ಅಗತ್ಯವಾದುದು, ವ್ಯಾವಹಾರಿಕ ವಾಗಿ ಸತ್ಯವಾದುದು, ಅಕ್ಕಿ ಗೋಧಿ ಇತ್ಯಾದಿಗಳು. ಆದರೆ ಬಯಕೆಯು ಅವನ ಮನಸ್ಸಿನಲ್ಲಿ ಮಾತ್ರ ರೂಪತಾಳಿದ್ದು. ಈ ಬಯಕೆಗೆ ಬೇರೆ ಎಡೆಯಿಲ್ಲ ; ಅವನ ಮನಸ್ಸಿನ ನೆನಪಿನಲ್ಲೇ ಇರಬೇಕಾದ್ದು. ಅಂದರೆ ಮಾಯಾರೂಪಿನದು. ಈಡೇರದ ಈ ಬಯಕೆಯೇ ಅವನನ್ನು ದುಃಖಕ್ಕೆ ಗುರಿಮಾಡುತ್ತದೆ.

ಅಂದರೆ, ಮಾನವನು ತನಗೆ ಸುಖಕೊಟ್ಟ ಅನುಭವಕ್ಕೆ "ಸುಂದರ" ಎಂದು ಹೆಸರಿಟ್ಟು ಕರೆದ ಅಂದಿನಿಂದಲೇ ಸೌಂದರ್ಯಾನ್ವೇಷಣೆಗೂ ಶುರುಮಾಡಿದ. ಹಾಗೆ ಮಾಡಿದಾಗಲೇ, ಆ ಬಯಕೆಯು ಈಡೇರಿದಾಗ, ದುಃಖಿಯೂ ಆದ. ಕಂಡ ಚೇಳು ಕುಟುಕಿದಾಗ ಎಷ್ಟು ದುಃಖಿಯಾದನೋ, ಕಾಣದ ಜಿಲೇಬಿಗಾಗಿ, ಬಯಕೆಯು ಈಡೇರದಾಗ ಅಷ್ಟೇ ದುಃಖಿಯಾಗುತ್ತಾನೆ. ಚೇಳು ಕುಟುಕಿದ ದೇಹದ ಬಾಧೆ ಕೆಲವು ದಿನಗಳಲ್ಲಿ ಮಾಯುವಾಗುತ್ತದೆ. ಆದರೆ ಈಡೇರದ ಬಯಕೆಯು ದೀರ್ಘಕಾಲ ಕುಟುಕುತ್ತಲೇ ಇರುತ್ತದೆ, ಈಡೇರದ ಬಯಕೆಯ ಹಾವಳಿಯನ್ನು ನಾಶಮಾಡಬೇಕಾದರೆ, ಮನಸ್ಸು ಕಲಾರಾಧನಚಟುವಟಿಕೆಗಳಲ್ಲಿ ಮಗ್ನವಾಗಿ. ಬಯಕೆಯನ್ನು ಸುಟ್ಟು ಬೂದಿ ಮಾಡಬೇಕು.

ಜಿಲೇಬಿಯ ಉದಾಹರಣೆ ಕೊಟ್ಟೆ. ಎಲ್ಲರಿಗೂ ಕಂಡ ಹಾಗೆ ತಿಂದ ಜಿಲೇಬಿ. ಅಥವಾ ಅವನು ಜಿಲೇಬಿಯನ್ನು ಕದ್ದು ತಿಂದಿದ್ದ ಅನ್ನಿ. ಆಗ ಅವನ ಬಯಕೆಯನ್ನು ಬಹಿರಂಗವಾಗಿ ಹೇಳಿಕೊಳ್ಳಲು ಕಷ್ಟ. ಅದನ್ನು ಅವನು ಹೇಳಲಾರದಂತೆ ಅವನ ತಾರ್ಕಿಕ ಮನಸ್ಸೇ ಆ ಯೋಚನೆಯನ್ನು ಅದುಮಿ ಬಿಡುತ್ತದೆ. ಊಟದಲ್ಲೇ ಹೀಗಾದರೆ, ಕೂಟದ ವಿಷಯ ಕೇಳಬೇಕೆ? ಇದಕ್ಕಿಂತ ಅದು ಶಕ್ತಿಯುತವಾದುದು. ಅಂದಮೇಲೆ, ಸೌಂದರ್ಯಾನ್ವೇಷಣೆಗೆ ತೊಡಗಿದಾಗಲೇ ಮಾನವನು ದುಃಖಜೀವಿಯೂ ಆದ ಎನ್ನಬೇಕು.

ದುಃಖಕ್ಕೆ ಮೂಲವಾದುದು ಸೌಂದರ್ಯಾನ್ವೇಷಣೆ, ಸೌಂದರ್ಯಾರಾಧನೆ ಎಂದು ಮಾನವನಿಗೆ ತಿಳಿದಾಗ, ಪ್ರಜ್ಞಾಪ್ರೇರಿತವಾದ ಆ ಚಟುವಟಿಕೆಯಿದ್ದು ಅನುಕಂಪದಿಂದ ಕೂಡಿದ ಹಿರಿಯ ಮಾನವರು ಮನನಮಾಡಲಾರಂಭಿಸಿದರು. ತಮ್ಮ ಸುತ್ತುಮುತ್ತಲಿದ್ದ ಜನರು ದುಃಖದಿಂದ ನರಳುವುದನ್ನು ಕಂಡು, ಅನುಕಂಪದಿಂದ ತುಂಬಿ, ಅವರ ದುಃಖದಲ್ಲಿ ಮಾನಸಿಕವಾಗಿ ತಾವೂ ಭಾಗಿಗಳಾಗಿ, ಪರಿಹಾರಮಾರ್ಗವನ್ನು ಕಂಡುಹಿಡಿಯಲು ಹೊರಟರು. 'ಇದಕ್ಕೆಲ್ಲ ಮೂಲವಾದ ಸತ್ಯ ಯಾವುದೋ ಇರಬೇಕು. ಅದನ್ನು ಕಂಡುಹಿಡಿದರೆ, ಅನಂತರ ಪರಿಹಾರಮಾರ್ಗವನ್ನು ಸೂಚಿಸುವುದು ಸುಲಭ' ಎಂದು ಸ್ವಾಭಾವಿಕವಾಗಿ ತಿಳಿದರು, ಸತ್ಯಾನ್ವೇಷಣೆ ಮಾಡಿದರು. ಅಂತಹ ಹಿರಿಯ ಮಾನವರು ತಮಗೆ ಕಂಡುಬಂದ ಸತ್ಯ, ದುಃಖದ ಮೂಲ, ಅದಕ್ಕೆ ಪರಿಹಾರಮಾರ್ಗ ಇವೆಲ್ಲವನ್ನೂ ಬೋಧಿಸತೊಡಗಿದರು; ಮತಸ್ಥಾಪನಾಚಾರ್ಯರುಗಳಾದರು. ಇಂಥ ಹಿರಿಯ ಮಾನವರ ಉಪದೇಶದಿಂದ, ಮೊದಲು ಅವರ ನೆರೆಹೊರೆಯ ಜನರು, ಅನಂತರ ಅವರ ಉಪದೇಶ ಕೇಳಿ ಸಂತಸಗೊಂಡ ಇತರ ಜನರು, ಮನಸ್ಸಿನಲ್ಲಿ ಸಮಾಧಾನವನ್ನು ಹೊಂದಿದರು. ಜಾಜ್ವಲ್ಯಮಾನವಾದ ನಂಬಿಕೆಯೊಂದು ಅವರುಗಳ ಬಾಳಿನ ದಾರಿಯ ತುಂಬ ಬೆಳಕು ಚೆಲ್ಲಿತು.

ಮನಸ್ಸು ಸಮಾಧಾನ ಹೊಂದಿದ ಮೇಲೆ ಮನೋದೈಹಿಕ ಬೇನೆಗಳು ಇಲ್ಲದಂತೆ ಆಯಿತು. ಹೀಗೆ ಸತ್ಯಾನ್ವೇಷಣೆ ಮಾಡಿ, ಜನಸ್ತೋಮಕ್ಕೆ ಸಾವಿರಾರು ವರ್ಷಗಳಿಂದ "ಸಮಾಧಾನವನ್ನೂ ಸಂತಸವನ್ನೂ" ಕರುಣಿಸಿದ ಕೆಲವು ಹಿರಿಯ ಮಾನವರನ್ನು ಭಕ್ತಿಯಿಂದ ತಿಳಿಯಲೆತ್ನಿಸೋಣ. ದೃಢವಾದ ನಂಬಿಕೆಯನ್ನು ಮನಸ್ಸಿನಲ್ಲಿಟ್ಟುಕೊಂಡಿರುವವರು ಬೆಂಕಿಯ ಮೇಲೆ ಬರಿಗಾಲಿನಲ್ಲಿ ನಡೆಯುವುದು

ಸಾಧ್ಯ ಎಂಬುದನ್ನು ಈಗಾಗಲೇ ನೋಡಿದ್ದೇವೆ. ಅಂದರೆ, ಅಂತಹ ನಂಬಿಕೆ ಇದ್ದವರು, ಕಂಡರೂ ನಂಬಲಾರದಂತಹ ಪವಾಡಗಳನ್ನು ಸಾಧಿಸುತ್ತಾರೆ. ದೇಹದ ಅಸಾಧಾರಣ ಕಾರ್ಯಕ್ರಮಗಳಿಗೆ ಮಾನಸಿಕವಾದ ನಂಬಿಕೆಯು ಪ್ರೇರಣೆಯೂ ಸಾಧಕವೂ ಆಗಬಹುದು.

ಇಂತಹ ನಂಬಿಕೆಯು ಸಾಮಾನ್ಯವಾಗಿ ಮನೆದೇವರಲ್ಲಿ, ಕುಲದೇವತೆಯಲ್ಲಿ ಗಾಢವಾಗಿ ಇರಿಸಲ್ಪಟ್ಟಿರುತ್ತದೆ. ಇಂತಹ ನಂಬಿಕೆಯಿದ್ದ ಜನರು, ಮಾನಸಿಕ ಚುರುಕಿನ ದೃಷ್ಟಿಯಿಂದ ಅಷ್ಟೇನೂ ಮುಂದುವರಿದವರಲ್ಲ. ಹಳ್ಳಿಯ ಮೂಢ ಜನರೇ ಬಹಳ. ಆದರೂ ಹಲವಾರು ಸುಸಂಸ್ಕೃತರೂ ವಿದ್ಯಾವಂತರೂ ಇಂತಹ ಗಾಢನಂಬಿಕೆಯನ್ನು ಹೊಂದಿರುತ್ತಾರೆ, ದೈಹಿಕ ಪವಾಡಗಳನ್ನು ನಡಸುತ್ತಾರೆ. ಅಂದಮೇಲೆ, ಈ ಗಾಢನಂಬಿಕೆಯು ಒಮ್ಮೆ ಬೇರೂರಿದರೆ, ಅನಂತರ ಕಲಿತ ವಿದ್ಯೆಯಾಗಲಿ, ಶೇಖರಿಸಿದ ಲೋಕಜ್ಞಾನವಾಗಲಿ ಆ ನಂಬಿಕೆಯನ್ನು ನಾಶಗೊಳಿಸುವುದಿಲ್ಲ. ಆನುವಂಶಿಕವಾಗಿಯೂ ಈ ನಂಬಿಕೆಯು ಬರಬಹುದು ಎಂದು ಊಹಿಸುವುದಕ್ಕೂ ಸಾಕಷ್ಟು ಕಾರಣಗಳಿವೆ.

ಇಂತಹ ನಂಬಿಕೆಯನ್ನು ಹೂಡಿದುದು ಅವರ ಮತ, ಧರ್ಮ, Religion. ಆಯಾ ಮತಸ್ಥಾಪಕರು ಯಾವ ರೀತಿಯಲ್ಲಿ ತಮ್ಮ ನಂಬಿಕೆಯನ್ನು ಇಷ್ಟು ಯಶಸ್ವಿಯಾಗಿ ಜನರಲ್ಲಿ ಹೂಡಿದರು ? ಎಂಬುದನ್ನು ತಿಳಿದರೆ, ಈ ತನಕ ನಂಬಿಕೆ ಇಲ್ಲದವರಲ್ಲಿ ನಂಬಿಕೆಯನ್ನು ಮೂಡಿಸಬಹುದು. ಯಾವುದಾದರೂ ತತ್ತ್ವವನ್ನು ಗಾಢವಾಗಿ ನಂಬಿದರೆ, ದೇಹವು ಪವಾಡಗಳನ್ನು ನಡಸಬಹುದು ಎಂದು ತಿಳಿದೆವು. ಅಂದರೆ, ದೈಹಿಕ ಬೇನೆಗಳು ಬಾರದಂತೆ, ಬಂದರೂ ಬಲು ಬೇಗ ಗುಣವಾಗುವಂತೆ ಈ ನಂಬಿಕೆಯು ಚಿಕಿತ್ಸೆ ನೀಡಬಹುದು. ಈ ದೃಷ್ಟಿಯಿಂದ, ಮತಸ್ಥಾಪಕರು ಸಾಧಿಸಿದ ರೀತಿಯನ್ನೂ ಅದರ ನೀತಿಯನ್ನೂ ಮನನ ಮಾಡುವುದು ಆವಶ್ಯಕ. ಇಂತಹ ಅಭ್ಯಾಸಕ್ಕೆ ವಿಶ್ವವ್ಯಾಪಕವಾಗಿರುವ ನಾಲ್ಕೈದು ಮತಗಳನ್ನು ಆರಿಸಿಕೊಳ್ಳೋಣ.

## ಬೌದ್ಧಮತ

**ನಮ್ಮ ನುಡಿ, ನಡೆ ಎಲ್ಲಕ್ಕೂ ಮನಸ್ಸೇ ಮೂಲ, ಮನಸ್ಸೇ ಮುಖ್ಯ. ಪ್ರಸನ್ನವಾದ ಮನಸ್ಸಿನಿಂದ ನುಡಿದರೆ ಅಥವಾ ನಡೆದರೆ, ಅದರಿಂದ ಸುಖವಾಗುತ್ತದೆ. ಪ್ರದುಷ್ಟವಾದ ಮನಸ್ಸಿನಿಂದ ನುಡಿದರೆ ಅಥವಾ ನಡೆದರೆ, ಅದರಿಂದ ದುಃಖವುಂಟಾಗುತ್ತದೆ.**

**—ಧಮ್ಮಪದ**

ಸುಮಾರು ೨೫೦೦ ವರ್ಷಗಳ ಹಿಂದೆ ರಾಜಮನೆತನದಲ್ಲಿ ರಾಜಕುಮಾರನಾಗಿ ಹುಟ್ಟಿದ ಸಿದ್ಧಾರ್ಥನಿಗೆ ಸಕಲ ಸೌಭಾಗ್ಯಗಳೂ ಹೇರಳವಾಗಿ ದೊರಕಿದುವು. ಆದರೂ ರೋಗ, ಮುಪ್ಪು, ನೋವು ಸಾವುಗಳನ್ನು ಆತ ಕಂಡಾಗ, ಆತನಿಗೆ ಅನುಕಂಪ ಹುಟ್ಟಿತು. ಇವುಗಳಿಂದ ಮಾನವನು ಬಿಡುಗಡೆ ಹೊಂದಬೇಕಾದರೆ ಏನುಮಾಡಬೇಕು ? ಎಂದು ತೀವ್ರವಾಗಿ ವಿಚಾರಮಾಡಿದನು. ಹಲವಾರು ಮಾರ್ಗಗಳನ್ನು ಶೋಧಿಸಿದ ಮೇಲೆ, ಅವುಗಳಿಂದ ಪರಿಹಾರವನ್ನು ಕಾಣದೆ, ತೀವ್ರತಪಸ್ಸು ಮಾಡಲು ಮರದ ಕೆಳಗೆ ಕುಳಿತ. ಮಾನವರ ಮೇಲಿನ ಅನುಕಂಪದಿಂದ, ತಾನೇ ಪರಿತಪಿಸುತ್ತ ಹಲವಾರು ದಿನ ವಿಚಾರ ಮಾಡಿದಾಗ ಆತನಿಗೆ ಸುಮುಹೂರ್ತ ಒಂದರಲ್ಲಿ ಹಠಾತ್ತನೆ ಪರಿಹಾರ ಮಾರ್ಗವು ಸ್ಫುಟವಾಗಿ ತಿಳಿಯಿತು. ಆತನ ಮನಸ್ಸು ಆನಂದದಿಂದ ಕೂಡಿತು, ಸಮಾಧಾನ ಹೊಂದಿತು. ಅನಂತರ ಬುದ್ಧನಾದ. ಆತ ತಾನು ಅರಿತದ್ದನ್ನು ದೇಶವನ್ನೆಲ್ಲಾ ಸುತ್ತಿ ಕಂಡವರಿಗೆಲ್ಲಾ ಕಲಿಸಿಕೊಡಲು ಶುರುಮಾಡಿದ.

ಸಮಾಜವನ್ನು ಸರಿಪಡಿಸಲು ನೀತಿನಿಯಮಗಳನ್ನು ನಿರೂಪಿಸಿದ. ಸಂಘದ ಹಿರಿಮೆಯನ್ನು ಉಳಿಸಿಕೊಳ್ಳಲು ಉಪಾಯಗಳನ್ನು ಕಲಿಸಿದ, ಧರ್ಮದ ರೂಪರೇಖೆಗಳನ್ನು ಬಣ್ಣಿಸಿ ಹೇಳಿದ. ಧರ್ಮವನ್ನು ಅವಿಶ್ರಾಂತವಾಗಿ ಅನುಸರಿಸಬೇಕೆಂದು ಉಪದೇಶಮಾಡಿದ. ಮನಸ್ಸು 'ಪ್ರಬುದ್ಧ'ವಾಗಿ, ತಳಮಳದಿಂದ ಪಾರಾಗಲು, ಹಾಗೂ ನಿರ್ವಾಣವನ್ನು ಹೊಂದಿ, ಆನಂದವನ್ನು ಸಾಧಿಸಲು ಏನೇನು ಮಾಡಬೇಕು ಎಂಬುದನ್ನು ತಿಳಿಯಾದ ಭಾಷೆಯಲ್ಲಿ ತರ್ಕ ಸಾಕ್ಷ್ಯಗಳಿಂದ ಕಲಿಸಿಕೊಟ್ಟ.

ಬೌದ್ಧಮತವು ಪ್ರಪಂಚದಲ್ಲೆಲ್ಲ ಹರಡಿತು. ಭಾರತದಲ್ಲಿ ಜನ್ಮವೆತ್ತಿದ ಈ ಮತವು ಸೀಮೋಲ್ಲಂಘನಮಾಡಿ, ಎಲ್ಲ ಮಾನವರ ಕಲ್ಯಾಣಕ್ಕಾಗಿ ಮೈತ್ರಿಯಿಂದ ದುಡಿಯಿತು. ಲಕ್ಷಾಂತರ ಮಾನವರಿಗೆ ಮನಸ್ಸಿನ ಸಮಾಧಾನವನ್ನೂ ಬಾಳದೀವಿಗೆಯಾದ ನಂಬಿಕೆಯನ್ನೂ ಅನುಗ್ರಹಿಸಿತು.

ರೋಗ, ಮುಪ್ಪು, ನೋವು ಸಾವುಗಳೇನಾದರೂ ಬುದ್ಧನ ಕಾಲದಿಂದ ಈ ಕಾಲದ ತನಕ, ಎಲ್ಲಾದರೂ ಕಡಮೆಯಾಗಿವೆಯೇ ? ಇಲ್ಲ. ಒಂದಲ್ಲ ಒಂದು ರೂಪಿನಲ್ಲಿ ಎಂದಿನಂತೆಯೇ ತಾಂಡವವಾಡುತ್ತಿದೆ. ಅಂದಮೇಲೆ, ಬುದ್ಧ ಸಾಧಿಸಿದ್ದೇನು ? ನಮ್ಮ ಮನಸ್ಸಿನಲ್ಲಿ ದೃಢವಾದ ನಂಬಿಕೆಯನ್ನು ಹುಟ್ಟಿಸಿ, ಬಾಳಿನಲ್ಲಿ ಸಮತೆಯನ್ನು (ಅಂದರೆ ಮಧ್ಯಮಮಾರ್ಗವನ್ನು) ಅನುಸರಿಸಿದರೆ, ಏನು ಕಷ್ಟ ಬಂದರೂ ಮನಸ್ಸು ತಳಮಳಗೊಂಡು ದೈಹಿಕ ಪ್ರತಿಕ್ರಿಯೆಯನ್ನು ತೂಡದಂತೆ, ಇರುವ ಉಪಾಯವನ್ನು ಉಪದೇಶಮಾಡಿದ. ಬುದ್ಧನು ಅನುಪಮ ವೈದ್ಯ ಎಂದೆನ್ನುವುದು ಎಷ್ಟು ಸತ್ಯವಾದ ಮಾತು ! ಆರೋಗ್ಯಭಾಗ್ಯಕ್ಕೆ ಆತನಿತ್ತ ಸಲಹೆ ಎಷ್ಟು ಅಮೋಘವಾದುದು ! !

ಅಲ್ಲದೆ, ಧರ್ಮದ ಅರಿವನ್ನೂ ಮಾಡಿಕೊಟ್ಟ. ಮೂಲಭೂತವಾಗಿ ಒಳ್ಳೆಯದು ಎಂದು ನಾವಂದುಕೊಂಡಿರುವುದು ಒಳ್ಳೆಯದನ್ನೇ ಮಾಡುತ್ತದೆ. ಕೆಟ್ಟುದು ಅಂದಂದುಕೊಂಡಿರುವುದು ಕೆಟ್ಟದ್ದನ್ನೇ ಮಾಡುತ್ತದೆ. ಇವೆಲ್ಲಕ್ಕೂ ಆಸೆ, ಚಪಲ, 'ನಮಗೆ ಬೇಕು' ಎಂದೆನ್ನುವ ಮನಃಪ್ರವೃತ್ತಿಯೇ ಕಾರಣ. ಇದು ಹೆಚ್ಚಾದರೆ ಕೆಟ್ಟದ್ದನ್ನೇ ಮಾಡಿಸುತ್ತದೆ. ಇದು ಇಲ್ಲದೇ ಇದ್ದರೂ ಕೆಟ್ಟದ್ದನ್ನೇ ಮಾಡಿಸುತ್ತದೆ. ಅದಕ್ಕೇ ಮಧ್ಯಮಮಾರ್ಗವನ್ನು ಹಿಡಿದು, ನಮಗೆ ಅತ್ಯವಶ್ಯಕವಾದುದಕ್ಕೆ ಮಾತ್ರ ಆಸೆಪಟ್ಟರೆ ಹಿತವಾದ ಬಾಳನ್ನು ನಡಸಬಹುದು ಎಂದೂ ಕಲಿಸಿದ.

ನಿತ್ಯಜೀವನದಲ್ಲಿ ತೊಳಲಿ ನರಳುತ್ತಿದ್ದ ಮಾನವರಿಗೆ ಈ ಮೂರೂ ಉಪದೇಶಗಳು ಅಮೃತವಾದುವು. ಅಂದಿನಿಂದ ಅವರು ಆತನ ಮಾತಿನಲ್ಲಿ ಪೂರ್ಣ ನಂಬಿಕೆಯಿಟ್ಟು, ಅನುಸರಿಸಲು ಯತ್ನಿಸಿದರು. ಆದಕಾರಣವೇ ಅವರು

ಬುದ್ಧಂ ಶರಣಂ ಗಚ್ಛಾಮಿ
ಧರ್ಮಂ ಶರಣಂ ಗಚ್ಛಾಮಿ
ಸಂಘಂ ಶರಣಂ ಗಚ್ಛಾಮಿ

ಎಂಬ ಮಂತ್ರವನ್ನು ಹೃದಯಾಂತರಾಳದಿಂದ ಸಂ , ಪಠಿಸಲು ಶುರು ಮಾಡಿದನು.

## ಚೀಣೀಯರ ಮತಗಳು

ಸುಮಾರು ೨೫೦೦ ವರ್ಷಗಳ ಹಿಂದಿನ ಮಾತು.

ತ್ಸು ಕುಂಗ್ ಕೇಳಿದನು :

ಮಾನವನ ಧರ್ಮ ಮತ್ತು ಕರ್ತವ್ಯವನ್ನು ಪೂರ್ಣವಾಗಿ ವಿವರಿಸುವ ಒಂದು ಮಾತು ಇದೆಯೇ ?

ಕನ್ಫ್ಯೂಷಿಯಸ್ ಉತ್ತರಿಸಿದನು :

ಪ್ರಾಯಶಃ ಅನುಕಂಪ ಎಂಬುದು ಆ ಮಾತು ಆಗಿರಬಹುದು. ಏನಗೆ ಇತರರು ಏನನ್ನು ಮಾಡಬಾರದು ಎಂದು ನಿನಗನ್ನಿಸುತ್ತದೆಯೋ ಅದನ್ನು ನೀನು ಇತರರಿಗೆ ಮಾಡಬಾರದು.

ಕನ್ಫ್ಯೂಷಿಯಸ್ ಮೂರು ವರ್ಷದ ಬಾಲಕನಾಗಿದ್ದಾಗ ಆತನ ತಂದೆ ಮರಣಹೊಂದಿದನು. ಆತನ ತಾಯಿ ಬಡತನದಲ್ಲಿ ಸಲಹಿ ವಿದ್ಯೆ ಕಲಿಸಿದಳು. ೨೩ರ ಪ್ರಾಯದಲ್ಲಿ ಕನ್ಫ್ಯೂಷಿಯಸ್ ದೊಡ್ಡ ಹುದ್ದೆಯಲ್ಲಿದ್ದಾಗ, ಆತನ ತಾಯಿ ಮರಣ ಹೊಂದಿದಳು. ಅವರ ಜನರಲ್ಲಿ ತಂದೆತಾಯಿ ಸತ್ತರೆ ಮೂರು ವರ್ಷ ಸೂತಕವನ್ನು ಆಚರಿಸುತ್ತಿದ್ದರು. ಕೆಲಸವಿಲ್ಲದ ಆ ಮೂರೂ ವರ್ಷ, ಹಿನ್ನವರ ಚರಿತ್ರೆ, ಪದ್ಯಗಳು, ತತ್ತ್ವವಿಚಾರ, ಇವುಗಳನ್ನು ಆತ ಆಳವಾಗಿ ಅಭ್ಯಸಿಸಿ, ವ್ಯಾಸಂಗಮಾಡಿ, ಮನನಮಾಡಿದ. ಅನಂತರ ಆತ ತನ್ನ ಹುದ್ದೆಗೆ ಹಿಂತಿರುಗಲಿಲ್ಲ. ಜೀವನೋಪಾಯಕ್ಕಾಗಿ ಪಾಠಹೇಳಿಕೊಡಲು ಶುರುಮಾಡಿದ. ಪಾಠ ಹೇಳಿದಾಗ ಅಲ್ಲವೇ, ಪಾಠವನ್ನು ಚೆನ್ನಾಗಿ ಕಲಿಯಲು ಸಾಧ್ಯ !

ಆತನಿಗೆ ೫೨ ವಯಸ್ಸಾಗಿದ್ದಾಗ ಚುಂಗ್ ಟು ಪಟ್ಟಣದ ನಾಗರಿಕರು ಆತನ ಬುದ್ಧಿವಂತಿಕೆಯನ್ನು ಕಂಡು, ಬಳಿಗೆ ಬಂದು. "ನಮ್ಮೂರಿನ ಆಡಳಿತ ವನ್ನು ವಹಿಸಿಕೊಳ್ಳಿ" ಎಂದು ಬಿನ್ನವಿಸಿಕೊಂಡರು. ಆತನೂ ಒಪ್ಪಿದ. ಒಂದು ವರ್ಷದ ಒಳಗೆ ಆ ಪಟ್ಟಣದ ಸಮಾಜವನ್ನು ಅನುಪಮವಾದ ರೀತಿಯಲ್ಲಿ

ನಿರ್ದೇಶಿಸಿದ ; "ಶಿಸ್ತು ಸಂತೋಷಗಳು ಈ ಪಟ್ಟಣದಲ್ಲಿರುವಂತೆ ಇನ್ನೆಲ್ಲೂ ಇಲ್ಲ" ಎಂಬ ಕೀರ್ತಿಯನ್ನು ಆ ಪಟ್ಟಣಕ್ಕೆ ಗಳಿಸಿಕೊಟ್ಟ.

ಈ ಯಶಸ್ಸೇ ಅವನಿಗೆ "ಲು" ದೇಶದ ಕಾನೂನುಸಚಿವ ಪದವಿಯನ್ನು ಗಳಿಸಿಕೊಟ್ಟಿತು. ಆಗಲೇ ಆತನು ಸಮಾಜದಲ್ಲಿ ಹೇಗೆ ಬಾಳಬೇಕು, ಯಾವ ವಿದ್ಯೆಯನ್ನು ಕಲಿಯಲೇಬೇಕು, ಒಳ್ಳೆಯವನು ಎನಿಸಿಕೊಳ್ಳುವುದು ಹೇಗೆ ? ಇವೆಲ್ಲವನ್ನೂ ಜನರಿಗೆ ಕಲಿಸಿಕೊಟ್ಟನು. ಆತನು ಮಾಡಿದ ಉಪದೇಶಗಳನ್ನೆಲ್ಲಾ ಆತನ ಮೊಮ್ಮಗ ಕೈಗ್ ಎಂಬಾತನು 'ಮಧ್ಯಮಮಾರ್ಗದ ರೀತಿನೀತಿಗಳು' ಎಂಬ ಪುಸ್ತಕದಲ್ಲಿ ಸಂಗ್ರಹಿಸಿಟ್ಟ. ಸಮಾಜದಲ್ಲಿನ ನಿತ್ಯಜೀವನಕ್ಕೆ ಅನುಕೂಲವಾದ ಎಲ್ಲ ಉಪದೇಶಗಳೂ ಇದರಲ್ಲಿವೆ. ಆದರೆ ಜನನ, ಮರಣ, ಮರಣಾನಂತರ ಆಗುವುದೇನು. ಮೊದಲಾದ ಆಧ್ಯಾತ್ಮಿಕ ವಿಷಯಗಳ ಗೋಜಿಗೆ ಕನ್ಫ್ಯೂಷಿಯಸ್ ಹೋಗಲಿಲ್ಲ.

ಇದೇ ಕಾಲಕ್ಕೆ ಚೀಣಾದಲ್ಲಿ ಲಾಟ್ಸೆ ಎಂಬ ಹಿರಿಯ ತತ್ತ್ವಜ್ಞನು ಇದ್ದನು. ಚಕ್ರವರ್ತಿಯ ಪುಸ್ತಕಭಾಂಡಾರದಲ್ಲಿ ಆತ ಅಧಿಕಾರಿಯಾಗಿದ್ದ. ಹಾಗಾಗಿ, ವ್ಯಾಸಂಗಮಾಡಲು ಆತನಿಗೆ ಹೇರಳವಾದ ಅವಕಾಶವಿತ್ತು. ಓದಿ ಮನನಮಾಡಿದ ಮೇಲೆ ಆತ ತತ್ತ್ವದ ಮೇಲೂ ಮತಗಳ ಮೇಲೂ ತನ್ನ ವ್ಯಾಖ್ಯಾನವನ್ನು ಮಾಡುತ್ತಿದ್ದ. ಬಹಳ ಮೇಧಾವಿಯೆಂದೂ ತುಂಬ ಪ್ರಾಜ್ಞನೆಂದೂ ಆತನನ್ನು ಜನರು ಗೌರವಿಸುತ್ತಿದ್ದರು. "ಟಾವ್ ಟೆ ಕಿಂಗ್" Tao Teh King ಎಂಬ ಸಣ್ಣ ಹೊತ್ತಗೆಯೊಂದನ್ನು ಆತ ಪ್ರಕಟಿಸಿದ. ಅದ್ವೈತದ ಅಭಿಪ್ರಾಯಗಳಿಗೆ ಸುಮಾರು ಸರಿದೂಗುವ ಈ ಪುಸ್ತಕದಲ್ಲಿ Tao ಎಂದರೆ ನಿರಾಕಾರ, ನಿರಂಜನ, ಆದಿಮೂಲ. 'ಟಾವ್' ಅನ್ನು ಸಂಪೂರ್ಣ ನಂಬಿದರೆ, ಲೋಕದ ಯೋಚನೆಯನ್ನು ನಾವು ಮಾಡಬೇಕಾಗಿಲ್ಲ. 'ತಿಳಿದವರು ಹೇಳುವುದಿಲ್ಲ. ಹೇಳುವವರಿಗೆ ತಿಳಿದಿರುವುದಿಲ್ಲ'— ಎಂಬೀ ತೆರನಾದ ಸೂತ್ರಗಳಿಂದ ತುಂಬಿದ ಆತನ ಪುಸ್ತಕವು ಜನರ ಗೌರವವನ್ನು ಗಳಿಸಿದರೂ ಜನರಿಗೆ ಅರ್ಥವಾಗುವಂತಿರಲಿಲ್ಲ. ಮಹಾತ್ಮ ಎಂದು ಆತನನ್ನು ಗೌರವಿಸಿದರೇ ವಿನಾ ಆತನನ್ನು ಅರ್ಥಮಾಡಿಕೊಳ್ಳಲು ಜನತೆಗೆ ಸಾಧ್ಯವಾಗಲಿಲ್ಲ. ಹಾಗಾಗಿ ಆತನ ಶಿಷ್ಯರು ತಮಗೆ ತೋಚಿದ ಟೀಕೆಗಳನ್ನು ಮಾಡಿ. ಲಾಟ್ಸೆ ಹೇಳಿದುದನ್ನು

ಪೂರ್ಣವಾಗಿ ಗೊಂದಲಕ್ಕೀಡುಮಾಡಿದರು. ಹೀಗಾಗಿ, ಜನತೆಗೆ ನಂಬಿಕೆಯನ್ನು ಹುಟ್ಟಿಸಲು ಈ ಮತಾಚಾರ್ಯನು ಅಶಕ್ತನಾದನು.

ಚೀಣದ ಜನರಿಗೆ ಕನ್ಫ್ಯೂಷಿಯಸ್ಸಿನ ಮತದಿಂದ, ಸಂಘದ ಜೀವನಕ್ಕೆ ಸಹಕಾರಿಯಾದ ಉಪದೇಶ ದೊರಕಿತು. ಆದರೆ ಬಾಳಿಗೆ ನಂಬಿಕೆ ತಂದು ಜೀವನವನ್ನು ನಡಸುವ ಗುಣವು ಅದಕ್ಕಿರಲಿಲ್ಲ. ಟಾವೊಇಸಂನಲ್ಲಿ ಅಧ್ಯಾತ್ಮ ಗುಣವಿತ್ತು; ಬಾಳಿಗೆ ನಂಬಿಕೆ ತರುವ ಗುಣವಿತ್ತು: ಆದರೆ ಯಾರಿಗೂ ಅರ್ಥ ವಾಗಲಿಲ್ಲ. ಆದುದರಿಂದಲೇ ೪–೫ ಶತಮಾನಗಳನಂತರ ಬುದ್ಧನ ಉಪದೇಶ ಗಳು ಚೀಣಾದಲ್ಲಿ ಹರಡಿದಾಗ, ಜನತೆಯು ಬೌದ್ಧಮತವನ್ನು ಅವಲಂಬಿಸಿದರು. ಬಾಳಿಗೆ ನಂಬಿಕೆಯನ್ನು ಗಾಢವಾಗಿ ನೀಡುತ್ತಿದ್ದ ಬುದ್ಧನ ಹಿತವಚನಗಳು ಅವರಿಗೆ ಪ್ರಿಯವಾದುವು. ಅದೇ ರೀತಿಯಲ್ಲಿ ಕ್ರಿಸ್ತನ ಉಪದೇಶಗಳು ಚೀಣಾ ದಲ್ಲಿ ಪ್ರಚುರವಾದಾಗ ಹಲವಾರು ಜನರು ಕ್ರೈಸ್ತಮತಕ್ಕೆ ಸೇರಿಕೊಂಡರು. ಹೀಗೆ ಹೊಸಮತವನ್ನು ಸೇರಿಕೊಂಡಾಗ ಚೀಣೀಯರು ಕನ್ಫ್ಯೂಷಿಯಾನಿಸಂ ಅನ್ನಾಗಲಿ, ಟಾವೊಇಸಂಅನ್ನಾಗಲಿ ಬಿಟ್ಟುಬಿಡಲಿಲ್ಲ, ಅವುಗಳೆರಡರ ಜೊತೆಗೆ ಬೌದ್ಧರೋ ಕ್ರೈಸ್ತರೋ ಆದರು.

ಅಂದರೆ, ದೃಢವಾದ ನಂಬಿಕೆಯನ್ನು ಜನತೆಯ ಮನಸ್ಸಿನಲ್ಲಿ ಮೂಡಿ ಸಲು ಬುದ್ಧನ ಉಪದೇಶಗಳೂ ಕ್ರಿಸ್ತನ ಉಪದೇಶಗಳೂ ಎಷ್ಟು ಯಶಸ್ವಿ ಯಾದವೋ ಅಷ್ಟು ಕನ್ಫ್ಯೂಷಿಯಾನಿಸಂನಿಂದಾಗಲಿ ಟಾವೊಇಸಂಇಂದಾಗಲಿ ಪರಿಣಾಮವಾಗಲಿಲ್ಲ.

## ಜರತುಷ್ಟ್ರಮತ

ಚೆನ್ನಾಗಿ ಆಲೋಚಿಸಲ್ಪಟ್ಟ ಯೋಚನೆಯನ್ನೂ ಚೆನ್ನಾಗಿ ಆಡಿದ ಮಾತನ್ನೂ ಚೆನ್ನಾಗಿ ಮಾಡಿದ ಕಾರ್ಯವನ್ನೂ ನಾನು ಮುಕ್ತಕಂಠದಿಂದ ಹೊಗಳುತ್ತೇನೆ.

—ಸೌರಾಷ್ಟ್ರೀಯರ ಪ್ರಾರ್ಥನೆಯ ಭಾಗ, ಕ್ರಿ. ಪೂ. ೬೬೦.

ಸುಮಾರು ೨೬೦೦ ವರ್ಷಗಳ ಕೆಳಗೆ, ಪರ್ಷಿಯಾ ದೇಶದಲ್ಲಿ (ಈಗಿನ

(ಇರಾನ್) ಸರತುಷ್ಟ್ರನು ಜನ್ಮವೆತ್ತಿದನು. ಏಳು ವರ್ಷವಾದಾಗ ಈ ಬಾಲಕನು ಪ್ರಸಿದ್ಧ ಪಂಡಿತನಾಗಿದ್ದ ಬುರ್ಸಿನ್ ಕುರುಸ್ ಎಂಬಾತನಲ್ಲಿ ಶಿಷ್ಯ ವೃತ್ತಿಯನ್ನು ಕೈಕೊಂಡು, ಎಂಟು ವರ್ಷಗಳು ವ್ಯಾಸಂಗಮಾಡಿ, ವೈದ್ಯ ಕೃಷಿ ಇತ್ಯಾದಿಗಳನ್ನು ಕಲಿತನು. ತಂದೆಯ ಮನೆಗೆ ಹಿಂದಿರುಗಿದಾಗ ದೇಶದಲ್ಲಿ ಯುದ್ಧವೊಂದು ಆರಂಭವಾಯಿತು. ಐದು ವರ್ಷಗಳ ಕಾಲ ಸೈನ್ಯದಲ್ಲಿ ಗಾಯಗೊಂಡವರಿಗೆ ನೆರವಾದನು. ಅನಂತರ ಹಿಂದಿರುಗಿದಾಗ, ತಂದೆಯ ಅಭಿಲಾಷೆಯಂತೆ, ಕೃಷಿಗೆ ತೊಡಗದೆ, ನೊಂದು ಬೆಂದವರಿಗೆ, ರೋಗಗ್ರಸ್ತರಿಗೆ ಸಹಾಯ ಮಾಡುವುದನ್ನೇ ಮುಂದುವರಿಸಿದ. ತಾನೆಷ್ಟು ದುಡಿದರೂ ಜನರ ಕಷ್ಟಸಂಕಟಗಳು ಹೆಚ್ಚುತ್ತಿದ್ದವೇ ಹೊರತು ಕಡಮೆಯಾಗುತ್ತಿರಲಿಲ್ಲ. ಹಾಗಾಗಿ, 'ಈ ಕಷ್ಟ ಸಂಕಟಗಳು ಎಲ್ಲಿಂದ ಬರುತ್ತವೆ ?' ಎಂದು ಆತ ಯೋಚಿಸತೊಡಗಿದ. ಮನೆಯಲ್ಲಿದ್ದು ಯೋಚಿಸಿದರೆ ಸಾರ್ಥಕವಾಗಲಾರದು ಎನಿಸಿತು. ಆಗ ಸಬಲಾನ್ ಬೆಟ್ಟಕ್ಕೆ ಹೋಗಿ, ಮನನ ಮಾಡುತ್ತ ತಪಸ್ಸಿಗೆ ಕುಳಿತ. ದಿನಗಳಾದುವು, ತಿಂಗಳುಗಳು ಕಳೆದುವು ; ಒಬ್ಬನೇ ಆಳವಾಗಿ ಆಲೋಚಿಸುತ್ತಿದ್ದ. ಕಡೆಗೊಮ್ಮೆ ಅವನಿಗೆ, ಸಂಧ್ಯೆಯನ್ನು ಬೆಟ್ಟದಿಂದ ನೋಡುತ್ತಿದ್ದಾಗ; ಹಠಾತ್ತಾಗಿ ಅರಿವು ಮೂಡಿತು. "ಹಗಲು ರಾತ್ರಿ ಇದ್ದಹಾಗೆ, ಬೆಳಕು ಕತ್ತಲೆ ಸ್ವಾಭಾವಿಕವಾಗಿ ಇದ್ದಹಾಗೆ, ಒಳ್ಳೆಯದು ಕೆಟ್ಟದು ಎರಡೂ ಇರುತ್ತವೆ. ಒಳ್ಳೆಯದು ಒಳ್ಳೆಯದನ್ನೇ ಮಾಡುತ್ತ ವೃದ್ಧಿಯಾಗುತ್ತದೆ. ಕೆಟ್ಟದ್ದು ಕೆಟ್ಟದ್ದನ್ನೇ ಮಾಡುತ್ತ ಬೆಳೆಯುತ್ತದೆ. ಕೊನೆಗೆ ಒಳ್ಳೆಯದೇ ಗೆಲ್ಲುತ್ತದೆ. ಏಕೆಂದರೆ, ಕೆಟ್ಟದ್ದಕ್ಕೆ ದೂರಾಲೋಚನೆ ಇಲ್ಲ" ಎಂದು ಆತನಿಗೆ ಅನಿಸಿತು.

ಬೆಟ್ಟದಿಂದ ಇಳಿದು ಬಂದು, ತಾನು ಅರಿತಿದ್ದನ್ನು ಜನರಿಗೆ ಬೋಧಿಸಲು ಪ್ರಾರಂಭಿಸಿದ. ಹತ್ತು ವರ್ಷಗಳು ದುಡಿದರೂ ಜನರು ಆತನನ್ನು ಹಿಂಬಾಲಿಸಲಿಲ್ಲ. "ಬುದ್ಧಿವಂತರು ನನ್ನನ್ನು ಅರ್ಥಮಾಡಿಕೊಂಡು ಬಾಳುವರು" ಎಂದು ಯೋಚಿಸಿ, ದೇಶದ ಅರಸನನ್ನು ಭೇಟಿಯಾಗಿ ತನ್ನ ಉಪದೇಶವನ್ನು ಆತನಿಗೆ ಮಾಡಿದ. "ಅಹುರಮಜ್ದ ಬ್ರಹ್ಮಾಂಡದ ಏಕೈಕ ದೇವರು. ಆದರೆ, ಆಂಗ್ರ ಮನ್ಯು ಕೆಟ್ಟದ್ದೆಲ್ಲದರ ಮೂರ್ತಿ. ಲೋಕದಲ್ಲಿ ಇವರಿಬ್ಬರ ಸೆಣಸಾಟವು ನಡೆಯುತ್ತಿರುತ್ತದೆ. ಏಕೆಂದರೆ, ಅಹುರಮಜ್ದ ಮಾನವನಿಗೆ ಪ್ರಾಜ್ಞತೆಯನ್ನು ಅನುಗ್ರಹಿಸಿ, "ಎರಡರಲ್ಲಿ ಬೇಕಾದುದನ್ನು ನೀನೇ ಆಯ್ಕೆಮಾಡಿಕೊ" ಎಂದು

ಹೇಳಿದ. "ಮಾನವನು ಚಿರಕಾಲದ ಹಿತವನ್ನು ಬಯಸಿದರೆ, ಲೋಕದಲ್ಲಿ, ಹಿತವಾಗಿ ಬಾಳು ನಡಸಬೇಕಾದರೆ ಅಹುರಮಸ್ದನನ್ನು ಆರಾಧಿಸಬೇಕು. ಅದು ಬಿಟ್ಟು ಅಂಗ್ರಮನ್ಯುವನ್ನನುಸರಿಸಿದರೆ, ತಾತ್ಕಾಲಿಕ ಸುಖ ಬರಬಹುದಾದರೂ, ಮರುಕ್ಷಣದಲ್ಲೇ ದುಃಖವು ಬಂದೇಬರುತ್ತದೆ". ಅವೆಸ್ತ ಎಂಬ ಮತೀಯ ಪುಸ್ತಕದಲ್ಲಿ ಈ ಉಪದೇಶಗಳನ್ನೆಲ್ಲಾ ಸಂಗ್ರಹಿಸಲಾಗಿದೆ.

ಭಾರತೀಯರ ಸಂಸ್ಕೃತಿಗೆ ಸುಲಭವಾಗಿ ಅರ್ಥವಾಗುವ ಈ ಪಾಪಪುಣ್ಯಗಳ ದ್ವಂದ್ವಮೇಳವು ಪರ್ಶಿಯಾದಲ್ಲಿದ್ದ ಜನರ ಮನಸ್ಸಿನಲ್ಲಿ ಬಾಳಿಗೆ ಆವಶ್ಯಕವಾದ ನಂಬಿಕೆಯನ್ನು ಹುಟ್ಟಿಸಿತು. ಈ ಮತದ ಅನುಯಾಯಿಗಳಾದ ಪಾರ್ಸಿಗಳು, ಈ ನಂಬಿಕೆಯನ್ನು ಇಂದಿಗೂ ದೃಢವಾಗಿ ಹಿಡಿದು, ಆತನು ಹೇಳಿದಂತೆ ದುಡಿಮೆಯ ಬಾಳನ್ನು ನಡಸಿಕೊಂಡು, ಸಮಾಜದಲ್ಲಿ ಅತ್ಯುತ್ಕೃಷ್ಟವಾದ ಆರ್ಥಿಕಸ್ಥಿತಿಯನ್ನು ಗಳಿಸಿಕೊಂಡಿದ್ದಾರೆ.

## ಕ್ರೈಸ್ತಮತ

ಒಬ್ಬರನ್ನೊಬ್ಬರು ಪ್ರೀತಿಯಿಂದ ಕಂಡರೆ, ಅಂತಹವರು ನನ್ನ ಶಿಷ್ಯರು ಎಂದು ಎಲ್ಲರೂ ತಿಳಿಯಬಹುದು.

—ಯೇಸುವಿನ ಕೊನೆಯ ಸಂದೇಶದಿಂದ.

೧೯೭೦ಳ ವರ್ಷಗಳ ಹಿಂದೆ, ಜೆರೂಸಲಂನಿಂದ ಸುಮಾರು ೫೫ ಮೈಲಿ ದೂರವಿದ್ದ ಬೆತ್ಲೆಹಂ ಎಂಬ ಊರಿನಲ್ಲಿ, ಬಡಗಿ ಜೋಸೆಫನ ಹೆಂಡತಿಯಾದ ಮೇರಿಗೆ ಪುತ್ರೋತ್ಸವವಾಯಿತು. ತಾನು ಕಂಡ ಕನಸುಗಳಿಂದ ಭೀತನಾದ ಜೋಸೆಫನು ಈಜಿಪ್ಟಿಗೆ ಸಂಸಾರದೊಂದಿಗೆ ಓಡಿಹೋದ. ಜೆರೂಸಲಂನಲ್ಲಿದ್ದ ದೊರೆ ಹೆರಡ್ ಸತ್ತುಹೋದನೆಂಬ ವಾರ್ತೆಯನ್ನು ಕೇಳಿದಮೇಲೆ ಜೋಸೆಫನು ಸ್ವದೇಶಕ್ಕೆ ಹಿಂದಿರುಗಿ, ನಾಸರತ್ ಎಂಬ ಊರಲ್ಲಿ ವಾಸಮಾಡತೊಡಗಿದ. ಜರೂಸಲಂನಿಂದ ಈ ಊರು ಸುಮಾರು ೫೫ ಮೈಲಿ ದೂರ. ಯೆಹೂದಿ

ಯರ ಆಚಾರಗಳನ್ನೂ ಪ್ರಾರ್ಥನೆಗಳನ್ನೂ ತಂದೆತಾಯಿಯರು ಮಗು ಯೇಸು ವಿಗೆ ಕಲಿಸಿದರು. ಬೆಳೆಯುತ್ತಿದ್ದ ಬಾಲಕನು ಭಾನುವಾರದ ದಿನ, ಮತೀಯ ಪ್ರಾರ್ಥನಾಮಂದಿರಗಳಿಗೆ ಹೋಗಿ, ಅಲ್ಲಿ ಹಿರಿಯರು ಸುಲಭಭಾಷೆಯಲ್ಲಿ ಹೇಳು ತ್ತಿದ್ದ ಬುದ್ಧಿವಾದಗಳನ್ನೂ ಕತೆಗಳನ್ನೂ ಪ್ರಾರ್ಥನೆಗಳನ್ನೂ ಆಸಕ್ತಿಯಿಂದ ಕೇಳುತ್ತಿದ್ದ. ಯೆಹೂದಿಯರನ್ನೂ ಲೋಕವನ್ನೂ ಉದ್ಧಾರಮಾಡುವ ದೇವರ ಅವತಾರವೊಂದು ಕ್ಷಿಪ್ರದಲ್ಲಿಯೇ ಆಗಲಿವೆ ಎಂಬ ಅವರುಗಳ ದೃಢವಿಶ್ವಾಸದ ಮಾತುಗಳನ್ನು ಕೇಳಿದ್ದ. ತಂದೆಯು ತೀರಿಕೊಂಡ ಮೇಲೆ ತಾಯಿಯೊಂದಿಗೆ ಕ್ಯಾನ ಎಂಬ ಆಕೆಯ ತೌರಿನ ಹಳ್ಳಿಗೆ ಹೋಗಿ, ಬಡಗಿಯ ಕೆಲಸವನ್ನು ಮಾಡಿ ಕೊಂಡು, ಬಾಳನ್ನು ಸಾಗಿಸುತ್ತಿದ್ದ, ಯೇಸು.

ಮೂವತ್ತು ವರ್ಷ ವಯಸ್ಸಾದಾಗ, ಯೇಸು, ತನ್ನ ದೂರದ ಸಂಬಂಧಿ ಯಾದ ಜಾನ್ ಎಂಬಾತನ ಕೀರ್ತಿಯನ್ನು ಕೇಳಿ, ಆತನನ್ನು ಕಾಣಲು ಜೋರ್ಡನ್ ನದೀತೀರಕ್ಕೆ ಹೋದ. ಅಲ್ಲಿ ಆತ ಕಂಡದ್ದೇನು ?

ಮೂವತ್ತರ ಪ್ರಾಯದ, ತುಂಬು ದಾಡಿ ಬೆಳಸಿದ್ದ, ಕೆದರಿದ ಕೂದಲಿನ ಒಬ್ಬಾತ ಆವೇಶ ಬಂದವನಂತೆ ಬಿರುನುಡಿಯಲ್ಲಿ 'ಅವತಾರಪುರುಷನು ಆಗ ಮಿಸುತ್ತಾನೆ' ಎಂಬ ಸುದ್ದಿಯನ್ನು ಮಿಂದು ಮಡಿಯಾದ ಜನರಿಗೆ ತಿಳಿಸು ತ್ತಿದ್ದ.

ಉಪದೇಶ ಮುಗಿದ ಮೇಲೆ ಯೇಸುವು ಜಾನ್‌ನ ಬಳಿಗೆ ಹೋಗಿ, 'ನಾನೂ ನದಿಯ ಸ್ನಾನ ಮಾಡಿ, ಮಡಿಯಾಗಿದ್ದೇನೆ. ನನಗೂ ಉಪದೇಶ ಕೊಡು.' ಎಂದು ಕೇಳಿದ. ಭವಿಷ್ಯದ ಅರಿವಿದ್ದ ಜಾನ್, ಯೇಸುವನ್ನು ಕಂಡು, ಪುಳಕಿತನಾಗಿ. "ನಿನ್ನಿಂದ ನಾನು ಉಪದೇಶ ಪಡೆಯಬೇಕು. ನೀನು ನನ್ನ ಬಳಿಗೆ ಬಂದಿರುವೆಯಲ್ಲಾ!" ಎಂದು ಉದ್ಗಾರ ತೆಗೆದ. ಯೇಸುವು ಒತ್ತಾಯ ಮಾಡಿದ ಮೇಲೆ. ಜಾನ್ ಆತನಿಗೆ ಉಪದೇಶ ಮಾಡಿದ.

ಅವತಾರ ಪುರುಷನ ಆಗಮನದ ವಿಷಯವನ್ನು ಯೇಸುವು ಈ ಮೊದಲೇ ಕೇಳಿದ್ದನಾದರೂ, ಜಾನ್ ಅದನ್ನು ಉಪದೇಶ ಮಾಡಿದ ರೀತಿಯೇ ಬೇರೆ. ದೃಢವಿಶ್ವಾಸದಿಂದ, ಪೂರ್ಣ ನಂಬಿಕೆಯಿಂದ, ಎಳ್ಳಷ್ಟೂ ಅನುಮಾನವಿಲ್ಲದೆ ಜಾನ್ ಆವೇಶದಿಂದ ನುಡಿದಿದ್ದ. ಜಾನಿನ ಈ ದೃಢವಾದ ನಂಬಿಕೆಯು ಯೇಸು ವಿನ ಮನಸ್ಸಿನ ಮೇಲೆ ತೀವ್ರ ಪರಿಣಾಮವನ್ನುಂಟುಮಾಡಿತು.

ಜುಡಿಯುದ ಮರಳುಗಾಡಿನತ್ತ ಯೇಸುವು ಹೊರಟ. ಜಾನ್ ಹೇಳಿದು ದನ್ನೇ ಮನನ ಮಾಡಿದ. ನಾಲ್ವತ್ತು ದಿನಗಳು, ನಾಲ್ವತ್ತು ರಾತ್ರಿಗಳು ಯೇಸುವು ಏಕಾಂಗಿಯಾಗಿ ಮರಳುಗಾಡಿನಲ್ಲಿ ಧ್ಯಾನ, ಮನನಗಳಲ್ಲಿ ತಲ್ಲೀನ ನಾಗಿದ್ದ.

ತಪಸ್ಸು ಮುಗಿದು ಹಿಂದಿರುಗಿದಾಗ ಮಾನವರ ಸೋದರತ್ವ, ಶಾಂತಿ, ಒಲವು, ಇವುಗಳೇ ಆತನ ಮನಸ್ಸನ್ನು ತುಂಬಿದ್ದುವು. ದೇವರ ಹೆಸರಿನಲ್ಲಿ ಜೆರೂಸಲಮ್ಮಿನ ದೇವಾಲಯುವಲ್ಲಿ ಸುಲಿಗೆ, ಅನ್ಯಾಯ, ಅನಾಚಾರಗಳಾಗುವು ದನ್ನು ಕಂಡು ಆತ ಕೆರಳಿ ಕಿಚ್ಚೆಬ್ಬಿಸಿದ. ಅನಂತರ ಮೂರು ವರ್ಷಗಳ ಕಾಲ ತನ್ನ ಉಪದೇಶವನ್ನು ಜನರಲ್ಲೆಲ್ಲಾ ಅವಿಶ್ರಾಂತನಾಗಿ ಹರಡಿದ. ಸುಲಭವಾದ ತಿಳಿಯಾದ ಭಾಷೆಯಲ್ಲಿ, ತಾನು ದೃಢವಾಗಿ ನಂಬಿದುದನ್ನು, ಜೂಡಿಯಾದ ಮರಳುಗಾಡಿನಲ್ಲಿ ತಪಸ್ಸು ಮಾಡಿದ ನಂತರ ಕಂಡ ಸತ್ಯವನ್ನು ಜನತೆಗೆಲ್ಲಾ ಕರುಣಿಸಿದ. ಒಮ್ಮೆ ಕೆಪರ್‌ನಮ್ ಎಂಬಲ್ಲಿ, ಗುಡ್ಡದ ಮೇಲೆ ನಿಂತು ಆತ ನುಡಿದ ಉಪದೇಶವು Sermon on the Mount (ಪರ್ವತಪ್ರಸಂಗ) ಎಂದು ಜಗತ್ಪ್ರಸಿದ್ಧವಾಗಿ, ಕೋಟ್ಯಂತರ ಕ್ರೈಸ್ತರು, ಕೋಟ್ಯಂತರ ಕ್ರೈಸ್ತರಲ್ಲದವರು ಎಲ್ಲರಿಗೂ ಬಾಳದೀವಿಗೆಯಾಗಿದೆ. ಅಷ್ಟು ಸತ್ಯಸುಂದರವಾಗಿದೆ ಅದು.

ಯೇಸುವು ಯೆಹೂದಿಯನಾಗಿ ಅವತರಿಸಿದ. ಯೆಹೂದಿ ಮತವು ಕಲಿಸಿದ ಸಾಂಘಿಕ ರೀತಿನೀತಿಗಳನ್ನು ಅರಿತಿದ್ದ. ಯೆಹೂದಿ ಧರ್ಮವನ್ನು ಆಚರಿಸಿದ್ದ. ಅರಿವು ಮೂಡಿದ ಮೇಲೆ ಯೇಸುವು ಮಾನವನ ಚಟುವಟಿಕೆ ಗಳಲ್ಲಿ ಒಲವು ಅತಿ ಮುಖ್ಯ, ಅತ್ಯಗತ್ಯ ಎಂದು ಅರಿತು ಅದನ್ನು ಬೋಧಿಸಿದ.

ಅಸಂಖ್ಯಾತ ಜನರ ಶ್ರೇಯಸ್ಸಿಗಾಗಿ, ಲೋಕಕಲ್ಯಾಣಕ್ಕಾಗಿ ಯಾವ ನಾದರೂ ಶ್ರಮವಹಿಸಿ ದುಡಿದರೆ, ಕೆಲವು ಸ್ವಾರ್ಥೀ ಜನರಿಂದ ಆತನಿಗೆ ತೊಂದರೆಯಾಗುವುದು ಸ್ವಾಭಾವಿಕ. ಯೇಸುವಿಗೂ ಇದು ತಪ್ಪಲಿಲ್ಲ. ಆತನ ಉಪದೇಶದಿಂದ ಹಲವಾರು ಜನರಿಗೆ ಆರ್ಥಿಕ ತೊಂದರೆಯಾಯ್ತು. ಅವರ ಹಿರಿಮೆಗೆ ಕುಂದುಬಂತು. ಅವರೆಲ್ಲರ ಸಂಚು ಮೋಸಗಳಿಂದ ಯೇಸುವು ೩೩ರ ಪ್ರಾಯದಲ್ಲಿ ಗೊಲ್ಗೊಥಾ ಗುಡ್ಡದ ಮೇಲೆ ಶಿಲುಬೆಗೆ ಏರಿಸಲ್ಪಟ್ಟನು.

ಜನರಲ್ಲಿ ದೃಢವಾದ ನಂಬಿಕೆ ಹುಟ್ಟಿಸಿ, ಅವರುಗಳ ನಿತ್ಯಜೀವನದಲ್ಲಿ ಬೆಳಕುತೋರುವ ಉಪದೇಶಗಳನ್ನು ಯೇಸುವು ಯಶಸ್ವಿಯಾಗಿ ಸಾಧಿಸಿದನು.

'ಜನರಲ್ಲಿ ಪರಸ್ಪರ ಮೈತ್ರಿ ಇರಲಿ. ಲೋಕದಲ್ಲಿ ಶಾಂತಿ ನೆಲಸಲಿ' ಎಂಬ ಸೂತ್ರವನ್ನು ಅರುಹಿ, ಕೋಟ್ಯಂತರ ಜನರ ಹೃದಯದಲ್ಲಿ ಯೇಸುವು ಕಾಲಾತೀತನಾಗಿ ಚಿರಂಜೀವಿಯಾಗಿದ್ದಾನೆ.

## ಇಸ್ಲಾಂ ಮತ

ಹಜರತ್ ಮಹಮ್ಮದರು ನುಡಿದರು :

"ಅಲ್ಲಾನ ಪ್ರೇಮವು ಆತನ ಕೋಪವನ್ನು ಖಂಡಿತವಾಗಿಯೂ ಜಯಿಸುತ್ತದೆ."

ಸುಮಾರು ೧೪೦೦ ವರ್ಷಗಳ ಹಿಂದೆ ಮೆಕ್ಕಾದ ಶ್ರೀಮಂತ ಮನೆತನ ಒಂದರಲ್ಲಿ ಹಜರತ್ ಮಹಮ್ಮದರು ಜನ್ಮ ತಾಳಿದರು. ಬಾಲ್ಯದಲ್ಲೇ ತಾಯಿ ತಂದೆಯರನ್ನು ಕಳೆದುಕೊಂಡು, ಚಿಕ್ಕಪ್ಪ ಅಬು ತಾಲಿಬ್ ಅವರ ರಕ್ಷಣೆಯಲ್ಲಿದ್ದರು. ಕಲಿಯುವ ಕಾಲದಲ್ಲಿ, ಚಿಕ್ಕವಯಸ್ಸಿನವರಾಗಿದ್ದಾಗ, ಮರಳುಗಾಡೇ ಅವರ ಶಾಲೆಯಾಯಿತು. ಹಗಲು ಸೂರ್ಯ, ರಾತ್ರಿ ನಕ್ಷತ್ರಗಳು, ಇವೇ ಅವರ ಗುರುಗಳು. ಪ್ರಕೃತಿಯೇ ಅವರಿಗೆ ಪಾಠ ಕಲಿಸಿತು.

ವ್ಯಾಪಾರಸಾಗಾಣಿಕೆಯ ಒಂಟೆಗಳ ತಂಡವೊಂದಕ್ಕೆ, ವಯಸ್ಸು ಬಂದಾಗ, ಹಜರತ್ ಮಹಮ್ಮದರು ನಾಯಕರಾದರು. ಬಲು ಬೇಗ ತಮ್ಮ ನಿಷ್ಠೆಯಿಂದ, ಸತ್ಯಸಂಧತೆಗೂ ನ್ಯಾಯವಾದ ವ್ಯಾಪಾರಕ್ಕೂ ಎತ್ತಿದ ಕೈ ಎಂಬ ಕೀರ್ತಿಗಳಿಸಿದರು.

ಮೆಕ್ಕಾದಲ್ಲಿ ಆಗ ಖತೀಜಾ ಎಂಬ ಶ್ರೀಮಂತ ಸ್ತ್ರೀಯಿದ್ದಳು. ಹಜರತ್ ಮಹಮ್ಮದರ ಕೀರ್ತಿಯನ್ನು ಕೇಳಿ, ಆಕೆ, ತನ್ನ ವ್ಯಾಪಾರಸಾರಿಗೆಗೆ ಆತನನ್ನು ನೇಮಿಸಿಕೊಂಡಳು. ಮೊದಲ ಸಲ ವರದಿ ಒಪ್ಪಿಸಲು ಹಜರತ್ ಮಹಮ್ಮದರು ಬಂದಾಗ, ಬಾದು ನುಡಿದಾಗ, ಅಂತಹ ಸುಮಧುರಕಂಠವನ್ನು ಹಿಂದೆಂದೂ ಕೇಳದಿದ್ದ ಆಕೆ ಕೇಳಿ ಚಕಿತಳಾದಳು. ನುಡಿದ ಮಾತುಗಳು ಕೂಡ ತಾಳಬದ್ಧವಾಗಿದ್ದು ಆಕೆಯನ್ನು ಪುಳಕಗೊಳಿಸಿತು. ಸ್ವಲ್ಪ ಕಾಲದಲ್ಲೇ ಆಕೆಯು ಹಜರತ್ ಮಹಮ್ಮದರನ್ನು ಮದುವೆಯಾದಳು.

ವ್ಯಾಪಾರಸಾರ್ಥಗೆ ನಡಸುತ್ತಿದ್ದಾಗ ಆತ ಯೆಹೂದಿಯರು ಮತ್ತು ಕ್ರಿಶ್ಚಿಯನ್ನರ ಸಂಪರ್ಕ ಹೊಂದಬೇಕಾಗಿತ್ತು. ಹಾಗೂ ಹೋದ ಹೋದ ಊರುಗಳಲ್ಲಿ ಜನಜೀವನವನ್ನೂ ಜನರ ನಡತೆಯನ್ನೂ ಕಾಣುವ ಅವಕಾಶವಿತ್ತು. ಹಾಗಾಗಿ ಸುತ್ತುಮುತ್ತಲಿನ ಊರುಗಳಲ್ಲಿ ಜೂಜುಗಾರಿಕೆಯೂ ಮದ್ಯಪಾನವೂ ಅತಿಯಾಗಿದ್ದುದನ್ನು ಆತ ಕಂಡು ದುಃಖಿಯಾಗುತ್ತಿದ್ದ. ಅನುಕಂಪದಿಂದ ತುಂಬಿದ ಆತನ ಮನಸ್ಸು ತಳಮಳಿಸುತ್ತಿತ್ತು.

ತುಂಬ ತಳಮಳವಾದಾಗ ಆತ ಎಷ್ಟೋ ಬಾರಿ ಮೆಕ್ಕಾವನ್ನು ಬಿಟ್ಟು ದೂರದ ಬೆಟ್ಟಗುಡ್ಡಗಳತ್ತ ಹೋಗಿ, ಅಲ್ಲಿನ ಗುಹೆಗಳಲ್ಲಿ ಕುಳಿತು ಹಲವಾರು ದಿನಗಳು ಧ್ಯಾನಮಾಡುತ್ತಿದ್ದ.

ಏಕಾಗ್ರಚಿತ್ತದಿಂದ, ತುಂಬಿದ ಅನುಕಂಪದಿಂದ, ಹೀಗೆ ಧ್ಯಾನಮಾಡುತ್ತಿದ್ದಾಗ ಒಮ್ಮೆ ಆತನಿಗೆ ಹಠಾತ್ತನೆ ದೇವದೂತ ಗೇಬ್ರಿಯಲ್ಲಿನ ದರ್ಶನವಾಯಿತು. ಎತ್ತೆತ್ತ ತಿರುಗಿ ನೋಡಿದರೂ ನಭೋಮಂಡಲದಲ್ಲಿ ದೇವದೂತ ಗೇಬ್ರಿಯಲ್ಲನೇ ಕಾಣಿಸುತ್ತಿದ್ದ. ಗೇಬ್ರಿಯಲ್ಲನು ಕೊಟ್ಟ ಸಂದೇಶವು ಸುವರ್ಣಾಕ್ಷರಗಳಲ್ಲಿ ಹೃದಯದ ಮೇಲೇ ಕೆತ್ತಿದಂತೆ ಹಜರತ್ ಮಹಮ್ಮದರಿಗೆ ಅನುಭವವಾಯಿತು. ಆ ಕ್ಷಣದಿಂದಲೇ ಹಜರತ್ ಮಹಮ್ಮದರು ದ್ರಷ್ಟಾರರಾದರು. ದ್ರಷ್ಟಾರರಾದ ಆ ದಿನಗಳನ್ನು ಈಗ 'ರಂಜಾನ್' ಎಂದು ಮುಸಲ್ಮಾನರು ಆಚರಿಸುತ್ತಾರೆ.

ಮನೆಗೆ ಹಿಂತಿರುಗಿದಾಗ ಹಜರತ್ ಮಹಮ್ಮದರು ತಮ್ಮ ಅನುಭವವನ್ನು ಖತೀಜಾಗೆ ತಿಳಿಸಿದರು. 'ದೇವರ ಸಂದೇಶವೇ ಇದು' ಎಂದು ಆಕೆಯು ಪೂರ್ಣವಾಗಿ ನಂಬಿ, ಮೇಲಿಂದ ಮೇಲೆ ಗುಡ್ಡಗಳತ್ತ ಹೋಗಿ ಧ್ಯಾನಮಗ್ನರಾಗುವಂತೆ ಹಜರತ್ ಮಹಮ್ಮದರನ್ನು ಉತ್ತೇಜಿಸಿದಳು. ಅವರೂ ಹೋಗಿ ಧ್ಯಾನಮಾಡಿ, ತಮ್ಮ ಸಂದರ್ಶನದ ಸಂದೇಶಗಳನ್ನು ಮನೆಯವರಿಗೆ ಬೋಧಿಸುತ್ತಿದ್ದರು. ಅನಂತರ, ಆವೇಶಬಂದಾಗ ದೇವದೂತನು ತಮಗೆ ಇತ್ತ ಸಂದೇಶವನ್ನು ಎಲ್ಲರಿಗೂ ಅರುಹತೊಡಗಿದರು.

ದೇವರು ಕರುಣಿಸಿದ ಸಂದೇಶಗಳನ್ನು ಹಜರತ್ ಮಹಮ್ಮದರು 'ಪಠಣ' ಮಾಡಿದರು. ಈ ಪಠಣವೇ ಇಂದಿನ ಪವಿತ್ರ ಕುರಾನ್. ಮತದ ಹೆಸರು 'ಇಸ್ಲಾಂ'; ಅಂದರೆ ಅಲ್ಲಾನ ಆಣತಿಗೆ ಸಂಪೂರ್ಣವಾಗಿ ಸಂದೇಹವಿಲ್ಲದೆ

ತಲೆಬಾಗಿ ನಡೆಯುವುದು. ಇಂತಹ ಶಿಷ್ಯರಿಗೆ ಅವರು 'ಮುಸ್ಲಿಮರು' ಎಂದು ನಾಮಕರಣಮಾಡಿದರು.

"ಅಲ್ಲಾ ಒಬ್ಬನೇ ದೇವರು ; ಮಹಮ್ಮದನೇ ಆತನ ದೂತ" ಎಂದು ಅವರು ದೃಢವಾಗಿ ನಂಬಿದ್ದರು. ತಾವು ನಂಬಿದ್ದುದನ್ನು ಇತರರಿಗೆ ಬೋಧಿಸಿದರು.

ಮೆಕ್ಕಾದಲ್ಲಿದ್ದ ಶ್ರೀಮಂತ ಶತ್ರುಗಳು ಹಜರತ್ ಮಹಮ್ಮದರಿಗೆ ಬೇಕಾದಷ್ಟು ತೊಂದರೆಗಳನ್ನು ಕೊಟ್ಟರು. ಊರುಬಿಟ್ಟು ತೈಫ್ ಎಂಬ ಬೇರೆ ಊರಿಗೆ ಅವರು ಹೋಗಬೇಕಾಯಿತು. ದ್ರಾಕ್ಷಿಯ ತೋಟಗಳಿದ್ದ ಆ ಊರಿನಲ್ಲಿ ಮದ್ಯಪಾನ ನಿರೋಧವನ್ನು ಬೋಧನೆಮಾಡಿದಾಗ, ಆ ಊರಿನವರು ಹಜರತ್ ಮಹಮ್ಮದರಿಗೆ ಕಲ್ಲು ಬೀರಿ ಊರಿನಿಂದ ಓಡಿಸಿದರು.

ಹಜರತ್ ಮಹಮ್ಮದರು ಮೆಕ್ಕಾಕ್ಕೆ ಹಿಂತಿರುಗಿದರು. ಯಾತ್ರಿಬ್ ಎಂಬ ಊರಿನಿಂದ, ಪೈಗಂಬರರ ಕೀರ್ತಿಯನ್ನು ಕೇಳಿದ್ದ ಹನ್ನೆರಡು ಜನ ಯಾತ್ರಿಕರು ೨೭೦ ಮೈಲು ದೂರ ಇದ್ದ ಮೆಕ್ಕಾಕ್ಕೆ ಬಂದು, ಹಜರತ್ ಮಹಮ್ಮದರ ಉಪದೇಶವನ್ನು ಬೇಡಿದರು. ಮರುವರ್ಷ ೭೫ ಜನ ಯಾತ್ರಿಕರು ಬಂದು ಉಪದೇಶ ಪಡೆದರು. ಅವರುಗಳಲ್ಲಿ ೧೨ ಜನ ಶಿಷ್ಯರನ್ನು ಆಯ್ದು 'ಇಸ್ಲಾಂ ಧರ್ಮವನ್ನು ಪ್ರಚಾರಮಾಡಿ' ಎಂದು ಹಜರತ್ ಮಹಮ್ಮದರು ಆಣತಿಯಿತ್ತರು.

ಯಾತ್ರಿಬ್‌ನಲ್ಲಿ ಹಜರತ್ ಮಹಮ್ಮದರ ಕೀರ್ತಿ ಮತ್ತು ಅಧಿಕಾರವು ಯಶಸ್ವಿಯಾಗಿ ಹೆಚ್ಚಾಗುತ್ತಿದೆ ಎಂದು ತಿಳಿದಾಗ ಮೆಕ್ಕಾದ ಶ್ರೀಮಂತ ಶತ್ರುಗಳು ಅವರನ್ನು ಕೊಲೆಮಾಡುವ ಸಂಚು ನಡಸಿದರು.

ಯಾವ ರಾತ್ರಿ ಅವರನ್ನು ಕೊಲೆಮಾಡಬೇಕೆಂದು ಸಂಚುಹೂಡಿದ್ದರೋ, ಆ ರಾತ್ರಿಯೇ ಹಜರತ್ ಮಹಮ್ಮದರು ಯಾತ್ರಿಬ್‌ಗೆ ಪ್ರಯಾಣ ಬೆಳಸಿದರು. ಪವಿತ್ರವಾದ ಆ ರಾತ್ರಿಯೇ ಮುಸ್ಲಿಮರ ಶಕೆಯ ಆರಂಭ. ಹಿಜಿರಾದ ರಾತ್ರಿಯೇ ಅವರಿಗೆ ಶಕಾರಂಭ. ಆ ತನಕ ದೇವದೂತರಾಗಿದ್ದ ಹಜರತ್ ಮಹಮ್ಮದರು ಅಂದಿನಿಂದ ಮತಸ್ಥಾಪನಾಚಾರ್ಯರಾದರು.

ಯಾತ್ರಿಬ್‌ನ ಜನರು ಹಜರತ್ ಮಹಮ್ಮದರನ್ನು ವಿಶ್ವಾಸದಿಂದ, ದೃಢವಾದ ನಂಬಿಕೆಯಿಂದ ಸ್ವಾಗತಿಸಿದರು. ಆ ವಿಶ್ವಾಸದಿಂದ, ಊರಿನ ಹೆಸ

ರನ್ನೇ 'ಮದೀನಾ' (ದೇವದೂತನ ಊರು) ಎಂದು ಪುನರ್ನಾಮಕರಣ ಮಾಡಿದರು.

ಅನಂತರ ಇಸ್ಲಾಂ ಮತವು ಹರಡಲಾರಂಭಿಸಿತು.

ಇಂದು ವಿಶ್ವದಲ್ಲಿ ಸುಮಾರು ೩೨ ಕೋಟಿ ಮುಸ್ಲಿಮರಿದ್ದಾರೆ. ಅವರೆಲ್ಲರ ಬಾಳಬೆಳಕಾಗಿ, ಅವರೆಲ್ಲರ ಮನಸ್ಸಿನಲ್ಲಿ ದೃಢವಾದ ನಂಬಿಕೆಯನ್ನು ಹುಟ್ಟಿಸಿದ ಪವಿತ್ರಗ್ರಂಥವೇ 'ಕುರಾನ್'. ೧೧೪ ಸುರಾಗಳಿರುವ ಈ ಗ್ರಂಥವನ್ನು ಹಲವಾರು ಜನರು ಪೂರ್ಣವಾಗಿ ಕಂಠಪಾಠ ಮಾಡಿ, ನೆನಪಿನಿಂದಲೇ ಇಂದಿಗೂ ಪಠಿಸುತ್ತಾರೆ.

ಎಲ್ಲ ತರಹ ಸಂಸ್ಕಾರವಿದ್ದ, ಎಲ್ಲ ಹಂತದ ಸಂಸ್ಕಾರವಿರುವ, ಜನರಿಗೆಲ್ಲಾ ದೃಢವಾದ ನಂಬಿಕೆಯನ್ನು ಹುಟ್ಟಿಸಿ, ಆ ಮೂಲಕ ಮನೋದೈಹಿಕ ಬೇನೆಗಳ ನಿರೋಧವನ್ನು ಯಶಸ್ವಿಯಾಗಿ ಮಾಡಿದ ಹಜರತ್ ಮಹಮ್ಮದರು ವೈದ್ಯರೂ ಹೌದು, ಅಲ್ಲವೆ ?

## ಹಿಂದೂ ಮತ

'ಶ್ರೀಮಾನ್ ಹಿಂದು' ಎಂಬ ಹೆಸರಿನ ಯಾವನೊಬ್ಬ ಮಹಾತ್ಮನೂ ಹಿಂದೂಮತವನ್ನು ಸ್ಥಾಪಿಸಲಿಲ್ಲ. ಸುಮಾರು ೪೦೦೦-೫೦೦೦ ವರ್ಷಗಳ ಹಿಂದೆ ಭಾರತಕ್ಕೆ ವಲಸೆಬಂದ ಮಧ್ಯಏಷ್ಯಾದ ಆರ್ಯರು ನದೀತೀರಗಳಲ್ಲಿ ಹಿಮಾಲಯದ ತಪ್ಪಲಿನಲ್ಲಿ ನೆಲಸಿದರು. ಅವರಲ್ಲಿ ಧ್ಯಾನಾಸಕ್ತರಾಗಿರುತ್ತಿದ್ದ ಹಲವರು ಋಷಿಗಳು—ಅಘಮರ್ಷಣ, ಬೃಹಸ್ಪತಿ, ಹಿರಣ್ಯಗರ್ಭ, ಪಿಪ್ಪಲಾದ, ಮಸ್ಕರಿಗೋಶಾಲ, ಮರೀಚಿ, ಅತ್ರಿ, ಆಂಗೀರಸ, ಭಗೀರಥ, ವಸಿಷ್ಠ ಮುಂತಾದವರು—ಪ್ರಕೃತಿಯ ಸುಂದರ ದೃಶ್ಯಗಳನ್ನು ಕಂಡು ಪುಲಕಿತರಾಗಿ, ಮನಗಂಡ ಸತ್ಯವನ್ನು ದೇವರ ಪೂಜೆಗೆಂದು ನುಡಿದರು, ಹಾಡಿದರು. ಸಮಾಜದ ಸುರಕ್ಷತೆಗೆ ಅಗತ್ಯವಾದ ಸೂತ್ರಗಳನ್ನೂ ಬೋಧಿಸಿದರು. ಇವುಗಳೇ ವೇದಗಳು. ಕೆಲವು ಕಾಲಾನಂತರ ಸಮಾಜದ ಸುರಕ್ಷತೆಗೆ ಆವಶ್ಯಕವಾದ ಆಚಾರಗಳನ್ನು ಕಟ್ಟುನಿಟ್ಟಾಗಿ 'ಹೀಗೆ ಹೀಗೆ ಮಾಡಬೇಕು' ಎಂದು ನಿಯಮಿಸಿದರು.

ಬ್ರಾಹ್ಮಣಗಳ, ಆರಣ್ಯಕಗಳ ಬಹು ಭಾಗ ಈ ತೆರನಾದುವು. ಮಾನವನ ಮಾನಸಿಕ ಪ್ರಗತಿ ಹೆಚ್ಚಾದಾಗ, ಆಚಾರಗಳೂ ಮೂಢರೂಢಿಗಳೂ ಯಾಗ ಯಜ್ಞಾದಿಗಳೂ ಸತ್ಯಾನ್ವೇಷಿಗಳಿಗೆ ಸಮಾಧಾನವನ್ನು ಕೊಡಲಿಲ್ಲ. ಆಗ ಹಲ ವಾರು ಋಷಿಗಳು ಮನನಮಾಡಿ, ತಾವು ಕಂಡ 'ಸತ್ಯ'ದ ಅರಿವನ್ನು ಶಿಷ್ಯರಿಗೆ ಬೋಧಿಸಿದರು. ಇವುಗಳೇ ಉಪನಿಷತ್ತುಗಳು.

ವೇದಗಳನ್ನು ವಿಂಗಡಿಸಿ, ಈಗಿರುವಂತೆ ನಾಲ್ಕನ್ನಾಗಿ ಮಾಡಿದವರು ಕೃಷ್ಣದ್ವೈಪಾಯನರು. ಪೈಲಕ, ವೈಶಂಪಾಯನ, ಜೈಮಿನಿ, ಸುಮಂತು ಎಂಬ ನಾಲ್ವರು ಶಿಷ್ಯರಿಗೆ ಕೃಷ್ಣದ್ವೈಪಾಯನರು ವೇದಗಳನ್ನು ಬೋಧಿಸಿದರು. ನಾಲ್ಕೂ ಶಿಷ್ಯರು ತಮ್ಮ ಮಕ್ಕಳಿಗೆ, ಶಿಷ್ಯರಿಗೆ ಅವುಗಳನ್ನು ಕಲಿಸಿದರು.

ಹಿಂದೂಮತಕ್ಕೆ ವೇದಗಳೇ ಆಧಾರ. ವೇದಗಳ ಕಾಲಕ್ಕೆ ಸರಿಹೋಗುವ ಆಚಾರನಿಯಮಗಳನ್ನೂ ಯಾಗಯಜ್ಞಾದಿಗಳನ್ನೂ ವಿವರಿಸುವ ಬ್ರಾಹ್ಮಣ ಆರಣ್ಯಕಗಳೂ, ಆಧ್ಯಾತ್ಮಿಕಪ್ರವಚನಗಳಾದ ಉಪನಿಷತ್ತುಗಳೂ ಒಟ್ಟುಸೇರಿ 'ವೈದಿಕಸಾಹಿತ್ಯ'ವಾಗಿದೆ.

ಯಾಜ್ಞವಲ್ಕ್ಯ, ಸನತ್‌ಕುಮಾರ, ಅಗಸ್ತ್ಯ, ಕಪಿಲ, ಭೃಗು ಮುಂತಾದ ಋಷಿಗಳು ತಮ್ಮ ಶಿಷ್ಯರೊಂದಿಗೆ ಹಾಗೂ ಪರಸ್ಪರವಾಗಿ ನಡಸಿದ ಜಿಜ್ಞಾಸೆ, ಬೋಧನೆಗಳೇ ಉಪನಿಷತ್ತುಗಳು. ಇವು ಜನಸಾಮಾನ್ಯರಿಗೆ ಎಟುಕದ ಗಗನಕುಸುಮಗಳಾಗಿದ್ದುವು.

ಜನಸಾಮಾನ್ಯರಿಗೆ ಸುಲಭವಾಗಿ ತಿಳಿಯುವಂತೆ, ಕಥೆಯ ರೂಪದಲ್ಲಿ, ವಾಲ್ಮೀಕಿ ವ್ಯಾಸರು ರಾಮಾಯಣ ಭಾರತ ಕಾವ್ಯಗಳನ್ನು ರಚಿಸಿದರು. ಉಪನಿಷತ್ತುಗಳ ಸಾರವನ್ನೆಲ್ಲಾ ಆ ಕಾವ್ಯಗಳಲ್ಲಿ ಅರುಹಿದರು. ಹಾಗೂ 'ಭಗವದ್ಗೀತೆ' ಎಂಬ ಹೆಸರಾದ ಗೀತೆಯನ್ನು ಮಹಾಭಾರತದಲ್ಲಿ ಅಳವಡಿಸ ಲಾಯಿತು. ಉಪನಿಷತ್ತುಗಳ ಅಮರ ಸಂದೇಶವನ್ನೆಲ್ಲಾ ಗೀತೆಯಲ್ಲಿ ಹಾಡ ಲಾಯಿತು. ಭಾರತವನ್ನು ಈ ಕಾರಣದಿಂದಲೇ 'ಐದನೆಯ ವೇದ' ಎಂದು ಕರೆಯಲಾಯಿತು.

ಹಿಂದೂಮತ ಎಂದು ಈಗ ಕರೆಯಲ್ಪಡುತ್ತಿರುವ ಭಾರತದ ಸನಾತನ ಧರ್ಮಕ್ಕೆ ವೇದಗಳು, ಉಪನಿಷತ್ತುಗಳು, ರಾಮಾಯಣ ಭಾರತಗಳು ಪವಿತ್ರ ವಾದ ಪ್ರಮಾಣಗ್ರಂಥಗಳು.

ಸುಮಾರು ೨೫೦೦ ವರ್ಷಗಳ ಹಿಂದೆ, ಭಾರತದ ಸನಾತನಧರ್ಮದ ಆಚರಣೆಯಲ್ಲಿ ಯಾಗಯಜ್ಞಗಳು, ವಿಧಿಪೂರ್ವಕವಾದ ಪೂಜೆಗಳು ಇತ್ಯಾದಿ ಆಚಾರಗಳಲ್ಲಿ ಕಟ್ಟು ನಿಟ್ಟು ಹೆಚ್ಚಾಗಿ, ಪೂಜಿಸಲ್ಪಟ್ಟ ದೇವರಿಗಿಂತಲೂ ಪೂಜೆ ಮಾಡುವ ವಿಧಾನವೇ ಮುಖ್ಯ ಎಂಬಂತಾಯಿತು. ಇದನ್ನು ಕಂಡು ಒಪ್ಪದೆ ವಿರೋಧಿಸಿದ ಮಹಾವೀರನು ಜೈನಮತವನ್ನು ಸ್ಥಾಪಿಸಿದನು. ಅಂತೆಯೇ ಶಾಕ್ಯಮುನಿಯು ಬೌದ್ಧಮತಸ್ಥಾಪನಾಚಾರ್ಯನಾದನು.

ಮಾನವನ ಜ್ಞಾನಭಂಡಾರವು ಹೆಚ್ಚಿದಂತೆಲ್ಲ, ಸಮಕಾಲೀನ ಜೀವನವು ವ್ಯತ್ಯಾಸ ಹೊಂದಿದಂತೆಲ್ಲ, ನಿತ್ಯಜೀವನಕ್ಕೆ ಅಗತ್ಯವಾದ ರೂಢಿನಿಯಮಗಳು ಮಾರ್ಪಾಡಾಗಲೇಬೇಕು. ಆದರೂ ಬಾಳನಂಬಿಕೆಗೆ ಮುಖ್ಯವಾದುದು ಚಿರ ಸತ್ಯವಾಗಿದ್ದರೆ, ಅದು ಮಾರ್ಪಾಡು ಹೊಂದದೆ. ಹೊಸ ಅರಿವನ್ನು ಸೂಸುತ್ತ ಪ್ರಜ್ವಲಿಸಬಹುದು. ಸನಾತನ ಧರ್ಮದ ಪ್ರಗತಿಯಲ್ಲಿ ಇದೇ ಆಗಿರುವುದು

ಹನ್ನೆರಡನೆಯ ಶತಮಾನದಲ್ಲಿ ಬ್ರಾಹ್ಮಣರಾಗಿ ಹುಟ್ಟಿದ್ದ ಬಸವಣ್ಣನವರು ಸಮಕಾಲಿನ ಸಮಾಜದ ಲೋಪದೋಷಗಳನ್ನೂ, ಪೂಜಾರಿಗಳು ಮತ್ತು ವೈದಿಕರು ಧರ್ಮದ ಹೆಸರಿನಲ್ಲಿ ನಡಸುತ್ತಿದ್ದ ಅನಾಚಾರಗಳನ್ನೂ ಕಂಡು ರೇಗಿ ಕ್ರಾಂತಿನಡಸಿ, ವೀರಶೈವ ಮತವನ್ನು ಸ್ಥಾಪಿಸಿದರು. ಮರವು ಸುರಕ್ಷಿತವಾಗಿರಬೇಕೆಂದು ಗೆದ್ದಲು ಹಿಡಿದ ಮರದ ಕೊಂಬೆಯನ್ನು ಕಡಿಯಬೇಕಾದಾಗ ಆ ಮರದ ಕೊಂಬೆಯೇ ಕೊಡಲಿಯ ಕಾವು ಆಗಬಹುದಲ್ಲವೆ ?

ಸಮಕಾಲೀನ ಜೀವನಕ್ಕೆ ಸರಿಯಾಗಿ ಮಾರ್ಪಾಡು ಮಾಡಿ, ಹಾಗೂ ಮೂಲತತ್ವಗಳನ್ನು ಎತ್ತಿತೋರಿಸುವ ಕ್ರಾಂತಿಕಾರರು ಆಗಿಂದಾಗ್ಗೆ ಭಾರತದಲ್ಲಿ ಕಾಣಬರುತ್ತಲೇಇದ್ದಾರೆ. ಕಬೀರ್, ಗುರು ನಾನಕ್, ರಾಮಮೋಹನರಾಯ್, ದಯಾನಂದ ಸರಸ್ವತಿ, ಮಹಾತ್ಮಾ ಗಾಂಧಿ, ಇವರುಗಳೆಲ್ಲರೂ ಈ ಪರಂಪರೆಯವರೇ.

ಅಂದಮೇಲೆ, ಹಿಂದೂಮತ ಎಂದರೆ ಹಲವಾರು ಹಿರಿಯ ಋಷಿಗಳು ಸಾವಿರಾರು ವರ್ಷಗಳ ಕಾಲ ಮನನಮಾಡಿ ತಾವು ಕಂಡ ಸತ್ಯವನ್ನು ಬೋಧಿಸಿದುದೇ ಆಗಿದೆ. ಕಾಲಕಾಲದ ಸಮಾಜದ ಮಾರ್ಪಾಡಿಗೆ ಸರಿದೂಗುವಂತೆ ಆಚಾರನಿಯಮಗಳನ್ನು ರಚಿಸಿಕೊಂಡು, ಮೂಲತತ್ವಗಳನ್ನು ಬಿಡದೆ, ನಡಸಿಕೊಂಡು ಬಂದ ಸನಾತನಧರ್ಮವೇ ಹಿಂದೂಮತ ಎನ್ನಬಹುದು. ಭವರೋಗ

ವೈದ್ಯನನ್ನು ಆಯಾ ಕಾಲದಲ್ಲಿ ತೋರಿಸಿ, ಮಾನವನ ಮನಸ್ಸಿಗೆ ಸಮಾಧಾನವನ್ನೂ ದೇಹಕ್ಕೆ ಆರೋಗ್ಯವನ್ನೂ ದೊರಕಿಸಿಕೊಡುವ ಹಿಂದೂಮತವು ಒಂದು ರೀತಿಯಾಗಿ ಪುರಾತನವೂ ಹೌದು, ನೂತನವೂ ಹೌದು. ಚಿರಂಜೀವಿಯೂ ಹೌದು.

## ಮತಸ್ಥಾಪನಾಚಾರ್ಯರು—ಅವರ ಬಾಳು

ಬುದ್ಧ, ಲೌಟ್ಸೆ, ಸೌರಾಷ್ಟರ್, ಯೇಸು, ಹಜರತ್ ಮಹಮ್ಮದ್ ಪೈಗಂಬರ್—ಈ ಐದೂ ಮತಸ್ಥಾಪನಾಚಾರ್ಯರುಗಳಲ್ಲಿ, ಅವರ ಜೀವನ ಮಾರ್ಗದಲ್ಲಿ, ಕೆಲವು ಹಿರಿಯ ಅಂಶಗಳನ್ನು ಕಾಣಬಹುದು.

ಅವರೆಲ್ಲರೂ ತಮ್ಮ ಸುತ್ತಮುತ್ತಲಿನ ಜನರ ಕಷ್ಟಸಂಕಟಗಳನ್ನು ನೋಡಿ ನೊಂದು ಪರಿತಪಿಸಿದರು. ತಮ್ಮ ತಮ್ಮ ಸಮಾಜದ ವ್ಯರ್ಥವಾದ ಆಚಾರ ಆಡಂಬರಗಳನ್ನು ಕಂಡು, ಅದಕ್ಕೆ ಪರಿಹಾರಮಾರ್ಗವನ್ನು ಕಂಡು ಹಿಡಿಯಲು ಮನನಮಾಡಿದವರು. ಎಲ್ಲರೂ ನಿರ್ಜನಪ್ರದೇಶಗಳಿಗೆ ಹೋಗಿ, ಮಿತವಾದ ಆಹಾರವನ್ನುಂಡು ಅಥವಾ ಉಪವಾಸವಿದ್ದು, ಇತರ ದೈಹಿಕವಾದ ಬೇಡಿಕೆಗಳನ್ನು ಜಯಿಸಿ, ತಿಂಗಳಾನುಗಟ್ಟಲೆ ಏಕಾಕಿಗಳಾಗಿ ತಪಸ್ಸುಮಾಡಿದವರು. ಯಾವುದೋ ಒಂದು ಶುಭಗಳಿಗೆಯಲ್ಲಿ ಇವರೆಲ್ಲರಿಗೂ ದಿವ್ಯಜ್ಯೋತಿಯನ್ನು ಕಂಡಂತಾಯಿತು. "ಬಾಳಿನ ಮರ್ಮವು ಇಷ್ಟೇ ! ಇದ್ದುದರಲ್ಲಿ ಹಿತ ಜೀವನ ನಡಸಲು ಹೀಗೆ ಹೀಗೆ ಬಾಳಬೇಕು, ಸಮಾಜವು ಈ ರೀತಿ ಇರಬೇಕು, ಸಂಘದ ಸಂಘಟನೆಯು ಹೀಗಾಗಬೇಕು" ಎಂದೆಲ್ಲಾ ಅನಿಸಿತು. ಹೀಗೆ ಅನುಭವವಾದಾಗ ಅವರ ಮನಸ್ಸಿನಲ್ಲಿದ್ದ ತಳಮಳವೆಲ್ಲಾ ಸಮಾಧಾನ ಹೊಂದಿತು. ಅವರೆಲ್ಲರೂ ತಾವು ಕಂಡ ಬಾಳಿನ 'ಸತ್ಯ'ವನ್ನು ಬೋಧಿಸ ತೊಡಗಿದರು. ಆ ಬೋಧನೆಗಳೆಲ್ಲವೂ ಈಗ ಪವಿತ್ರಗ್ರಂಥಗಳೆನಿಸಿಕೊಂಡು, ಕೋಟ್ಯಂತರ ಜನರ ತೊಳಲಿದ ಮನಸ್ಸಿಗೆ ಸಮಾಧಾನವನ್ನೂ ಆಳಮನಸ್ಸಿನಲ್ಲಿ ಒಂದು ರೀತಿಯ ಆನಂದವನ್ನೂ ಸಹಸ್ರಾರು ವರ್ಷಗಳಿಂದ ಕರುಣಿಸಿ ಕೊಟ್ಟಿದೆ.

ಇದರಿಂದ ಒಂದು ಪಾಠವನ್ನು ನಾವು ಕಲಿಯಬಹುದು. ತೀವ್ರವಾದ

ಆಸಕ್ತಿ ಇದ್ದರೆ, ಉತ್ಕಟೇಚ್ಛೆ ಇದ್ದರೆ, ಸುತ್ತುಸಮಾಜದ ಕಷ್ಟದುಃಖಗಳನ್ನು ಕಂಡು ಪೂರ್ಣ ಅನುಕಂಪ ಉಂಟಾದರೆ, ಆಗ ಮನನಮಾಡಿದರೆ, ಬಾಳಿನ ಮೂಲ 'ಸತ್ಯ' ಪ್ರತ್ಯಕ್ಷವಾಗುತ್ತದೆ. ಆಗ ಮನಸ್ಸಿಗೆ ನೆಮ್ಮದಿಯೂ ಅಸದೃಶವಾದ ಆನಂದವೂ ಉಂಟಾಗುತ್ತದೆ. ಹಾಗಾಗದಿದ್ದರೂ ಮಾನಸಿಕ ಸ್ಥೈರ್ಯವು ಉಂಟಾಗಿಯೇ ಆಗುತ್ತದೆ. ದೇಹವು ದುಡಿದರೆ ಆಯಾ ಮಾಂಸಖಂಡಗಳು ಹೇಗೆ ದೃಢವಾಗಿ ಬೆಳೆದು ಶಕ್ತಿಯುತವಾಗುತ್ತವೋ ಹಾಗೆಯೇ ಮನಸ್ಸು ಧ್ಯಾನಮಾಡಿದರೆ, ಏಕಾಗ್ರಚಿತ್ತದಿಂದ ಮನಮಾಡಿದರು ಕೂಡ ಮಾನಸಿಕ ಶಕ್ತಿಯು ಬರಲೇಬೇಕು. ಮನನಮಾಡುವುದು ಎಂದರೆ ಆಳಮನಸ್ಸಿನಲ್ಲಿ ವೈಜ್ಞಾನಿಕವಾಗಿ ವಿಚಾರಮಾಡುವುದು. ಅಂದಮೇಲೆ, ಅಂತಹವರಿಗೆ ಮನೋದೈಹಿಕ ಬೇನೆಗಳು ತಾಕಲೇ ಆರವು. ಏಕೆಂದರೆ ಮನಸ್ಸಿನ ತಳಮಳವೆಲ್ಲಾ, ಕೊರಗೆಲ್ಲಾ ಮನಸ್ಸಿನಲ್ಲಿಯೇ ಮಾಯವಾಗಿ ಹೋಗಿರುತ್ತದೆ. ದೇಹಕ್ಕೆ ಹರಡಿ ಗೋಳಾಡಿಸುವುದಿಲ್ಲ.

ಈಗಿನ ಸಮಾಜದಲ್ಲಿ ಸತ್ಯದರ್ಶನ ಸಾಧ್ಯವೇ ? ಎಂದೆವು. ವಿಜ್ಞಾನಿಗಳನ್ನು ನೋಡಿ ! ವಿಜ್ಞಾನಿಗಳು ಎಂದು ಈಗ ಕರೆಯಲ್ಪಡುವ ಜನರಲ್ಲಿ ಎರಡು ಗುಂಪುಗಳಿವೆ. ಒಂದು ಪಂಗಡ, ಬಹುಸಂಖ್ಯಾತ ಗುಂಪು. ವಿಜ್ಞಾನದ ಕೆಲಸಗಾರರದು. 'ನಾವೂ ವಿಜ್ಞಾನಿಗಳು' ಎಂದೇ ಇವರು ನಾಮಕರಣಮಾಡಿಕೊಳ್ಳುತ್ತಾರೆ. ವಿಜ್ಞಾನದ ಹಲವಾರು ಕ್ಷೇತ್ರಗಳಲ್ಲಿ ಹಗಲೂ ರಾತ್ರಿ ಅವಿಶ್ರಾಂತವಾಗಿ ದುಡಿಯುತ್ತಾರೆ, ಗಾಣದ ಎತ್ತುಗಳ ತರಹ. ಇದನ್ನು ಅರೆಯಬೇಕು ಎಂದರೆ, ಮಡಿಯಾಗಿ ಅದನ್ನು ಅರೆಯುತ್ತಾರೆ. 'ಉತ್ತರ ಹೀಗೆ' ಎಂದರೆ, 'ಹಾಗೆ ಯಾಕಾಗಬಾರದು ?' ಎನ್ನುವ ಪ್ರಜ್ಞಾಪ್ರೇರಿತ ಮಾನಸಿಕ ಕುತೂಹಲವು ಇವರಿಗೆ ಆಗುವುದಿಲ್ಲ.

ಅಲ್ಪಸಂಖ್ಯಾತರ ಇನ್ನೊಂದು ಗುಂಪಿನವರಿಗೆ ಪ್ರಜ್ಞಾಪ್ರೇರಿತ ಕುತೂಹಲವು ಅತಿಯಾಗಿರುತ್ತದೆ. ಇವರುಗಳೇ ದಿಟವಾದ ವೈಜ್ಞಾನಿಕ ಋಷಿಗಳು. ಇವರುಗಳು ಸಂಯಮದಿಂದ. ಸಂಕಲ್ಪಮಾಡಿ, ಸಿದ್ಧಿಯನ್ನು ಪಡೆಯುತ್ತಾರೆ. ಸತ್ಯದ ತುಸು ದರ್ಶನವನ್ನಾದರೂ ಕಾಣುತ್ತಾರೆ. ತಾವು ಕಂಡ ಸತ್ಯದ ಅಂಶವೇ ಸುಂದರವೆನಿಸಿ ಹಿಗ್ಗಿ ಆನಂದಪಡುತ್ತಾರೆ.

ಕೆಲವು ವೇಳೆ ಮಾಸಲುಬಣ್ಣದ ಹಾಗೂ ಕಣ್ಸೆಳೆಯುವ ಒಡವೆಗಳನ್ನೂ ಕಂಡನು. ಅದಕ್ಕೆ ಕಾರಣ ಇಷ್ಟೆ; ಸ್ವಲ್ಪ ಹೊತ್ತಿಗೆ ಮುಂಚೆ ಆತ ಮೆಕ್ಸಿಕೋ ದೇಶದಲ್ಲಿ ಬೆಳೆಯುವ ಒಂದು ಜಾತಿಯ ಪಾಪಾಸುಕಳ್ಳಿಯ ಕಷಾಯವನ್ನು ಕುಡಿದಿದ್ದನು. ಸ್ವಲ್ಪ ಹೊತ್ತಿನಲ್ಲಿಯೇ ಆತ ತೀವ್ರವಾದ ಸುಗಂಧವನ್ನು ಆಘ್ರಾಣಿಸಿದನು. ಅನಂತರ ಕಣ್ಸೆಳೆಯುವ ಬಣ್ಣಬಣ್ಣದ ದೃಶ್ಯಗಳನ್ನು ಕಂಡನು. ಆ ಕಷಾಯವನ್ನು ಕುಡಿದ ಮೇಲೆ ಆತನ ಪಂಚೇಂದ್ರಿಯಗಳು ಎಂದೆಂದೂ ಒದಗಿಸಿಕೊಡದೆ ಇದ್ದ ಅಲೌಕಿಕ ಅನುಭವಗಳನ್ನು ಆತ ತನ್ನ ಮನಸ್ಸಿನಲ್ಲಿ ಕಂಡು, ಕೇಳಿ, ಮೂಸಿ, ಅನುಭವಿಸಿದ.

ಇದೇ ರೀತಿಯಲ್ಲಿ ಆ ಜಾತಿಯ ಪಾಪಾಸುಕಳ್ಳಿಯಿಂದ ತಯಾರಿಸಲಾದ ಮೆಸ್ಕಲಿನ್ (Mescalin) ಎಂಬ ಔಷಧಿಯನ್ನು ಸೇವಿಸಿದ ಮೇಲೆ, ಲೌಕಿಕ ಹಾಗೂ ಹಿತಕೊಡುವ ಅನುಭವಗಳನ್ನು ಹೊಂದಿದ ಆಲ್ಡಸ್ ಹಕ್ಸ್ಲಿಯು Doors of perception ಎಂಬ ತನ್ನ ಪುಸ್ತಕದಲ್ಲಿ ವಿವರವಾಗಿ ರಸವತ್ತಾಗಿ ವರ್ಣಿಸಿದ್ದಾನೆ. ಹಾಗೂ (Zen Buddhism) 'ಜೆನ್ ಬುದ್ಧಿಸಂ'ನ ಹಲವಾರು ವಿಷಯಗಳು ಮೊದಲು ಅರ್ಥವಾಗಿರಲಿಲ್ಲವೆಂದೂ, ಮೆಸ್ಕಲಿನ್ ಅನ್ನು ಸೇವಿಸಿದ ಮೇಲೆ ಚೆನ್ನಾಗಿ ಅರ್ಥವಾಯಿತೆಂದೂ ಹೇಳಿದ್ದಾನೆ. ಅಂದರೆ, ಕೆಲವು ತೆರನಾದ ವಿಷಯಗಳನ್ನು ಸುಲಭವಾಗಿ ಅರಿಯಲು, ಈ ಔಷಧಿಯು ಮನಸ್ಸನ್ನು ಚುರುಕುಗೊಳಿಸಿತು ಎನ್ನಬಹುದು.

ಮೆಸ್ಕಲಿನ್ನನ್ನು ತಿಂದ ಮೇಲೆ, ಬೆಕ್ಕುಗಳು ತಮಗೆ ಸ್ವಾಭಾವಿಕ ಶತ್ರುಗಳಾದ ಇಲಿಗಳನ್ನು ಸೌಹಾರ್ದದಿಂದ ನೋಡುತ್ತವೆ; ಇಲಿಗಳು ಧೈರ್ಯಮಾಡಿ ಅಂತಹ ಬೆಕ್ಕುಗಳ ಕಿವಿಗಳನ್ನು ಕಚ್ಚಿದರೂ ಆ ಬೆಕ್ಕುಗಳು ತೆಪ್ಪಗೆ ಇರುತ್ತವೆ.

ಮನಸ್ಸಿನ ಮೇಲೆ ಇಂತಹ ಪರಿಣಾಮವನ್ನುಂಟುಮಾಡುವ ಈ ಪಾಪಾಸುಕಳ್ಳಿ ಯಾವುದು? ಮೆಕ್ಸಿಕೋ ದೇಶದ ಕಾಡುಗಳಲ್ಲಿ ಬೆಳೆಯುವ ಈ ಜಾತಿಯ ಪಾಪಾಸುಕಳ್ಳಿಯನ್ನು (Cactus) ಆ ದೇಶದ ಮೂಲನಿವಾಸಿಗಳು ವರ್ಷದ ಕೆಲವು ಕ್ಲುಪ್ತ ತಿಂಗಳುಗಳಲ್ಲಿ ಮಾತ್ರ, ಶುಚಿರುಚಿಯಾಗಿ ಮಡಿಯಾಗಿ ಹೋಗಿ, ದೇವರ ಧ್ಯಾನಮಾಡುತ್ತಾ ಕಿತ್ತು ಊರಿಗೆ ತರುತ್ತಾರೆ. ಅನಂತರ ಅವನ್ನು ದುಂಡುದುಂಡಾಗಿ ಉಪ್ಪೇರಿಯಂತೆ ಕತ್ತರಿಸಿಟ್ಟುಕೊಂಡು, ಸಾಮೂಹಿಕ

ಆಸಕ್ತಿ ಇದ್ದರೆ, ಉತ್ಕಟೇಚ್ಛೆ ಇದ್ದರೆ, ಸುತ್ತುಸಮಾಜದ ಕಷ್ಟದುಃಖಗಳನ್ನು ಕಂಡು ಪೂರ್ಣ ಅನುಕಂಪ ಉಂಟಾದರೆ, ಆಗ ಮನನಮಾಡಿದರೆ, ಬಾಳಿನ ಮೂಲ 'ಸತ್ಯ' ಪ್ರತ್ಯಕ್ಷವಾಗುತ್ತದೆ. ಆಗ ಮನಸ್ಸಿಗೆ ನೆಮ್ಮದಿಯೂ ಅಸದೃಶವಾದ ಆನಂದವೂ ಉಂಟಾಗುತ್ತದೆ. ಹಾಗಾಗದಿದ್ದರೂ ಮಾನಸಿಕ ಸ್ಥೈರ್ಯವು ಉಂಟಾಗಿಯೇ ಆಗುತ್ತದೆ. ದೇಹವು ದುಡಿದರೆ ಆಯಾ ಮಾಂಸಖಂಡಗಳು ಹೇಗೆ ದೃಢವಾಗಿ ಬೆಳೆದು ಶಕ್ತಿಯುತವಾಗುತ್ತವೋ ಹಾಗೆಯೇ ಮನಸ್ಸು ಧ್ಯಾನಮಾಡಿದರೆ, ಏಕಾಗ್ರಚಿತ್ತದಿಂದ ಮನನಮಾಡಿದರು ಕೂಡ ಮಾನಸಿಕ ಶಕ್ತಿಯು ಬರಲೇಬೇಕು. ಮನನಮಾಡುವುದು ಎಂದರೆ ಆಳಮನಸ್ಸಿನಲ್ಲಿ ವೈಜ್ಞಾನಿಕವಾಗಿ ವಿಚಾರಮಾಡುವುದು. ಅಂದಮೇಲೆ, ಅಂತಹವರಿಗೆ ಮನೋದ್ವೈಹಿಕ ಬೇನೆಗಳು ತಾಕಲೇ ಆರವು. ಏಕೆಂದರೆ ಮನಸ್ಸಿನ ತಳಮಳವೆಲ್ಲಾ, ಕೊರಗೆಲ್ಲಾ ಮನಸ್ಸಿನಲ್ಲಿಯೇ ಮಾಯವಾಗಿ ಹೋಗಿರುತ್ತದೆ. ದೇಹಕ್ಕೆ ಹರಡಿ ಗೋಳಾಡಿಸುವುದಿಲ್ಲ.

ಈಗಿನ ಸಮಾಜದಲ್ಲಿ ಸತ್ಯದರ್ಶನ ಸಾಧ್ಯವೇ ? ಎಂದೆವು. ವಿಜ್ಞಾನಿಗಳನ್ನು ನೋಡಿ ! ವಿಜ್ಞಾನಿಗಳು ಎಂದು ಈಗ ಕರೆಯಲ್ಪಡುವ ಜನರಲ್ಲಿ ಎರಡು ಗುಂಪುಗಳಿವೆ. ಒಂದು ಪಂಗಡ, ಬಹುಸಂಖ್ಯಾತ ಗುಂಪು. ವಿಜ್ಞಾನದ ಕೆಲಸಗಾರರದು. 'ನಾವೂ ವಿಜ್ಞಾನಿಗಳು' ಎಂದೇ ಇವರು ನಾಮಕರಣಮಾಡಿಕೊಳ್ಳುತ್ತಾರೆ. ವಿಜ್ಞಾನದ ಹಲವಾರು ಕ್ಷೇತ್ರಗಳಲ್ಲಿ ಹಗಲೂ ರಾತ್ರಿ ಅವಿಶ್ರಾಂತವಾಗಿ ದುಡಿಯುತ್ತಾರೆ, ಗಾಣದ ಎತ್ತುಗಳ ತರಹ. ಇದನ್ನು ಅರೆಯಬೇಕು ಎಂದರೆ, ಮಡಿಯಾಗಿ ಅದನ್ನು ಅರೆಯುತ್ತಾರೆ. 'ಉತ್ತರ ಹೀಗೆ' ಎಂದರೆ, 'ಹಾಗೆ ಯಾಕಾಗಬಾರದು ?' ಎನ್ನುವ ಪ್ರಜ್ಞಾಪ್ರೇರಿತ ಮಾನಸಿಕ ಕುತೂಹಲವು ಇವರಿಗೆ ಆಗುವುದಿಲ್ಲ.

ಅಲ್ಪಸಂಖ್ಯಾತರ ಇನ್ನೊಂದು ಗುಂಪಿನವರಿಗೆ ಪ್ರಜ್ಞಾಪ್ರೇರಿತ ಕುತೂಹಲವು ಅತಿಯಾಗಿರುತ್ತದೆ. ಇವರುಗಳೇ ದಿಟವಾದ ವೈಜ್ಞಾನಿಕ ಋಷಿಗಳು. ಇವರುಗಳು ಸಂಯಮದಿಂದ. ಸಂಕಲ್ಪಮಾಡಿ, ಸಿದ್ಧಿಯನ್ನು ಪಡೆಯುತ್ತಾರೆ. ಸತ್ಯದ ತುಸು ದರ್ಶನವನ್ನಾದರೂ ಕಾಣುತ್ತಾರೆ. ತಾವು ಕಂಡ ಸತ್ಯದ ಅಂಶವೇ ಸುಂದರವೆನಿಸಿ ಹಿಗ್ಗಿ ಆನಂದಪಡುತ್ತಾರೆ.

ಕೆಲವು ವೇಳೆ ಮಾಸಲುಬಣ್ಣದ ಹಾಗೂ ಕಣ್ಸೆಳೆಯುವ ಒಡವೆಗಳನ್ನೂ ಕಂಡನು. ಅದಕ್ಕೆ ಕಾರಣ ಇಷ್ಟೆ; ಸ್ವಲ್ಪ ಹೊತ್ತಿಗೆ ಮುಂಚೆ ಆತ ಮೆಕ್ಸಿಕೋ ದೇಶದಲ್ಲಿ ಬೆಳೆಯುವ ಒಂದು ಜಾತಿಯ ಪಾಪಾಸುಕಳ್ಳಿಯ ಕಷಾಯವನ್ನು ಕುಡಿದಿದ್ದನು. ಸ್ವಲ್ಪ ಹೊತ್ತಿನಲ್ಲಿಯೇ ಆತ ತಿಳಿಯಾದ ಸುಗಂಧವನ್ನು ಆಘ್ರಾಣಿಸಿದನು. ಅನಂತರ ಕಣ್ಸೆಳೆಯುವ ಬಣ್ಣಬಣ್ಣದ ದೃಶ್ಯಗಳನ್ನು ಕಂಡನು. ಆ ಕಷಾಯವನ್ನು ಕುಡಿದ ಮೇಲೆ ಆತನ ಪಂಚೇಂದ್ರಿಯಗಳು ವಂದೇದೂ ಒದಗಿಸಿಕೊಡದೆ ಇದ್ದ ಅಲೌಕಿಕ ಅನುಭವಗಳನ್ನು ಆತ ತನ್ನ ಮನಸ್ಸಿನಲ್ಲಿ ಕಂಡು, ಕೇಳಿ, ಮೂಸಿ, ಅನುಭವಿಸಿದ.

ಇದೇ ರೀತಿಯಲ್ಲಿ ಆ ಜಾತಿಯ ಪಾಪಾಸುಕಳ್ಳಿಯಿಂದ ತಯಾರಿಸಲಾದ ಮೆಸ್ಕಲಿನ್ (Mescalin) ಎಂಬ ಔಷಧಿಯನ್ನು ಸೇವಿಸಿದ ಮೇಲೆ, ಲೌಕಿಕ ಹಾಗೂ ಹಿತಕೊಡುವ ಅನುಭವಗಳನ್ನು ಹೊಂದಿದ ಆಲ್ಡಸ್ ಹಕ್ಸ್ಲಿಯು Doors of perception ಎಂಬ ತನ್ನ ಪುಸ್ತಕದಲ್ಲಿ ವಿವರವಾಗಿ ರಸವತ್ತಾಗಿ ವರ್ಣಿಸಿದ್ದಾನೆ. ಹಾಗೂ (Zen Buddbism) 'ಜೆನ್ ಬುದ್ಧಿಸಂ'ಇನ ಹಲವಾರು ವಿಷಯಗಳು ಮೊದಲು ಅರ್ಥವಾಗಿರಲಿಲ್ಲವೆಂದೂ. ಮೆಸ್ಕಲಿನ್ ಅನ್ನು ಸೇವಿಸಿದ ಮೇಲೆ ಚೆನ್ನಾಗಿ ಅರ್ಥವಾಯಿತೆಂದೂ ಹೇಳಿದ್ದಾನೆ. ಅಂದರೆ, ಕೆಲವು ತೆರನಾದ ವಿಷಯಗಳನ್ನು ಸುಲಭವಾಗಿ ಅರಿಯಲು, ಈ ಔಷಧಿಯು ಮನಸ್ಸನ್ನು ಚುರುಕುಗೊಳಿಸಿತು ಎನ್ನಬಹುದು.

ಮೆಸ್ಕಲಿನ್ನನ್ನು ತಿಂದ ಮೇಲೆ, ಬೆಕ್ಕುಗಳು ತಮಗೆ ಸ್ವಾಭಾವಿಕ ಶತ್ರುಗಳಾದ ಇಲಿಗಳನ್ನು ಸೌಹಾರ್ದದಿಂದ ನೋಡುತ್ತವೆ; ಇಲಿಗಳು ಧೈರ್ಯ ಮಾಡಿ ಅಂತಹ ಬೆಕ್ಕುಗಳ ಕಿವಿಗಳನ್ನು ಕಚ್ಚಿದರೂ ಆ ಬೆಕ್ಕುಗಳು ತೆಪ್ಪಗೆ ಇರುತ್ತವೆ.

ಮನಸ್ಸಿನ ಮೇಲೆ ಇಂತಹ ಪರಿಣಾಮವನ್ನುಂಟುಮಾಡುವ ಈ ಪಾಪಾಸುಕಳ್ಳಿ ಯಾವುದು? ಮೆಕ್ಸಿಕೋ ದೇಶದ ಕಾಡುಗಳಲ್ಲಿ ಬೆಳೆಯುವ ಈ ಜಾತಿಯ ಪಾಪಾಸುಕಳ್ಳಿಯನ್ನು (Cactus) ಆ ದೇಶವ ಮೂಲನಿವಾಸಿಗಳು ವರ್ಷದ ಕೆಲವು ಕ್ಲುಪ್ತ ತಿಂಗಳುಗಳಲ್ಲಿ ಮಾತ್ರ, ಶುಚಿರುಚಿಯಾಗಿ ಮಡಿಯಾಗಿ ಹೋಗಿ, ದೇವರ ಧ್ಯಾನಮಾಡುತ್ತಾ ಕಿತ್ತು ಊರಿಗೆ ತರುತ್ತಾರೆ. ಅನಂತರ ಅವನ್ನು ದುಂಡುದುಂಡಾಗಿ ಉಪ್ಪೇರಿಯಂತೆ ಕತ್ತರಿಸಿಟ್ಟುಕೊಂಡು, ಸಾಮೂಹಿಕ

ವಾಗಿ ದೇವರ ಪೂಜೆಮಾಡಿದಂತೆ ನೇಮದಿಂದ ಸೇವಿಸುತ್ತಾರೆ. ಅನಂತರ ಶಾಂತಿಯಿಂದ ಆನಂದದಿಂದ ತುಂಬಿದವರಂತೆ ಕಾಣುತ್ತಾರೆ. ಮಾರನೇ ದಿನ ಎದ್ದಾಗ, ಹಿಂದಿನ ದಿನದ 'ಆರಾಧನಾಕ್ರಮ'ದಿಂದ ಅವರಿಗೆ ಯಾವ ಅನಾರೋಗ್ಯವೂ ಸುಸ್ತೂ ಆಗಿರುವುದಿಲ್ಲ.

ಈ ಔಷಧಿಯ ಸೇವನೆಯಿಂದ ಬಣ್ಣಬಣ್ಣದ ದೃಶ್ಯಗಳನ್ನೂ ಸುವಾಸನೆಗಳನ್ನೂ ಸುಶ್ರಾವ್ಯವಾದ ಸಂಗೀತವನ್ನೂ ಅನುಭವಿಸಬಹುದು. ಕಹಿಯಾಗಿರುವ, ದುರ್ನಾತ ಬಡಿಯುವ ಈ ಕಳ್ಳಿಯು ಹೊಟ್ಟೆನೋವು ವಾಕರಿಕೆಯನ್ನುಂಟುಮಾಡುವುದಾದರೂ, ತದನಂತರ ಅದು ಸಾಧಿಸಿಕೊಡುವ ದಿವ್ಯ ಅನುಭವಗಳು ಅತ್ಯಂತ ಆನಂದದಾಯಕವಾಗಿರುತ್ತವೆ. ಆದುದರಿಂದಲೇ ಅದು ಬಳಕೆಯಲ್ಲಿದೆ.

## ಮರಿಯುವನ (Marihuana) ಚರಸ್, ಭಂಗ್, ಗಾಂಜಾ

ಬೈರಾಗಿಗಳೂ ಕಾಪಾಲಿಕರೂ ಈ ತೆರನಾದ ಶಕ್ತಿಪೂಜೆಯನ್ನು ಮಾಡುವವರೂ ಗಾಂಜಾ ಸೇವಿಸುತ್ತಾರೆ. ಪಾಯಸವಾಗಿಯೋ, ಹಲ್ವ ಮಾಡಿಯೋ ಸೇವಿಸುತ್ತಾರೆ. ಹೊಗೇಸೊಪ್ಪಿನಂತೆ ಪಚ್ಚಿ ಸೇದಿ, ತಮ್ಮದೇ ಆದ ಮಾನಸಿಕ ಲೋಕವೊಂದಕ್ಕೆ, ತಾವೇ ರಾಜರಾಗಿರುವ ಮಾನಸಿಕಲೋಕ ಒಂದಕ್ಕೆ, ಒಯ್ಯಲ್ಪಡುತ್ತಾರೆ. ಔಷಧದ ತೀಕ್ಷ್ಣತೆಯು ಇರುವ ತನಕ ಅವರು ಆ ಕನಸಿನ ಲೋಕದಲ್ಲಿ ವಿಹರಿಸುತ್ತಿದ್ದು, 'ನಾನೇ ದೇವರು, ನಾನೇ ಭೈರವ ಪ್ರಪಂಚದ ಸಕಲ ಸೌಭಾಗ್ಯಸಂಪತ್ತೂ ನನಗಾಗಿಯೇ' ಎಂದು ಭ್ರಮಿಸುತ್ತಾರೆ,

ಔಷಧದ ಅಮಲು ಇಳಿದಾಗ, ಹೊಟ್ಟೆ ಚುರುಚುರು ಎಂದಾಗ ಭಿಕ್ಷಕ್ಕೆ ಹೊರಡುವುದೂ ಉಂಟು. ಆಗಲೂ ಹೊಟ್ಟೆಯೇನೋ ಹಸಿಯುತ್ತೆ, ಊಟಕ್ಕೆ ಇಲ್ಲ. ಆದರೂ 'ನಾನೇ ದೇವರು !' ಅಂತಲೇ ಹೇಳಬಹುದು,

ಚರಸ್‌ಅನ್ನು ಹೆಂಡದಂತೆ ಉಪಯೋಗಿಸುವವರೂ ಉಂಟು. ಕಷ್ಟ ಕಾರ್ಪಣ್ಯಗಳ ಈ ಲೋಕದಿಂದ ಕಾಲ್ಪನಿಕಸುಖದೀವ ಲೋಕಕ್ಕೆ ತಾತ್ಕಾಲಿಕವಾಗಿಯಾದರೂ ಹೋಗಲು, ಕೆಲವರಿಗೆ ಚರಸ್ ಆವಶ್ಯಕ, ಅತ್ಯಗತ್ಯ. ಅದರ ಬಲೆಗೆ ಬಿದ್ದವರಿಗೆ, ಹಾಗೆ ಬೀಳುವುದೇ ಆನಂದದಾಯಕವಾಗುತ್ತದೆ.

ವನ್ನೂ, ಮತ್ತೆಲ್ಲ ವಿವರಗಳನ್ನೂ ಬಣ್ಣಿಸಿದ್ದಾಳೆ. ಇನ್ನೊಮ್ಮೆ. ರೇಷ್ಮೆ ಹುಳುಗಳ ರಾಣಿಯಾಗಿದ್ದಂತೆ ಅನುಭವವಾಯಿತೆಂದು, ಆಗ ನಡೆದುದೆಲ್ಲವನ್ನೂ ವಿವರಿಸಿದ್ದಾಳೆ. ಇದೇ ರೀತಿ ಹಲವಾರು ಜನ್ಮಜನ್ಮಾಂತರಗಳಲ್ಲಿ ತಾನು ಏನೇನು ಆಗಿದ್ದಳು, ಅವೆಲ್ಲವನ್ನೂ ವರ್ಣಿಸಿದ್ದಾಳೆ.

ಇಂತಹ ಪರೀಕ್ಷೆಯು ಮುಗಿದನಂತರ ಮೂರು ನಾಲ್ಕು ವಾರ ಆಕೆ ಮನೆಯಲ್ಲಿ ಬಲು ಸಮಾಧಾನದಿಂದ ಇರುತ್ತಿದ್ದಳು. ಮಕ್ಕಳು ಕೂಡ 'ಅಮ್ಮ ಆಸ್ಪತ್ರೆಗೆ ಹೋಗಿ ಬಂದಮೇಲೆ ಎಷ್ಟೋ ಪ್ರೀತಿಯಿಂದ ಇರುತ್ತಾಳೆ. ಮೊದಲಿನಂತೆ ಮುಖ ಸಿಂಡರಿಸಿಕೊಳ್ಳುವುದಿಲ್ಲ' ಎನ್ನುತ್ತಿದ್ದರು.

ಆದರೆ, ಆ ಎಲ್ಲ ವರ್ಣನೆಗಳಲ್ಲಿ ಕೂಡ. ತಾನು ಹೆಣ್ಣು ಎಂಬ ಅಂಶವೇ ಸ್ವತಃಸಿದ್ಧವಾಗಿತ್ತು. ಅಂದರೆ, 'ತಾನು,' 'ಹೆಣ್ಣು,' ಎಂಬ ಎರಡೂ ಅಂಶಗಳು ಅವಳ ಆತ್ಮಸ್ಮರಣೆಯಿಂದ ಪೂರ್ಣವಾಗಿ ನಾಶವಾಗಿರಲಾರದು. ಅಂದರೆ, ಆಕೆಯು ಅನುಭವಿಸಿದ 'ಆನಂದವು' ಕುಂಡಲಿನಿ ಯೋಗಿಗಳು ವರ್ಣಿಸುವ ಅಮಿತಾನಂದ ಅಥವಾ ಸಚ್ಚಿದಾನಂದದಂತೆ ಇರಲಾರದು. ಏಕೆಂದರೆ ಈ ಸಚ್ಚಿದಾನಂದದ ಅನುಭವದಲ್ಲಿ 'ನಾನು' ಎನ್ನುವ ಭಾವನೆ ಶೂನ್ಯವಾಗಿರುತ್ತದೆ. ಗಂಡು, ಹೆಣ್ಣು ಎನ್ನುವ ಭಾವನೆಯೂ ಇರುವುದಿಲ್ಲ—ಎಂದು ಅದನ್ನು ಅನುಭವಿಸಿದವರು ಕೊಡುವ ವಿವರಣೆಯಿಂದ ತಿಳಿಯಬಹುದು.

ಈ ಶಾಂತಿಕಾರಕ ಔಷಧಿಗಳನ್ನು ಸೇವಿಸಿದಾಗ ಉಂಟಾಗುವ ಭ್ರಮೆಯ ಅನುಭವಗಳು ಕುಂಡಲಿನಿ ಯೋಗಾಭ್ಯಾಸಿಯು ವಿವರಿಸುವ ವರ್ಣನೆಯಂತೆಯೇ ಇರುತ್ತವೆ. ವಿಧವಿಧ ಅತಿ ಸುಂದರ ವರ್ಣಗಳು, ಇಂಪಾದ ಗಂಧರ್ವಗಾನಗಳು, ಸುವಾಸನೆ, ಇತ್ಯಾದಿಗಳೆಲ್ಲ ಕುಂಡಲಿನಿ ಯೋಗಾಭ್ಯಾಸಿಯ ಅನುಭವಕ್ಕೆ ಬರುತ್ತವೆ. ಆದರೆ ಅವೆಲ್ಲವನ್ನೂ ಅವನು ತಾನು ಕಲಿತಿದ್ದ ಷಟ್‌ಚಕ್ರರಚನೆಗೆ ಅನ್ವಯಿಸಿಕೊಳ್ಳುತ್ತಾನೆ. ಇಷ್ಟೇ ವ್ಯತ್ಯಾಸ.

ಶಾಂತಿಕಾರಕ ಔಷಧಿಗಳನ್ನು ಸೇವಿಸುವವರು. ದೇಹ ಮನಸ್ಸು ಎರಡನ್ನೂ ಮೀರಿದ ಅಮಿತಾನಂದವನ್ನು ಅನುಭವಿಸುವರೋ, ಆ ಆನಂದಕ್ಕಾಗಿಯೇ ತಿರುಗಿತಿರುಗಿ ಅದನ್ನು ಸೇವಿಸುವರೋ, ಅದನ್ನು ಅವರೇ ಹೇಳಬೇಕು. ಅವರು ಹೇಳಿದ್ದನ್ನು ನಾವು ನಂಬಬೇಕು. ಪಾಶ್ಚಾತ್ಯ ವೈಜ್ಞಾನಿಕರು ಮೆಸ್ಕಲಿನ್ ಇತ್ಯಾದಿಗಳನ್ನು ತಮ್ಮ ಮೇಲೆ ಪ್ರಯೋಗಮಾಡಿಕೊಂಡು, ತಮ್ಮ ಅನುಭವ

ವಾಗಿ ದೇವರ ಪೂಜೆಮಾಡಿದಂತೆ ನೇಮದಿಂದ ಸೇವಿಸುತ್ತಾರೆ. ಅನಂತರ ಶಾಂತಿಯಿಂದ ಆನಂದದಿಂದ ತುಂಬಿದವರಂತೆ ಕಾಣುತ್ತಾರೆ. ಮಾರನೇ ದಿನ ಎದ್ದಾಗ, ಹಿಂದಿನ ದಿನದ 'ಆರಾಧನಾಕ್ರಮ'ದಿಂದ ಅವರಿಗೆ ಯಾವ ಅನಾರೋಗ್ಯವೂ ಸುಸ್ತೂ ಆಗಿರುವುದಿಲ್ಲ.

ಈ ಔಷಧಿಯ ಸೇವನೆಯಿಂದ ಬಣ್ಣಬಣ್ಣದ ದೃಶ್ಯಗಳನ್ನೂ ಸುವಾಸನೆಗಳನ್ನೂ ಸುಶ್ರಾವ್ಯವಾದ ಸಂಗೀತವನ್ನೂ ಅನುಭವಿಸಬಹುದು. ಕಹಿಯಾಗಿರುವ, ದುರ್ನಾತ ಬಡಿಯುವ ಈ ಕಳ್ಳಿಯು ಹೊಟ್ಟೆನೋವು ವಾಕರಿಕೆಯನ್ನುಂಟುಮಾಡುವುದಾದರೂ, ತದನಂತರ ಅದು ಸಾಧಿಸಿಕೊಡುವ ದಿವ್ಯ ಅನುಭವಗಳು ಅತ್ಯಂತ ಆನಂದದಾಯಕವಾಗಿರುತ್ತವೆ. ಆದುದರಿಂದಲೇ ಅದು ಬಳಕೆಯಲ್ಲಿದೆ.

### ಮರಿಯುವನ (Marihuana) ಚರಸ್, ಭಂಗ್, ಗಾಂಜಾ

ಬೈರಾಗಿಗಳೂ ಕಾಪಾಲಿಕರೂ ಈ ತೆರನಾದ ಶಕ್ತಿಪೂಜೆಯನ್ನು ಮಾಡುವವರೂ ಗಾಂಜಾ ಸೇವಿಸುತ್ತಾರೆ. ಪಾಯಸವಾಗಿಯೋ, ಹಲ್ವ ಮಾಡಿಯೋ ಸೇವಿಸುತ್ತಾರೆ. ಹೊಗೆಸೊಪ್ಪಿನಂತೆ ಹಚ್ಚಿ ಸೇದಿ, ತಮ್ಮದೇ ಆದ ಮಾನಸಿಕ ಲೋಕವೊಂದಕ್ಕೆ, ತಾವೇ ರಾಜರಾಗಿರುವ ಮಾನಸಿಕಲೋಕ ಒಂದಕ್ಕೆ, ಒಯ್ಯಲ್ಪಡುತ್ತಾರೆ. ಔಷಧದ ತೀಕ್ಷ್ಣತೆಯು ಇರುವ ತನಕ ಅವರು ಆ ಕನಸಿನ ಲೋಕದಲ್ಲಿ ವಿಹರಿಸುತ್ತಿದ್ದು, 'ನಾನೇ ದೇವರು, ನಾನೇ ಭೈರವ ಪ್ರಪಂಚದ ಸಕಲ ಸೌಭಾಗ್ಯಸಂಪತ್ತೂ ನನಗಾಗಿಯೇ' ಎಂದು ಭ್ರಮಿಸುತ್ತಾರೆ, . ಔಷಧದ ಅಮಲು ಇಳಿದಾಗ, ಹೊಟ್ಟೆ ಚುರುಚುರು ಎಂದಾಗ ಭಿಕ್ಷಕ್ಕೆ ಹೊರಡುವುದೂ ಉಂಟು. ಆಗಲೂ ಹೊಟ್ಟೆಯೇನೋ ಹಸಿಯುತ್ತೆ, ಊಟಕ್ಕೆ ಇಲ್ಲ. ಆದರೂ 'ನಾನೇ ದೇವರು !' ಅಂತಲೇ ಹೇಳಬಹುದು,

ಚರಸ್‌ಅನ್ನು ಹೆಂಡದಂತೆ ಉಪಯೋಗಿಸುವವರೂ ಉಂಟು. ಕಷ್ಟ ಕಾರ್ಪಣ್ಯಗಳ ಈ ಲೋಕದಿಂದ ಕಾಲ್ಪನಿಕಸುಖವೀವ ಲೋಕಕ್ಕೆ ತಾತ್ಕಾಲಿಕವಾಗಿಯಾದರೂ ಹೋಗಲು, ಕೆಲವರಿಗೆ ಚರಸ್ ಆವಶ್ಯಕ, ಅತ್ಯಗತ್ಯ. ಅದರ ಬಲೆಗೆ ಬಿದ್ದವರಿಗೆ, ಹಾಗೆ ಬೀಳುವುದೇ ಆನಂದದಾಯಕವಾಗುತ್ತದೆ.

ವನ್ನೂ, ಮತ್ತೆಲ್ಲ ವಿವರಗಳನ್ನೂ ಬಣ್ಣಿಸಿದ್ದಾಳೆ. ಇನ್ನೊಮ್ಮೆ. ರೇಷ್ಮೆ ಹುಳುಗಳ ರಾಣಿಯಾಗಿದ್ದಂತೆ ಅನುಭವವಾಯಿತೆಂದು. ಆಗ ನಡೆದುದೆಲ್ಲವನ್ನೂ ವಿವರಿಸಿದ್ದಾಳೆ. ಇದೇ ರೀತಿ ಹಲವಾರು ಜನ್ಮಜನ್ಮಾಂತರಗಳಲ್ಲಿ ತಾನು ಏನೇನು ಆಗಿದ್ದಳು, ಅವೆಲ್ಲವನ್ನೂ ವರ್ಣಿಸಿದ್ದಾಳೆ.

ಇಂತಹ ಪರೀಕ್ಷೆಯು ಮುಗಿದನಂತರ ಮೂರು ನಾಲ್ಕು ವಾರ ಆಕೆ ಮನೆಯಲ್ಲಿ ಬಲು ಸಮಾಧಾನದಿಂದ ಇರುತ್ತಿದ್ದಳು. ಮಕ್ಕಳು ಕೂಡ 'ಅಮ್ಮ ಆಸ್ಪತ್ರೆಗೆ ಹೋಗಿ ಬಂದಮೇಲೆ ಎಷ್ಟೋ ಪ್ರೀತಿಯಿಂದ ಇರುತ್ತಾಳೆ. ಮೊದಲಿನಂತೆ ಮುಖ ಸಿಂಡರಿಸಿಕೊಳ್ಳುವುದಿಲ್ಲ' ಎನ್ನುತ್ತಿದ್ದರು.

ಆದರೆ, ಆ ಎಲ್ಲ ವರ್ಣನೆಗಳಲ್ಲಿ ಕೂಡ. ತಾನು ಹೆಣ್ಣು ಎಂಬ ಅಂಶವೇ ಸ್ವತಃಸಿದ್ಧವಾಗಿತ್ತು. ಅಂದರೆ, 'ತಾನು,' 'ಹೆಣ್ಣು,' ಎಂಬ ಎರಡೂ ಅಂಶಗಳು ಅವಳ ಆಳಸ್ಮರಣೆಯಿಂದ ಪೂರ್ಣವಾಗಿ ನಾಶವಾಗಿರಲಾರದು. ಅಂದರೆ, ಆಕೆಯು ಅನುಭವಿಸಿದ 'ಆನಂದವು' ಕುಂಡಲಿನಿ ಯೋಗಿಗಳು ವರ್ಣಿಸುವ ಅಮಿತಾನಂದ ಅಥವಾ ಸಚ್ಚಿದಾನಂದದಂತೆ ಇರಲಾರದು. ಏಕೆಂದರೆ ಈ ಸಚ್ಚಿದಾನಂದದ ಅನುಭವದಲ್ಲಿ 'ನಾನು' ಎನ್ನುವ ಭಾವನೆ ಶೂನ್ಯವಾಗಿರುತ್ತದೆ. ಗಂಡು, ಹೆಣ್ಣು ಎನ್ನುವ ಭಾವನೆಯೂ ಇರುವುದಿಲ್ಲ—ಎಂದು ಅದನ್ನು ಅನುಭವಿಸಿದವರು ಕೊಡುವ ವಿವರಣೆಯಿಂದ ತಿಳಿಯಬಹುದು.

ಈ ಶಾಂತಿಕಾರಕ ಔಷಧಿಗಳನ್ನು ಸೇವಿಸಿದಾಗ ಉಂಟಾಗುವ ಭ್ರಮೆಯ ಅನುಭವಗಳು ಕುಂಡಲಿನಿ ಯೋಗಾಭ್ಯಾಸಿಯು ವಿವರಿಸುವ ವರ್ಣನೆಯಂತೆಯೇ ಇರುತ್ತವೆ. ವಿಧವಿಧ ಅತಿ ಸುಂದರ ವರ್ಣಗಳು, ಇಂಪಾದ ಗಂಧರ್ವಗಾನಗಳು, ಸುವಾಸನೆ, ಇತ್ಯಾದಿಗಳೆಲ್ಲ ಕುಂಡಲಿನಿ ಯೋಗಾಭ್ಯಾಸಿಯ ಅನುಭವಕ್ಕೆ ಬರುತ್ತವೆ. ಆದರೆ ಅವೆಲ್ಲವನ್ನೂ ಅವನು ತಾನು ಕಲಿತಿದ್ದ ಷಟ್‌ಚಕ್ರರಚನೆಗೆ ಅನ್ವಯಿಸಿಕೊಳ್ಳುತ್ತಾನೆ. ಇಷ್ಟೇ ವ್ಯತ್ಯಾಸ.

ಶಾಂತಿಕಾರಕ ಔಷಧಿಗಳನ್ನು ಸೇವಿಸುವವರು. ದೇಹ ಮನಸ್ಸು ಎರಡನ್ನೂ ಮೀರಿದ ಅಮಿತಾನಂದವನ್ನು ಅನುಭವಿಸುವರೋ, ಆ ಆನಂದಕ್ಕಾಗಿಯೇ ತಿರುಗಿತಿರುಗಿ ಅದನ್ನು ಸೇವಿಸುವರೋ, ಅದನ್ನು ಅವರೇ ಹೇಳಬೇಕು. ಅವರು ಹೇಳಿದ್ದನ್ನು ನಾವು ನಂಬಬೇಕು. ಪಾಶ್ಚಾತ್ಯ ವೈಜ್ಞಾನಿಕರು ಮೆಸ್ಕಲಿನ್ ಇತ್ಯಾದಿಗಳನ್ನು ತಮ್ಮ ಮೇಲೆ ಪ್ರಯೋಗಮಾಡಿಕೊಂಡು, ತಮ್ಮ ಅನುಭವ

ಗಳನ್ನು ಬರೆದಿಟ್ಟಾಗ, 'ಅವರ್ಣನೀಯವಾದ ಆನಂದವೇನೋ ಆಯಿತು ; ಕಾಲ ದೇಶಗಳ ಅರಿವು ಬಹಳ ಹಿರಿದಾಯಿತು ; ಭೂತಭವಿಷ್ಯತ್ತುಗಳು ಪ್ರತ್ಯಕ್ಷ ವಾದಂತಾಯಿತು' ಎಂದೆಲ್ಲಾ ಹೇಳಿದ್ದಾರೆ. ಆದರೆ, 'ನಾನು ಇದನ್ನೆಲ್ಲಾ ಅನುಭವಿಸುತ್ತಿದ್ದೇನೆ' ಎನ್ನುವ ವಿಷಯವು ಅವರ ಸ್ಮರಣೆಯಲ್ಲಿ ಇತ್ತು. 'ನಾನು' ಎನ್ನುವ ಭಾವನೆಯು ಮಾಯವಾಗಿರಲಿಲ್ಲ. ಕುಂಡಲಿನಿ ಯೋಗಾ ಭ್ಯಾಸಿಗೆ ಈ ಅನುಭವವೂ ದೊರಕಿದೆ, ಅಂತಹವರು ಹೇಳಿದ್ದಾರೆ.

ಇವೆಲ್ಲವನ್ನೂ ನೋಡಿದರೆ, ಶಾಂತಿಕಾರಕ ಔಷಧಿಗಳಿಂದ ಮನಸ್ಸಿನ ಮೇಲೆ ಯಾವ ಆನಂದದಾಯಕ ಪರಿಣಾಮವಾಗುತ್ತದೋ ಅದೇ ರೀತಿಯ, ಆದರೆ ಅದನ್ನೂ ಮೀರಿದ, ಆನಂದದ ಅನುಭವವನ್ನು ಕುಂಡಲಿನಿ ಯೋಗಾ ಭ್ಯಾಸಿಗಳು ಔಷಧಿಗಳ ನೆರವಿಲ್ಲದೆ ತಮ್ಮ ಸ್ವಂತ ದೇಹ ಮತ್ತು ಮನಸ್ಸಿನ ಶಿಸ್ತಿನಿಂದ ಪಡೆಯುತ್ತಾರೆ ಎಂದಂತಾಯಿತು.

11605

ಬಾರಿ ಲೋಹದ ಹಲಗೆಯ ಮೇಲೆ ಹೋಗಿ ಕುಳಿತುಕೊಳ್ಳುತ್ತಿತ್ತು. ಅಂದರೆ ಅದಕ್ಕೆ ಸುಖದ ಅನುಭವವು ಆಗಿಯೇ ಇದ್ದಿರಬೇಕು.

ಅಷ್ಟೇ ಅಲ್ಲ. ಈ ಪರೀಕ್ಷೆಯನ್ನು ಮಾಡಿ, ಇಲಿಗೆ ಈ ಅನುಭವವನ್ನು ಕಲಿಸಿಕೊಟ್ಟ ಮೇಲೆ, ಒಂದು ದಿನ ಇಲಿಯನ್ನು ಉಪವಾಸ ಕೆಡವಿ, ಅನಂತರ ಆಹಾರವನ್ನು ಸ್ಕಿನ್ನರ್ ಬಾಕ್ಸ್‌ನಲ್ಲಿಟ್ಟು. ಆಮೇಲೆ ಆ ಇಲಿಯನ್ನು ಪೆಟ್ಟಿಗೆಗೆ ಕಳಿಸಿದರೆ, ಆ ಇಲಿ ಆಹಾರದ ಬಳಿಗೆ ಸ್ವಾಭಾವಿಕವಾಗಿ ಓಡಬೇಕಲ್ಲವೆ? ಆದರೆ, ರುಚಿ ಕಂಡ ಇಲಿ ಹಾಗೆ ಮಾಡಲಿಲ್ಲ. ತಣ್ಣಗಿರುವ ಲೋಹದ ಹಲಗೆಯತ್ತ ಓಡಿಹೋಗಿ ಅದನ್ನು ಒತ್ತಿತು. ಮತ್ತೆ ಮತ್ತೆ ಹೋಗಿ ಅದನ್ನು ಒತ್ತಲಾರಂಭಿಸಿತು. ಒಂದು ಸಲ ಒತ್ತಿದರೆ ಒಮ್ಮೆ ವಿದ್ಯುತ್ತು ಹರಿದು ಮೆದುಳಿನ ಬುಡದ ಆ ಭಾಗವನ್ನು ಉದ್ರೇಕಿಸುತ್ತದೆ. ಅನಂತರ ತಿರುಗಿ ಒತ್ತಿದರೆ, ತಿರುಗಿ ಒಮ್ಮೆ ವಿದ್ಯುತ್ತು ಹರಿಯುತ್ತದೆ. ಹೀಗಾಗಿ ಒಂದು ಪರೀಕ್ಷೆಯಲ್ಲಿ ಒಂದು ಇಲಿಯು ಗಂಟೆಗೆ ೨೦೦೦ ಸಲ ಹೀಗೆ ಲೋಹದ ಹಲಗೆಯನ್ನು ಒತ್ತಿತು. ಆ ರೀತಿ ಬಿಡುವಿಲ್ಲದೆ ೨೪ ತಾಸುಗಳು ಹಾಗೆ ಮಾಡಿತು!

ಅಂದರೆ, ಈ ಇಲಿಯ ಮೆದುಳಿನ ಬುಡದ ಪುಟ್ಟದೊಂದು ಭಾಗವನ್ನು ವಿದ್ಯುತ್‌ಶಕ್ತಿಯಿಂದ ಉದ್ರೇಕಿಸಿದರೆ, ಅದಕ್ಕಾಗುವ ಆನಂದವು ಹಸಿವಾಗಿದ್ದಾಗ್ನ ಊಟವನ್ನೂ ಮರಸುತ್ತದೆ, ಎಂದಂತಾಯಿತು. ಹೆಣ್ಣು ಗಂಡು ಕೂಡುವಾಗ ಆಗುವ ಆನಂದದಂತೆ ಮೈಮರೆಸುವ ಆನಂದವು, ಅಥವಾ ಅದನ್ನೂ ಮೀರಿದ ಆನಂದವು ಇಲಿಗೆ ಆಗಿರಬೇಕು. ಹೆಣ್ಣುಗಂಡುಗಳ ಕೂಡುವಿಕೆಯಲ್ಲಿ ಆಗುವ ಆನಂದಕ್ಕೆ ಯಾವ ನರವ್ಯೂಹಕೇಂದ್ರಗಳು ಕಾರಣವೋ ಆ ಕೇಂದ್ರಗಳೂ, ಈ ಪರೀಕ್ಷೆಯಲ್ಲಿ ವಿದ್ಯುತ್ತಂತಿಗಳು ವಿದ್ಯುತ್‌ಶಕ್ತಿಯನ್ನು ಸಿಡಿಸುವ ಕೇಂದ್ರವೂ ಸುಮಾರು ದೂರದಲ್ಲಿವೆ. ಅಂದಮೇಲೆ, ಆನಂದವನ್ನು ಕೊಡುವ ಈ ನರವ್ಯೂಹ ಕೇಂದ್ರವು ಪ್ರತ್ಯೇಕವಾದುದು ಎಂದು ಸಿದ್ಧಾಂತವಾಯಿತು.

ಅಂತಹ ಅವಕಾಶವನ್ನು ಹೊಂದಿದ ಇಲಿಯ ಮೇಲೆ ಇದರ ಪರಿಣಾಮವು ಏನು? ಅದು ಊಟ ತಿಂಡಿ ಬಿಟ್ಟು, ತನ್ನ ಹೆಂಡತಿ ಮಕ್ಕಳು ಸಮಾಜ ಎಲ್ಲವನ್ನೂ ಮರೆತು, ತನ್ನ ಪಾಡಿಗೆ ತಾನು ಆ ಲೋಹದ ಹಲಗೆಯನ್ನು ಒತ್ತಿ 'ಆನಂದ'ವನ್ನು ಅನುಭವಿಸುತ್ತಾ ಇರುವಂತಾಯಿತು. ಹೆಂಡಕುಡುಕರು ತಮ್ಮ ಮನೆ ಮಠ ಮರೆತು, ಮಾನ ಅವಮಾನಗಳನ್ನು ನಿರ್ಲಕ್ಷಿಸಿ, ಪಡಖಾನೆಯ

ಗಳನ್ನು ಬರೆದಿಟ್ಟಾಗ, 'ಅವರ್ಣನೀಯವಾದ ಆನಂದವೇನೋ ಆಯಿತು ; ಕಾಲ ದೇಶಗಳ ಅರಿವು ಬಹಳ ಹಿರಿದಾಯಿತು ; ಭೂತಭವಿಷ್ಯತ್ತುಗಳು ಪ್ರತ್ಯಕ್ಷ ವಾದಂತಾಯಿತು' ಎಂದೆಲ್ಲಾ ಹೇಳಿದ್ದಾರೆ. ಆದರೆ, 'ನಾನು ಇದನ್ನೆಲ್ಲಾ ಅನುಭವಿಸುತ್ತಿದ್ದೇನೆ' ಎನ್ನುವ ವಿಷಯವು ಅವರ ಸ್ಮರಣೆಯಲ್ಲಿ ಇತ್ತು. 'ನಾನು' ಎನ್ನುವ ಭಾವನೆಯು ಮಾಯವಾಗಿರಲಿಲ್ಲ. ಕುಂಡಲಿನಿ ಯೋಗಾ ಭ್ಯಾಸಿಗೆ ಈ ಅನುಭವವೂ ದೊರಕಿದೆ, ಅಂತಹವರು ಹೇಳಿದ್ದಾರೆ.

ಇವೆಲ್ಲವನ್ನೂ ನೋಡಿದರೆ, ಶಾಂತಿಕಾರಕ ಔಷಧಿಗಳಿಂದ ಮನಸ್ಸಿನ ಮೇಲೆ ಯಾವ ಆನಂದದಾಯಕ ಪರಿಣಾಮವಾಗುತ್ತದೋ ಅದೇ ರೀತಿಯ, ಆದರೆ ಅದನ್ನೂ ಮೀರಿದ, ಆನಂದದ ಅನುಭವವನ್ನು ಕುಂಡಲಿನಿ ಯೋಗಾ ಭ್ಯಾಸಿಗಳು ಔಷಧಿಗಳ ನೆರವಿಲ್ಲದೆ ತಮ್ಮ ಸ್ವಂತ ದೇಹ ಮತ್ತು ಮನಸ್ಸಿನ ಶಿಸ್ತಿನಿಂದ ಪಡೆಯುತ್ತಾರೆ ಎಂದಂತಾಯಿತು.

ಬಾರಿ ಲೋಹದ ಹಲಗೆಯ ಮೇಲೆ ಹೋಗಿ ಕುಳಿತುಕೊಳ್ಳುತ್ತಿತ್ತು. ಅಂದರೆ ಅದಕ್ಕೆ ಸುಖದ ಅನುಭವವು ಆಗಿಯೇ ಇದ್ದಿರಬೇಕು.

ಅಷ್ಟೇ ಅಲ್ಲ. ಈ ಪರೀಕ್ಷೆಯನ್ನು ಮಾಡಿ, ಇಲಿಗೆ ಈ ಅನುಭವವನ್ನು ಕಲಿಸಿಕೊಟ್ಟ ಮೇಲೆ, ಒಂದು ದಿನ ಇಲಿಯನ್ನು ಉಪವಾಸ ಕೆಡವಿ, ಅನಂತರ ಆಹಾರವನ್ನು ಸ್ಕಿನ್ನರ್ ಬಾಕ್ಸ್‌ನಲ್ಲಿಟ್ಟು, ಆಮೇಲೆ ಆ ಇಲಿಯನ್ನು ಪೆಟ್ಟಿಗೆಗೆ ಕಳಿಸಿದರೆ, ಆ ಇಲಿ ಆಹಾರದ ಬಳಿಗೆ ಸ್ವಾಭಾವಿಕವಾಗಿ ಓಡಬೇಕಲ್ಲವೆ? ಆದರೆ, ರುಚಿ ಕಂಡ ಇಲಿ ಹಾಗೆ ಮಾಡಲಿಲ್ಲ. ತಣ್ಣಗಿರುವ ಲೋಹದ ಹಲಗೆಯತ್ತ ಓಡಿಹೋಗಿ ಅದನ್ನು ಒತ್ತಿತು. ಮತ್ತೆ ಮತ್ತೆ ಹೋಗಿ ಅದನ್ನು ಒತ್ತಲಾರಂಭಿಸಿತು. ಒಂದು ಸಲ ಒತ್ತಿದರೆ ಒಮ್ಮೆ ವಿದ್ಯುತ್ತು ಹರಿದು ಮೆದುಳಿನ ಬುಡದ ಆ ಭಾಗವನ್ನು ಉದ್ರೇಕಿಸುತ್ತದೆ. ಅನಂತರ ತಿರುಗಿ ಒತ್ತಿದರೆ, ತಿರುಗಿ ಒಮ್ಮೆ ವಿದ್ಯುತ್ತು ಹರಿಯುತ್ತದೆ. ಹೀಗಾಗಿ ಒಂದು ಪರೀಕ್ಷೆಯಲ್ಲಿ ಒಂದು ಇಲಿಯು ಗಂಟೆಗೆ ೨೦೦೦ ಸಲ ಹೀಗೆ ಲೋಹದ ಹಲಗೆಯನ್ನು ಒತ್ತಿತು. ಆ ರೀತಿ ಬಿಡುವಿಲ್ಲದೆ ೨೪ ತಾಸುಗಳು ಹಾಗೆ ಮಾಡಿತು!

ಅಂದರೆ, ಈ ಇಲಿಯ ಮೆದುಳಿನ ಬುಡದ ಪುಟ್ಟದೊಂದು ಭಾಗವನ್ನು ವಿದ್ಯುತ್‌ಶಕ್ತಿಯಿಂದ ಉದ್ರೇಕಿಸಿದರೆ, ಅದಕ್ಕಾಗುವ ಆನಂದವು ಹಸಿವಾಗಿದ್ದಾಗ್ನ ಊಟವನ್ನೂ ಮರಸುತ್ತದೆ, ಎಂದಂತಾಯಿತು. ಹೆಣ್ಣು ಗಂಡು ಕೂಡುವಾಗ ಆಗುವ ಆನಂದದಂತೆ ಮೈಮರೆಸುವ ಆನಂದವು, ಅಥವಾ ಅದನ್ನೂ ಮೀರಿದ ಆನಂದವು ಇಲಿಗೆ ಆಗಿರಬೇಕು. ಹೆಣ್ಣುಗಂಡುಗಳ ಕೂಡುವಿಕೆಯಲ್ಲಿ ಆಗುವ ಆನಂದಕ್ಕೆ ಯಾವ ನರವ್ಯೂಹಕೇಂದ್ರಗಳು ಕಾರಣವೋ ಆ ಕೇಂದ್ರಗಳೂ, ಈ ಪರೀಕ್ಷೆಯಲ್ಲಿ ವಿದ್ಯುತ್ತಂತಿಗಳು ವಿದ್ಯುತ್‌ಶಕ್ತಿಯನ್ನು ಸಿಡಿಸುವ ಕೇಂದ್ರವೂ ಸುಮಾರು ದೂರದಲ್ಲಿವೆ. ಅಂದಮೇಲೆ, ಆನಂದವನ್ನು ಕೊಡುವ ಈ ನರವ್ಯೂಹ ಕೇಂದ್ರವು ಪ್ರತ್ಯೇಕವಾದುದು ಎಂದು ಸಿದ್ಧಾಂತವಾಯಿತು.

ಅಂತಹ ಅವಕಾಶವನ್ನು ಹೊಂದಿದ ಇಲಿಯ ಮೇಲೆ ಇದರ ಪರಿಣಾಮವು ಏನು? ಅದು ಊಟ ತಿಂಡಿ ಬಿಟ್ಟು, ತನ್ನ ಹೆಂಡತಿ ಮಕ್ಕಳು ಸಮಾಜ ಎಲ್ಲವನ್ನೂ ಮರೆತು, ತನ್ನ ಪಾಡಿಗೆ ತಾನು ಆ ಲೋಹದ ಹಲಗೆಯನ್ನು ಒತ್ತಿ 'ಆನಂದ'ವನ್ನು ಅನುಭವಿಸುತ್ತಾ ಇರುವಂತಾಯ್ತು. ಹೆಂಡಕುಡುಕರು ತಮ್ಮ ಮನೆ ಮಠ ಮರೆತು, ಮಾನ ಅವಮಾನಗಳನ್ನು ನಿರ್ಲಕ್ಷಿಸಿ, ಪಡಖಾನೆಯ

ಬಳಿಗೆ ಓಡೋಡಿಹೋಗುವಂತೆ, ಈ ಇಲಿಯೂ ಕೂಡ ಲೋಹದ ಹಲಗೆಯ ಬಳಿಗೆ ಆನಂದಾನುಭವಕ್ಕಾಗಿ ಓಡೋಡಿ ಹೋಗುತ್ತದೆ.

ಈರೀತಿ ಪ್ರಯೋಗಿಸಲ್ಪಟ್ಟ ಇಲಿಯನ್ನು ಅದರ ಮರಣಾನಂತರ ಪರೀಕ್ಷೆ ಮಾಡಲಾಯಿತು. ಉದ್ರೇಕಿಸಿದಾಗ ಆ ತೆರನಾದ ಅಸಾಧಾರಣ ಆನಂದ ವನ್ನು ಉಂಟುಮಾಡಿದ ನರವ್ಯೂಹ ಕೇಂದ್ರಗಳು ಮೆದುಳಿನ ಬುಡದ ಒಂದು ನಿಶ್ಚಿತವಾದ ಸ್ಥಳದಲ್ಲಿದೆ ಎಂದು ತಿಳಿದುಬಂದಿತು. ಈ ಕೇಂದ್ರವನ್ನು 'ಆನಂದದ ಕೇಂದ್ರ' ಎಂದು ಕರೆಯೋಣ.

ಉಸಿರಾಡುವಿಕೆ, ಹಸಿವು, ದಾಹ, ಹೃದಯದ ಬಡಿತ, ದೇಹದ ಶಾಖ ಇತ್ಯಾದಿ ಅತ್ಯವಶ್ಯಕವಾದ ಕಾರ್ಯಕ್ರಮಗಳನ್ನು ಹತೋಟಿಯಲ್ಲಿಟ್ಟಿರುವ ನರ ವ್ಯೂಹಕೇಂದ್ರಗಳು 'ಆನಂದದ ಕೇಂದ್ರ'ದಿಂದ ಪ್ರತ್ಯೇಕವಾಗಿದ್ದರೂ ಅದರ ಸುತ್ತಮುತ್ತಲೂ ಇವೆ. ಅಲ್ಲದೆ, ಅಳು, ನಗು, ಕೋಪ, ಭಯ, ಲಜ್ಜೆ, ಇತ್ಯಾದಿ ಭಾವನೆಗಳನ್ನು ನಡಸಿಕೊಡುವ ನರವ್ಯೂಹಕೇಂದ್ರಗಳೂ 'ಆನಂದದ ಕೇಂದ್ರ'ದ ಸುತ್ತಮುತ್ತಲೂ ಇವೆ. ಹಾಗೂ, ಪಂಚೇಂದ್ರಿಯಗಳಿಂದ ಅರಿತ ದ್ದನ್ನು, ಹಳೆಯ ನೆನಪುಗಳೊಂದಿಗೆ ಸಮನ್ವಯಮಾಡಿ ಯಾವ ನರಕೇಂದ್ರ ಗಳು ಮನಸ್ಸಿಗೆ ಗೋಚರಪಡಿಸುತ್ತವೋ, ಆ ಕೇಂದ್ರಗಳು ಕೂಡ 'ಆನಂದದ ಕೇಂದ್ರ'ದ ನೆರೆಹೊರೆಯಲ್ಲಿಯೇ ಇವೆ.

ಆದರೆ, 'ಆನಂದದ ಕೇಂದ್ರ'ವನ್ನು ಹೊರಗಡೆಯಿಂದ ಉದ್ರೇಕಿಸು ತ್ತೇವೆ ಎಂದು ಪ್ರಯತ್ನಪಟ್ಟರೆ, ಅತ್ಯಗತ್ಯವಾದ ದೈಹಿಕಕ್ರಮಗಳ ಕೇಂದ್ರ ಗಳನ್ನು ಅಪಾಯಕ್ಕೆ ಈಡುಮಾಡಬಹುದು, ಭಾವನಾಕೇಂದ್ರಗಳನ್ನು ತುಂಡು ಮಾಡಬಹುದು. ಹಾಗೂ, ಪಂಚೇಂದ್ರಿಯಗಳ ಕೆಲಸವೇ ಮೆದುಳಿಗೆ ತಿಳಿಯ ದಂತೆ ಮಾಡಬಹುದು. ಆದರೆ, ಮನಸ್ಸು ದೇಹದ ಹತೋಟಿಯನ್ನು ಮಾನಸಿಕ ಸಂಕಲ್ಪದಿಂದಲೇ ಹೊಂದಿ, 'ಆನಂದದ ಕೇಂದ್ರ'ವನ್ನು ಚಕಿತಗೊಳಿ ಸುವುದು ಸಾಧ್ಯ. ಆಗ ದೈಹಿಕಕಾರ್ಯಕ್ರಮಗಳಲ್ಲಿ ತೀವ್ರ ವ್ಯತ್ಯಾಸ ಕಾಣ ಬರಬಹುದು. ಕುಂಡಲಿನಿಯೋಗಾಭ್ಯಾಸದಲ್ಲಿ, 'ಆನಂದದ ಕೇಂದ್ರ'ವನ್ನು ಚಕಿತಗೊಳಿಸಿದಾಗ—ಅಂದರೆ. ಅವರ ಭಾಷೆಯಲ್ಲಿ ಸಹಸ್ರಾರವನ್ನು ಸೇರಿದಾಗ—ದೇಹವೆಲ್ಲವೂ ಶವದಂತೆ ತಣ್ಣಗಿರುತ್ತದೆ, ನೆತ್ತಿಯ ಮೇಲೆ ಮಾತ್ರ ಸ್ವಲ್ಪ ಶಾಖವಿರುತ್ತದೆ. ಶಾಖದ ಹತೋಟಿಕೇಂದ್ರವು ನಿಶ್ಚೇತನ

ಸ್ಸಿಗೆ ತಿಳಿಸುವ ಕೇಂದ್ರಗಳಿವೆ. ಈ ಕೇಂದ್ರಗಳು ದೇಹದ ಜೀವಂತಸ್ಥಿತಿಗೆ ಆವಶ್ಯಕವಾದ ಕೇಂದ್ರಗಳ ಸುತ್ತುಮುತ್ತಲೂ ಇವೆ.

ಈ. ಇವುಗಳೆಲ್ಲದರ ಮಧ್ಯದಲ್ಲಿ ಆನಂದದ ಕೇಂದ್ರವು ಇದೆ'. ಇದರ ಸುತ್ತುಮುತ್ತಲಿರುವ ಅಂತರ್ದೈಹಿಕ ಕಾರ್ಯಗಳ ಕೇಂದ್ರಗಳು ಈ ಆನಂದದ ಕೇಂದ್ರದೊಂದಿಗೆ ತುಸು ಸಂಪರ್ಕ ಹೊಂದಿರುತ್ತವೆ. ಹಾಗೂ ಭಾವನಾಕೇಂದ್ರ ಗಳು ಕೂಡ, ಅಂತರ್ದೈಹಿಕ ಕೇಂದ್ರಗಳ ಮತ್ತು ಆನಂದದ ಕೇಂದ್ರದ ಸಂಪರ್ಕ ವನ್ನು ಹೊಂದಿರುತ್ತದೆ. ಅಲ್ಲದೆ, ಪಂಚೇಂದ್ರಿಯಗಳು ಸುದ್ದಿಯನ್ನು ಗೋಚರ ಮನಸ್ಸಿಗೆ ಅನ್ವಯಿಸಿಕೊಡುವ ಕೇಂದ್ರಗಳೂ ಸುತ್ತುಮುತ್ತಲಿವೆ.

ಇವೆಲ್ಲವನ್ನೂ ಸ್ಥೂಲವಾಗಿ Lymbic System (ಲಿಂಬಿಕ್ ಸಿಸ್ಟಂ) ಎಂದು ಕರೆಯುತ್ತಾರೆ.

೨

ಶಾಂತಿಕಾರಕ ಔಷಧಿಗಳನ್ನು ಸೇವಿಸಿದಾಗ, ಆನಂದದ ಕೇಂದ್ರದ ಸುತ್ತಮುತ್ತ ಇರುವ, ಪಂಚೇಂದ್ರಿಯಗಳ ಸುದ್ದಿಗಳನ್ನು ಅನ್ವಯಿಸಿಕೊಡುವ ಕೇಂದ್ರಗಳು ರಾಸಾಯನಿಕವಾಗಿ ಉದ್ರೇಕಗೊಳ್ಳುತ್ತವೆ. ಆದುದರಿಂದ ಉತ್ಪ್ರೇಕ್ಷೆಗೊಂಡ ವಿವಿಧ ಅತಿಸುಂದರ ದೃಶ್ಯಗಳೇ ಮೊದಲಾದುವು ಅನುಭವಕ್ಕೆ ಬರುತ್ತವೆ. ಹಾಗೂ ಆನಂದದ ಕೇಂದ್ರಗಳ ತುಸು ಸಂಪರ್ಕವಿರುವುದರಿಂದ ಆನಂದವೂ ಆಗುತ್ತದೆ. ಆದರೆ ದೈಹಿಕ ಕೇಂದ್ರಗಳ ಮೇಲೆ ಅಂತಹ ಗಮನಾರ್ಹವಾದ ಪರಿಣಾಮವೇನೂ ಆಗಿರುವುದಿಲ್ಲ.

೩

ಕುಂಡಲಿನಿ ಯೋಗಾಭ್ಯಾಸಿಯು ಸಹಸ್ರಾರವನ್ನು ಉದ್ರೇಕಿಸಿ ಸಚ್ಚಿದಾ ನಂದವನ್ನು ಅನುಭವಿಸಿದೆ ಎಂದು ಹೇಳಿದಾಗ, ಆತನ ಮೈ ಶವದಂತೆ ತಣ್ಣ ಗಾಗಿರುವುದರಿಂದ, ಅಂತರ್ದೈಹಿಕ ವ್ಯವಸ್ಥಾಕೇಂದ್ರಗಳು ಉದ್ರೇಕಿಸಲ್ಪಟ್ಟಿವೆ

ಬಳಿಗೆ ಓಡೋಡಿಹೋಗುವಂತೆ, ಈ ಇಲಿಯೂ ಕೂಡ ಲೋಹದ ಹಲಗೆಯ ಬಳಿಗೆ ಆನಂದಾನುಭವಕ್ಕಾಗಿ ಓಡೋಡಿ ಹೋಗುತ್ತದೆ.

ಈರೀತಿ ಪ್ರಯೋಗಿಸಲ್ಪಟ್ಟ ಇಲಿಯನ್ನು ಅದರ ಮರಣಾನಂತರ ಪರೀಕ್ಷೆ ಮಾಡಲಾಯಿತು. ಉದ್ರೇಕಿಸಿದಾಗ ಆ ತೆರನಾದ ಅಸಾಧಾರಣ ಆನಂದವನ್ನು ಉಂಟುಮಾಡಿದ ನರವ್ಯೂಹ ಕೇಂದ್ರಗಳು ಮೆದುಳಿನ ಬುಡದ ಒಂದು ನಿಶ್ಚಿತವಾದ ಸ್ಥಳದಲ್ಲಿದೆ ಎಂದು ತಿಳಿದುಬಂದಿತು. ಈ ಕೇಂದ್ರವನ್ನು 'ಆನಂದದ ಕೇಂದ್ರ' ಎಂದು ಕರೆಯೋಣ.

ಉಸಿರಾಡುವಿಕೆ, ಹಸಿವು, ದಾಹ, ಹೃದಯದ ಬಡಿತ, ದೇಹದ ಶಾಖ ಇತ್ಯಾದಿ ಅತ್ಯವಶ್ಯಕವಾದ ಕಾರ್ಯಕ್ರಮಗಳನ್ನು ಹತೋಟಿಯಲ್ಲಿಟ್ಟಿರುವ ನರವ್ಯೂಹಕೇಂದ್ರಗಳು 'ಆನಂದದ ಕೇಂದ್ರ'ದಿಂದ ಪ್ರತ್ಯೇಕವಾಗಿದ್ದರೂ ಅದರ ಸುತ್ತಮುತ್ತಲೂ ಇವೆ. ಅಲ್ಲದೆ, ಅಳು, ನಗು, ಕೋಪ, ಭಯ, ಲಜ್ಜೆ, ಇತ್ಯಾದಿ ಭಾವನೆಗಳನ್ನು ನಡಸಿಕೊಡುವ ನರವ್ಯೂಹಕೇಂದ್ರಗಳೂ 'ಆನಂದದ ಕೇಂದ್ರ'ದ ಸುತ್ತಮುತ್ತಲೂ ಇವೆ. ಹಾಗೂ, ಪಂಚೇಂದ್ರಿಯಗಳಿಂದ ಅರಿತದ್ದನ್ನು, ಹಳೆಯ ನೆನಪುಗಳೊಂದಿಗೆ ಸಮನ್ವಯಮಾಡಿ ಯಾವ ನರಕೇಂದ್ರಗಳು ಮನಸ್ಸಿಗೆ ಗೋಚರಪಡಿಸುತ್ತವೋ, ಆ ಕೇಂದ್ರಗಳು ಕೂಡ 'ಆನಂದದ ಕೇಂದ್ರ'ದ ನೆರೆಹೊರೆಯಲ್ಲಿಯೇ ಇವೆ.

ಆದರೆ, 'ಆನಂದದ ಕೇಂದ್ರ'ವನ್ನು ಹೊರಗಡೆಯಿಂದ ಉದ್ರೇಕಿಸುತ್ತೇವೆ ಎಂದು ಪ್ರಯತ್ನಪಟ್ಟರೆ, ಅತ್ಯಗತ್ಯವಾದ ದೈಹಿಕಕ್ರಮಗಳ ಕೇಂದ್ರಗಳನ್ನು ಅಪಾಯಕ್ಕೆ ಈಡುಮಾಡಬಹುದು, ಭಾವನಾಕೇಂದ್ರಗಳನ್ನು ತುಂಡುಮಾಡಬಹುದು. ಹಾಗೂ, ಪಂಚೇಂದ್ರಿಯಗಳ ಕೆಲಸವೇ ಮೆದುಳಿಗೆ ತಿಳಿಯದಂತೆ ಮಾಡಬಹುದು. ಆದರೆ, ಮನಸ್ಸು ದೇಹದ ಹತೋಟಿಯನ್ನು ಮಾನಸಿಕ ಸಂಕಲ್ಪದಿಂದಲೇ ಹೊಂದಿ, 'ಆನಂದದ ಕೇಂದ್ರ'ವನ್ನು ಚಕಿತಗೊಳಿಸುವುದು ಸಾಧ್ಯ. ಆಗ ದೈಹಿಕಕಾರ್ಯಕ್ರಮಗಳಲ್ಲಿ ತೀವ್ರ ವ್ಯತ್ಯಾಸ ಕಾಣಬರಬಹುದು. ಕುಂಡಲಿನಿಯೋಗಾಭ್ಯಾಸದಲ್ಲಿ, 'ಆನಂದದ ಕೇಂದ್ರ'ವನ್ನು ಚಕಿತಗೊಳಿಸಿದಾಗ– ಅಂದರೆ. ಅವರ ಭಾಷೆಯಲ್ಲಿ ಸಹಸ್ರಾರವನ್ನು ಸೇರಿದಾಗ—ದೇಹವೆಲ್ಲವೂ ಶವದಂತೆ ತಣ್ಣಗಿರುತ್ತದೆ, ನೆತ್ತಿಯ ಮೇಲೆ ಮಾತ್ರ ಸ್ವಲ್ಪ ಶಾಖವಿರುತ್ತದೆ. ಶಾಖದ ಹತೋಟಿಕೇಂದ್ರವು ನಿಶ್ಚೇತನ

ಸ್ಸಿಗೆ ತಿಳಿಸುವ ಕೇಂದ್ರಗಳಿವೆ. ಈ ಕೇಂದ್ರಗಳು ದೇಹದ ಜೀವಂತಸ್ಥಿತಿಗೆ ಆವಶ್ಯಕವಾದ ಕೇಂದ್ರಗಳ ಸುತ್ತುಮುತ್ತಲೂ ಇವೆ.

ಈ. ಇವುಗಳೆಲ್ಲದರ ಮಧ್ಯದಲ್ಲಿ ಆನಂದದ ಕೇಂದ್ರವು ಇದೆ'. ಇದರ ಸುತ್ತುಮುತ್ತಲಿರುವ ಅಂತರ್ದೈಹಿಕ ಕಾರ್ಯಗಳ ಕೇಂದ್ರಗಳು ಈ ಆನಂದದ ಕೇಂದ್ರದೊಂದಿಗೆ ತುಸು ಸಂಪರ್ಕ ಹೊಂದಿರುತ್ತವೆ. ಹಾಗೂ ಭಾವನಾಕೇಂದ್ರ ಗಳು ಕೂಡ, ಅಂತರ್ದೈಹಿಕ ಕೇಂದ್ರಗಳ ಮತ್ತು ಆನಂದದ ಕೇಂದ್ರದ ಸಂಪರ್ಕ ವನ್ನು ಹೊಂದಿರುತ್ತದೆ. ಅಲ್ಲದೆ, ಪಂಚೇಂದ್ರಿಯಗಳು ಸುದ್ದಿಯನ್ನು ಗೋಚರ ಮನಸ್ಸಿಗೆ ಅನ್ವಯಿಸಿಕೊಡುವ ಕೇಂದ್ರಗಳೂ ಸುತ್ತುಮುತ್ತಲಿವೆ.

ಇವೆಲ್ಲವನ್ನೂ ಸ್ಥೂಲವಾಗಿ Lymbic System (ಲಿಂಬಿಕ್ ಸಿಸ್ಟಂ) ಎಂದು ಕರೆಯುತ್ತಾರೆ.

೨

ಶಾಂತಿಕಾರಕ ಔಷಧಿಗಳನ್ನು ಸೇವಿಸಿದಾಗ, ಆನಂದದ ಕೇಂದ್ರದ ಸುತ್ತಮುತ್ತ ಇರುವ, ಪಂಚೇಂದ್ರಿಯಗಳ ಸುದ್ದಿಗಳನ್ನು ಅನ್ವಯಿಸಿಕೊಡುವ ಕೇಂದ್ರಗಳು ರಾಸಾಯನಿಕವಾಗಿ ಉದ್ರೇಕಗೊಳ್ಳುತ್ತವೆ. ಆದುದರಿಂದ ಉತ್ಪ್ರೇಕ್ಷೆಗೊಂಡ ವಿವಿಧ ಅತಿಸುಂದರ ದೃಶ್ಯಗಳೇ ಮೊದಲಾದುವು ಅನುಭವಕ್ಕೆ ಬರುತ್ತವೆ. ಹಾಗೂ ಆನಂದದ ಕೇಂದ್ರಗಳ ತುಸು ಸಂಪರ್ಕವಿರುವುದರಿಂದ ಆನಂದವೂ ಆಗುತ್ತದೆ. ಆದರೆ ದೈಹಿಕ ಕೇಂದ್ರಗಳ ಮೇಲೆ ಅಂತಹ ಗಮನಾರ್ಹವಾದ ಪರಿಣಾಮವೇನೂ ಆಗಿರುವುದಿಲ್ಲ.

೩

ಕುಂಡಲಿನಿ ಯೋಗಾಭ್ಯಾಸಿಯು ಸಹಸ್ರಾರವನ್ನು ಉದ್ರೇಕಿಸಿ ಸಚ್ಚಿದಾ ನಂದವನ್ನು ಅನುಭವಿಸಿದೆ ಎಂದು ಹೇಳಿದಾಗ, ಆತನ ಮೈ ಶವದಂತೆ ತಣ್ಣ ದಾಗಿರುವುದರಿಂದ, ಅಂತರ್ದೈಹಿಕ ವ್ಯವಸ್ಥಾಕೇಂದ್ರಗಳು ಉದ್ರೇಕಿಸಲ್ಪಟ್ಟಿವೆ.

ಅಥವಾ ಸ್ತಬ್ಧಗೊಳಿಸಲ್ಪಟ್ಟಿವೆ ಎನ್ನಬೇಕು. ಪಂಚೇಂದ್ರಿಯಗಳ ಸುದ್ದಿಗಳನ್ನು ಅನ್ವಯಿಸಿಕೊಡುವ ಕೇಂದ್ರಗಳೂ ಉದ್ರಿಕ್ತವಾಗಿರಬೇಕು. ಹಾಗಾದಾಗ, ಜನ್ಮಜನ್ಮಾಂತರದಿಂದ ಆನುವಂಶಿಕವಾಗಿ ಮೆದುಳಿನ Cortex ನಲ್ಲಿ ಶೇಖರಿಸಲ್ಪಟ್ಟಿರುವ ನೆನಪುಗಳೆಲ್ಲಾ ಗೋಚರವಾಗಿ, ಉತ್ಪ್ರೇಕ್ಷೆಹೊಂದಿ, ಸೌಂದರ್ಯದ ಅನುಭವವು ಆಗಿರಬೇಕು. ಭೂತಕಾಲದ ನೆನಪೆಲ್ಲಾ ತೋರಮನಸ್ಸಿಗೆ ಕಾಣಿಸಿರಬೇಕು. ಭಾವನಾಕೇಂದ್ರಗಳನ್ನು ದಾಟಿ ಆನಂದ ಕೇಂದ್ರಗಳನ್ನೇ ಚಕಿತಗೊಳಿಸಿರಬೇಕು. ಆದುದರಿಂದಲೇ, ವರ್ಣಿಸಲು ಅಶಕ್ಯವಾದ ಅಮಿತಾನಂದವನ್ನು ಅನುಭವಿಸಿರಬೇಕು. ಆದುದರಿಂದಲೇ ಅಂತಹವರು "ಈ ಅಮಿತಾನಂದವೇ ಬಾಳಿನ ಗುರಿ. ಅದರ ಸಿದ್ಧಿಯೇ ಸತ್ಯಾನ್ವೇಷಣೆಯ ಅಂತಿಮ ಗುರಿ" ಎಂದು ಹೇಳಿರುವುದು.

೪

ಬುದ್ಧ, ಸೊರಾಸ್ಟರ್, ಯೇಸು, ಹಜರತ್ ಮಹಮ್ಮದ್ ಮೊದಲಾದ ಹಿರಿಯ ಮತಸ್ಥಾಪನಾಚಾರ್ಯರುಗಳನ್ನು ಈ ದೃಷ್ಟಿಯಿಂದ ನೋಡಿದರೆ, ಒಂದು ಅಂಶವು ಸ್ಪಷ್ಟವಾಗಿ ಕಾಣುತ್ತದೆ. ಇವರುಗಳೆಲ್ಲರಿಗೂ ತಮ್ಮ ಸುತ್ತಲಿನ ಸಮಾಜದ ದುಃಖವನ್ನು ನೋಡಿ ಅನುಕಂಪ ತುಂಬಿಬಂದು, ಅವರ ನಿಃಸ್ವಾರ್ಥೀ ಮಾನಸಿಕ ಚಟುವಟಿಕೆಯನ್ನು ಚಕಿತಗೊಳಿಸಿತು. ಆಗ ಅವರುಗಳು ಹಲವಾರು ವಾರ, ತಿಂಗಳು ನಿರ್ಜನಪ್ರದೇಶದಲ್ಲಿ ಮಿತವಾದ ಆಹಾರ ಸೇವಿಸಿ, ಒಂಟಿಯಾಗಿ, ಏಕಾಗ್ರಚಿತ್ತದಿಂದ ಮನನಮಾಡಿದರು. ಅಂದರೆ ವಿಚಾರ ಮಾಡಿದರು, ವೈಜ್ಞಾನಿಕ ಕುತೂಹಲದಿಂದ ವಿಚಾರಮಾಡಿದರು. ಅವರಿಗೆ ದಿವ್ಯಜ್ಯೋತಿಯು ಒಂದಲ್ಲ ಒಂದು ರೂಪಿನಲ್ಲಿ ಹಠಾತ್ತಾಗಿ ಕಾಣಿಸಿತು. ಆಗಲೇ ಅವರಿಗೆ ಸತ್ಯದರ್ಶನವಾಗಿದ್ದಿರಬೇಕು. ಆಗ ಆ ಆವೇಶದಲ್ಲಿ, ಪ್ರಬುದ್ಧರಾಗಿ ಅವರು ನುಡಿದುದೆಲ್ಲವೂ 'ಸತ್ಯ'ವಾಗಿರಬೇಕು. ಅಮಿತಾನಂದದ ಅನುಭವವು ಆಗ ಅವರುಗಳಿಗೆ ಆಗಿದ್ದಿರಬೇಕು. ಆದ್ದರಿಂದಲೇ ಅವರು ನುಡಿದುದೆಲ್ಲವೂ ಪವಿತ್ರಗ್ರಂಥಗಳಾದುವು. ಅಂತಹ ಗ್ರಂಥಗಳ ಪಠಣೆಯು ತೊಳಲುವ ಕೋಟ್ಯಂತರ ಜನರಿಗೆ ಆಳಮನಸ್ಸಿ

ನಲ್ಲಿ ಆನಂದವನ್ನೂ ತೋರಮನಸ್ಸಿನಲ್ಲಿ ಸಮಾಧಾನವನ್ನೂ ಸಹಸ್ರಾರು ವರ್ಷಗಳಿಂದ ಕೊಡುತ್ತಿರುವುದೇ ಈ ನಂಬಿಕೆಗೆ ಸಾಕ್ಷಿ.

ಏಬ್ರಹಂ, ಮೋಸೆಸ್ ಮೊದಲಾದ ಹಲವಾರು ಮಹಾತ್ಮರು ಇದೇ ಅನುಭವವನ್ನು ಪಡೆದಿದ್ದಿರಬೇಕು. ಆದರೆ, ಉದಾಹರಣೆಗಾಗಿ ಕೆಲವರು ಮಾತ್ರ ಹಿರಿಯ ಮತಸ್ಥಾಪನಾಚಾರ್ಯರುಗಳ ನಿದರ್ಶನವನ್ನು ಕೊಡಲಾಗಿದೆ.

೫

ಹಿಮಾಲಯದ ಶಿಖರಪ್ರದೇಶಗಳಲ್ಲಿನ ಗಾಳಿಯಲ್ಲಿ ಆಕ್ಸಿಜನ್ ಪ್ರಮಾಣವು ಕಡಮೆಯಾಗಿರುತ್ತದೆ. ಹಾಗಾಗಿ ಅಲ್ಲಿ ಉಸಿರಾಡುವುದೂ ಬೇಗಬೇಗಲೇ. ಏಕೆಂದರೆ, ಸಾಕಷ್ಟು ಆಕ್ಸಿಜನ್ ದೇಹಕ್ಕೆ ಒದಗಬೇಕಾದರೆ, ಹೆಚ್ಚು ಹೆಚ್ಚು ಗಾಳಿಯನ್ನು ಉಸಿರಾಡಲೇಬೇಕು. ಇತ್ತೀಂದೀಚಿನ ವೈಜ್ಞಾನಿಕ ಪ್ರಯೋಗಗಳಿಂದ ಇಂತಹ ವಾತಾವರಣದಲ್ಲಿ ಮಾನವನ ಮನಸ್ಸಿನ ಮೇಲೆ ಭ್ರಮೆಯುಂಟಾಗುತ್ತದೆ ಎಂದು ಸಿದ್ಧಾಂತವಾಗಿದೆ. ಅಂದರೆ, ಮಾನವನ ಮನಸ್ಸು ತಪ್ಪಲುಪ್ರದೇಶದಲ್ಲಿದ್ದಂತೆ ಅಲ್ಲಿ ಕೆಲಸಮಾಡುವುದು ಕಷ್ಟ ಎಂದಂತಾಯಿತು. ಆದರೆ, ಈ ಹವಾಗುಣವನ್ನೇ ಒಗ್ಗಿಸಿಕೊಂಡರೆ, ನಂತರ ಮನಸ್ಸು ಚುರುಕಾಗಲೂಬಹುದು ; ಮನಸ್ಸಿನ ಎಚ್ಚರವು ಹೆಚ್ಚೂ ಆಗಬಹುದು. ಗುಡ್ಡಗಾಡಿನ ಜನರು ಅಂತಹ ಪ್ರದೇಶಗಳಲ್ಲಿ ವಾಸಮಾಡುತ್ತಿರುವುದು ಕೂಡ ಈ (Adaptation) ಒಗ್ಗುವಿಕೆಯಿಂದಲೇ.

ಹಿಮಾಲಯದ ಯಾತ್ರೆಯನ್ನು ಕೈಕೊಂಡ ಹಲವಾರು ಹಿರಿಯ ಆತ್ಮವಂತರು ಶಾಸ್ತ್ರಾಭ್ಯಾಸವನ್ನು ಆಳವಾಗಿ ಮಾಡಿದ್ದರು. ಗುರುಮುಖದಿಂದ ಕಲಿತಿದ್ದುದನ್ನು ಮನನಮಾಡಿ, ತಮ್ಮ ಮನಸ್ಸಿನ ಗ್ರಹಣಶಕ್ತಿಯನ್ನು ತೀಕ್ಷ್ಣಪಡಿಸಿಕೊಂಡಿದ್ದರು. ಇಂತಹವರಲ್ಲಿ ಕೆಲವರು ಯಾತ್ರಾಸಮಯದಲ್ಲಿ ಅಲ್ಲಿನ ಎಚ್ಚರಗೊಳಿಸುವ ವಾತಾವರಣದಲ್ಲಿನ ಅಮಿತಾನಂದವನ್ನು ಅನುಭವಿಸಿದ್ದಿರಬೇಕು. ಏಕೆಂದರೆ, ಅನಂತರ ಅವರುಗಳು ಹಿಂತಿರುಗಿದಾಗ, ಅವರ ಮನಸ್ಸಿನಲ್ಲಿ ಸಂದೇಹಗಳಿದ್ದಿರಲಿಲ್ಲ. 'ಸತ್ಯವನ್ನು ಕಂಡಿದ್ದೇವೆ. ಅದೇ ಇದು!' ಎಂದು ಬೋಧಿಸತೊಡಗಿದರು. ಈ ಬೋಧನೆಗಳಿಂದ ಲಕ್ಷಾಂತರ ಸಾಮಾನ್ಯ ಜನರು

ವ್ಯಕ್ತಮನಸ್ಸಿನಲ್ಲಿ ಸಮಾಧಾನವನ್ನೂ ಆಳಮನಸ್ಸಿನಲ್ಲಿ ಆನಂದವನ್ನೂ ನೂರಾರು ವರ್ಷಗಳಿಂದ ಪಡೆದಿದ್ದಾರೆ. ಅಂದಮೇಲೆ, ಮೂಲಸತ್ಯವನ್ನು ಇವರುಗಳು ಕಂಡಿರಲೇಬೇಕು. ಆದರೆ ಕಂಡ ಸತ್ಯವನ್ನು, ಅನುಭವಿಸಿದ ಅಮಿತಾನಂದವನ್ನು ಮಾತುಗಳಲ್ಲಿ ವರ್ಣಿಸುವುದು ಅಸಾಧ್ಯ. ಹಾಗಾಗಿ, ತಮ್ಮ ಬಾಲ್ಯದ ವ್ಯಾಸಂಗಕ್ಕೆ ಅನುಗುಣವಾಗಿ ಅವರುಗಳು ಅದನ್ನು ವರ್ಣಿಸಿದ್ದಿರಬೇಕು. ಹೀಗಾದಾಗ ಮಾತ್ರ ಮೂಲಸತ್ಯವನ್ನು ಮೂವರು ಕಂಡರೆ, ಅದನ್ನು ಮೂರು ವಿಧವಾಗಿ ವರ್ಣಿಸಲು ಸಾಧ್ಯ.

ಹೀಗೆ ಆಗಿದೆಯೇನೋ ಎನ್ನಲು ಸಾಕಷ್ಟು ವೈಜ್ಞಾನಿಕ ಕಾರಣಗಳಿವೆ.

೬

ಒಟ್ಟಿನಲ್ಲಿ ದೇಹದ ಕಾರ್ಯಕ್ರಮಗಳೆಲ್ಲವನ್ನೂ ನಡಸಿಕೊಡುವ ಮೂಲ ಭೂತಧರ್ಮವೇ ಆನಂದ, ದೇಹಾನಂದ. (The Pleasure-Principle of Freud.)

ಮಾನಸಿಕ ಪ್ರಗತಿ ಹೊಂದಿದ ಮೇಲೆ ಸೌಂದರ್ಯಾನ್ವೇಷಣೆಯು ನೆನಪುಗಳಿಂದ ಪ್ರಾರಂಭವಾಯಿತು. ಆಗ ದೇಹಾನಂದವಾಗಬೇಕಾದರೆ ಮಾನಸಿಕ ಆನಂದವೂ ಅಗತ್ಯವಾಯಿತು. ಇವುಗಳೊಡನೆ ಹಾಸುಹೊಕ್ಕಾಗಿ ಬೆರೆತಿದ್ದರೂ, ಇವುಗಳಿಂದ ಹೊರತಾಗಿಯೂ ಇರುವ ಅಮಿತಾನಂದವು ಸತ್ಯಾನ್ವೇಷಣೆಗಳಿಗೆ ದೊರಕುವುದು—ಎಂದು ಹೇಳಿದಂತಾಯಿತು.

ಅನುಭವವನ್ನು ಪಡೆದವರು ತಮಗೆ ಸಿದ್ಧಿಸಿದ ಸತ್ಯದರ್ಶನವನ್ನು ಹೇಗೆ ವಿವರಿಸಿರಬಹುದು ? ಆನಂದದ ಕೇಂದ್ರವನ್ನು ಚಕಿತಗೊಳಿಸಿ, ಅಮಿತಾನಂದ ಅಥವಾ ಸಚ್ಚಿದಾನಂದವನ್ನು ಅನುಭವಿಸಿದವರು ದೇಹಾನಂದವನ್ನೂ ಮಾನಸಿಕ ಆನಂದವನ್ನೂ ದೊಡ್ಡದೆಂದು ಕಾಣುವುದಿಲ್ಲ. ಅಂತಹವರು ಏನೆಂದು ಹೇಳಿರಬಹುದು.

ಅ. ದೇಹಾನಂದವು ವ್ಯಾವಹಾರಿಕವಾಗಿ, ಅಂದರೆ ಬದುಕಿ ಬಾಳುವಾಗ, ಸತ್ಯವಾದದ್ದು. ಬಾಳಿನಲ್ಲಿ ಹುಟ್ಟುವುದು, ಸಾಯುವುದು ಎಂಬ ಎರಡು ಘಟನೆಗಳು ಸತ್ಯ. ಇವುಗಳ ಅಂತರದಲ್ಲಿರುವುದೆಲ್ಲಾ ವ್ಯಾವಹಾರಿಕವಾಗಿ ಸತ್ಯ.

ಜನನ, ಜೀವನ, ಮರಣ ಈ ಮೂರನ್ನೂ ಅನುಭವಿಸುವುದು ಕಣ್ಣಿಗೆ ಕಾಣುವ ದೇಹ. ಅಂದರೆ, ದೇಹವೂ ದೇಹಾನಂದವೂ ವ್ಯಾವಹಾರಿಕವಾಗಿ ಸತ್ಯ.

ಆದರೆ, ಮಾನಸಿಕ ಆನಂದವನ್ನು ಕೊಡುವುದು ಮನಸ್ಸಿನಲ್ಲಿ ಶೇಖರಿಸಲ್ಪಟ್ಟ ಹಳೆಯ ನೆನಪುಗಳು. ಈ ನೆನಪುಗಳ ಅನುಭವವೇ ಆನಂದದಾಯಕವಾಗುತ್ತದೆ. ಆದರೆ, ಮಾನಸಿಕ ನೆನಪು ಸತ್ಯವಾಗಿದೆಯೊ? ಇಲ್ಲ. ಇದು ಮನಸ್ಸಿನಲ್ಲಿರುವ ಒಂದು ನೆನಪು. ಅಂದರೆ, ಹಿಂದೆ ಅನುಭವಿಸಲ್ಪಟ್ಟ ಯಾವುದಾದರೂ ಒಂದರ ಸಂಕೇತ. ನಾವು ಹೊರಗಿನ ಪ್ರಪಂಚದ ಅರಿವನ್ನು ಮಾಡಿಕೊಂಡು ಶೇಖರಿಸಿಟ್ಟಿರುವುದೂ ಈ ಸಂಕೇತದ ರೂಪದಲ್ಲೇ. ಅಂದರೆ, ಯಾವ ಯಾವ ನೆನಪಿನ ಸಂಕೇತಗಳನ್ನು ನಮ್ಮ ಮನಸ್ಸು ಈ ಜಗತ್ತು ಎಂದು ಗ್ರಹಿಸಿರುತ್ತದೆಯೋ ಅದು ಮಿಥ್ಯ.

ಆದರೆ, ಅಮಿತಾನಂದದ ಅನುಭವವು ಸತ್ಯವಾದುದು. ಅದಕ್ಕೆ ದೇಹದ ಬಂಧನವಿಲ್ಲ, ಮನಸ್ಸಿನ ಸ್ವಾರ್ಥವಿಲ್ಲ. ಇದೇ ಬ್ರಹ್ಮಾನಂದ.

ಈ ಸಾರಾಂಶವನ್ನು "ಬ್ರಹ್ಮ ಸತ್ಯಂ. ಜಗನ್ಮಿಥ್ಯಾ. ವ್ಯಾವಹಾರಿಕ ಸತ್ಯಂ." ಎಂದು ಆದಿಶಂಕರಾಚಾರ್ಯರು ಅಮಿತಾನಂದಾನುಭವವಾದ ಮೇಲೆ ಸೂತ್ರರೂಪದಲ್ಲಿ ಹೇಳಿರಬಹುದು.

ಆ. ದೇಹಾನಂದವನ್ನು ತಿಳಿಸುವ, ಅಂತರ್ದೈಹಿಕ ವ್ಯವಸ್ಥಾಕೇಂದ್ರಗಳು ಚಕಿತವಾದಾಗ, ಆನಂದದ ಲೋಕವನ್ನು ಮುಟ್ಟಿದ್ದೇವೆ ಎಂದೂ–

ಮಾನಸಿಕ ಆನಂದವನ್ನು ತಿಳಿಸುವ, ಪಂಚೇಂದ್ರಿಯಗಳ ಸುದ್ದಿಗಳನ್ನು ಅನ್ವಯಿಸುವ ಕೇಂದ್ರಗಳು ಚಕಿತವಾದಾಗ ಅಮಿತಾನಂದದ ಸಾಮೀಪ್ಯವನ್ನು ಪಡೆದಿದ್ದೇವೆ ಎಂದೂ–

ಭಾವನಾಕೇಂದ್ರಗಳು ಚಕಿತಗೊಂಡಾಗ ಆನಂದದ ರೂಪ ಸ್ಪಷ್ಟವಾಗಿ ಕಾಣುತ್ತಿದೆಯೆಂದೂ–

ಆನಂದದ ಕೇಂದ್ರವು ಚಕಿತವಾದಾಗ, ಆ ಬ್ರಹ್ಮಾನಂದದ ಅನುಭವವಾದಾಗ, ಅನುಭವಿಸುವವನು, ಅನುಭವಿಸಿದ್ದು ಎಂಬ ದ್ವಂದ್ವವು ಇರುವುದಿಲ್ಲವೆಂದೂ ಹೇಳಬಹುದು. ಶ್ರೀ ರಾಮಾನುಜಾಚಾರ್ಯರು ಬದರಿಕಾಶ್ರಮಕ್ಕೆ ಹೋಗಿ ತಪಸ್ಸು ಮಾಡಿ, ಸಾಲೋಕ್ಯ, ಸಾಮೀಪ್ಯ, ಸಾರೂಪ್ಯ, ಸಾಯುಜ್ಯ

ಎಂದು ನಾಲ್ಕು ಹಂತಗಳಲ್ಲಿ ಬ್ರಹ್ಮಾನಂದವನ್ನು ವಿವರಿಸಿರುವುದೂ ತನ್ನ ಸ್ವಂತ ಅನುಭವವನ್ನೇ ಕುರಿತು ಇರಬೇಕು.

೩. ದೇಹಾನಂದವಾಗಬೇಕಾದರೆ ಈ ದೇಹಕ್ಕೆ ಹೊರಗಿನಿಂದ ಯಾವುದಾದರೂ ದೊರಕಬೇಕು. ಊಟಕ್ಕಾಗಲಿ, ಕೂಟಕ್ಕಾಗಲಿ, ಹೊರಗಿನಿಂದ ಸಿಗಬೇಕು ಆದ್ದರಿಂದ ದೇಹಾನಂದವು ಅಸ್ವತಂತ್ರವಾದುದು.

ಮಾನಸಿಕ ಆನಂದವು ಕೂಡ ಹಳೆಯ ನೆನಪುಗಳ ಆಧಾರದಿಂದಲೇ ಉಂಟಾಗಿರುವುದು ಆದ್ದರಿಂದ ಇದು ಕೂಡ ಅಸ್ವತಂತ್ರವಾದದ್ದೇ.

ಆದರೆ ಬ್ರಹ್ಮಾನಂದವುಂಟಾದಾಗ, ಅದಕ್ಕೆ ಇನ್ನೊಂದರ ನೆರವು ಬೇಕಿಲ್ಲ ಇದು ಸ್ವತಂತ್ರವಾದುದು.

'ಸ್ವತಂತ್ರಂ ಅಸ್ವತಂತ್ರಂ ಚ ಪ್ರಮೇಯಂ ದ್ವಿವಿಧಂ ಮತಂ' ಎಂದು ಆನಂದತೀರ್ಥದಲ್ಲಿ ಮುಳುಗಿ ಪೂರ್ಣಪ್ರಜ್ಞರಾದ ಮಧ್ವಾಚಾರ್ಯರು ಹೇಳಿರುವುದೂ, ಇದನ್ನೇ ಏನೋ !

ಮೂವರು ಮಹಾತ್ಮರೂ ತಮ್ಮ ಅನುಭವವನ್ನು ತಮ್ಮ ದೃಷ್ಟಿಕೋನದಿಂದ ವಿವರಿಸಿದರು. ಮೂವರೂ ಕಂಡ ಸತ್ಯ ಒಂದೇ : ಮೂವರು ಹೇಳಿರುವುದೂ ಒಂದೇ. ಆದರೆ ಅರ್ಥಮಾಡಿಕೊಳ್ಳುವುದರಲ್ಲಿ ನಾವು ಎಡವಿರಬಹುದೇನೋ, ಎನ್ನಿಸುತ್ತದೆ.

## ಆನಂದವಲ್ಲೀ

ತೈತ್ತಿರೀಯ ಉಪನಿಷತ್ತಿನಲ್ಲಿ 'ಆನಂದ'ದ ಸ್ವರೂಪವನ್ನು ವಿವರಿಸುವ ಒಂದು ಭಾಗ 'ಆನಂದವಲ್ಲೀ'. ಇದರಲ್ಲಿ ಆನಂದದ ವಿಧವಿಧವಾದ ಹಂತಗಳನ್ನೂ ಆನಂದವೇ ಜೀವನವನ್ನು ನಡಸುವಂತೆ ಪ್ರೇರಿಸುವ ಶಕ್ತಿಯೆಂದೂ ಹಾಗೂ ಅಮಿತಾನಂದವನ್ನು ಹೇಗೆ ಅನುಭವಿಸಬಹುದು ಎಂಬುದನ್ನೂ ತಿಳಿಸಲಾಗಿದೆ. ಕೊನೆಯ ಶ್ಲೋಕವು 'ಆನಂದವಲ್ಲೀ'ಯ ಮುಖ್ಯ ಸಾರಾಂಶವನ್ನು ಸ್ಪಷ್ಟವಾಗಿ ಬೋಧಿಸಿದೆ.

ಯತೋ ವಾಚೋ ನಿವರ್ತಂತೇ ಅಪ್ರಾಪ್ಯ ಮನಸಾ ಸಹ
ಆನಂದಂ ಬ್ರಹ್ಮಣೋ ವಿದ್ವಾನ್ ನ ಬಿಭೇತಿ ಕದಾಚನ

ಮನಸ್ಸು ಹಾಗೂ ಮಾತು, ಇವೆರಡೂ ಯಾವ ಆನಂದವನ್ನು ಪಡೆಯು ಲಾರದೆ ಹಿಂತಿರುಗುತ್ತವೋ, ಆ 'ಆನಂದ'ವನ್ನು ಬ್ರಹ್ಮ (Ultimate Reality) ಎಂದು ಯಾರು ಅರಿಯುತ್ತಾರೋ ಅವರು ಎಂದೆಂದಿಗೂ ಯಾವುದಕ್ಕೂ ಭಯ ಪಡುವುದಿಲ್ಲ.

ಅಮಿತಾನಂದ, ಮಿತಿ ಮೀರಿ ಇರದ ಆನಂದ, ಎಂದು ಈ ತನಕ ನಾವು ವರ್ಣಿಸಿದ್ದು ಉಪನಿಷತ್ತಿನ ಈ 'ಆನಂದ'ವೇ.

ದೇಹಾನಂದ, ಮಾನಸಿಕ ಆನಂದ ಇವೆರಡನ್ನೂ ನಾವು ದೊರಕಿಸಿಕೊಳ್ಳ ಬಹುದು. ಆದರೆ, ಅಮಿತಾನಂದವನ್ನು ದೈವಕೃಪೆಯೇ ಕರುಣಿಸಬೇಕು ಮನುಷ್ಯಪ್ರಯತ್ನದಿಂದ ಇದು ಅಸಾಧ್ಯ. ಈ ಹಾದಿಯಲ್ಲಿ ಮನುಷ್ಯ ಪ್ರಯತ್ನ ವನ್ನು ಶುದ್ಧಮನಸ್ಸಿನಿಂದ ಸಂಕಲ್ಪಮಾಡಿ, ಸಂಯಮದಿಂದ ಆಚರಿಸಿದರೆ. ಆಗ ದೈವಕೃಪೆಯು ಅಮಿತಾನಂದವನ್ನು ಕರುಣಿಸುತ್ತದೆ. ಈ ಕಾರಣದಿಂದಲೇ ಹಲವಾರು ಹಿರಿಯ ಮತಸ್ಥಾಪನಾಚಾರ್ಯರುಗಳು 'ನಾವು ಶರಣುಹೋಗ ಬೇಕು, ಶರಣಾಗತರಾಗಬೇಕು. ಆಗಲೇ ದೈವವು ಕೃಪೆಮಾಡುತ್ತದೆ' ಎಂದು ಭಕ್ತಿಮಾರ್ಗವನ್ನು ಉಪದೇಶಿಸಿರುವರು.

ಈ. ಇಸ್ಲಾಂ ಧರ್ಮದಲ್ಲಿ ಮೂರು ತೆರನಾದ ಬಾಳನ್ನು ವಿವರಿಸುತ್ತಾರೆ :

೧. ನಫ್ಸೆ ಅಮ್ಮಾರ : ಅಂದರೆ, ಪಾಶವೀ ಬಾಳನ್ನುನಡಸಿ. ಅಷ್ಟರಲ್ಲೇ ಸಂತೋಷಪಡುವವರು. ಇದು ದೇಹದ ಎಲ್ಲಾ ಬೇಡಿಕೆಗಳ ಪೂರೈಕೆಯಲ್ಲಿಯೇ ಸುಖ ಕಾಣುವ ಪ್ರವೃತ್ತಿಯನ್ನು ತೋರಿಸುತ್ತದೆ. ದೇಹಾನಂದಕ್ಕೆ ಅನ್ವಯಿಸ ಬಹುದಾದ ಮಾತು ಇದು.

೨. ನಫ್ಸೆ ಲವ್ವಾಮ : ಅಂದರೆ, ಒಳಮನಸ್ಸಿನ ಅಂಕೆಗೆ ಶಿಕ್ಷೆಗೆ ಒಳಪಟ್ಟು, ತದನಂತರ ನಡಸುವ ಬಾಳು. ಅಂದರೆ ಮನಸ್ಸು, ತಾನು ಹಿಂದೆ ಕಲಿತ ಪಾಠಗಳನ್ನೆಲ್ಲ ಉಪಯೋಗಿಸಿಕೊಂಡು, ಮುಂದಿನ ಕೆಲಸಕ್ಕೆ ತೊಡಗುತ್ತದೆ; ವಿಚಾರಮಾಡಿದನಂತರ ಸೂಕ್ತ ಕಂಡ ಹಾಗೆ ಕೆಲಸಮಾಡುತ್ತದೆ. ಉದಾಹರಣೆಗೆ –ಮರದ ಮೇಲಿರುವ ಹಣ್ಣನ್ನು ಕಿತ್ತು ತಿನ್ನೋಣ ಎಂಬ ಆಸೆ ಹುಟ್ಟಬಹುದು. ಆಗ ಒಳಮನಸ್ಸು ಎಚ್ಚರಕೊಡುತ್ತದೆ, 'ಯಾರದೋ ಮರ ಇದು. ಇದರ ಹಣ್ಣನ್ನು ಕಿತ್ತರೆ, ಕಳ್ಳತನಮಾಡಿದಂತಾಗುತ್ತದೆ. ಅದು ತಪ್ಪು ಕೆಲಸ,' ಎಂದು. ಆಗ ಹಣ್ಣನ್ನು ಕೀಳದೆ ಮುಂದೆ ನಡೆಯುತ್ತೇವೆ. ಹೀಗೆ ಮಾಡಿದಾಗ, ಮನಸ್ಸಿಗೆ

'ಏನೋ ಒಳ್ಳೆಯ ಕೆಲಸ ಮಾಡಿದ್ದೇನೆ' ಎಂಬ ಆನಂದ ಉಂಟಾಗುತ್ತದೆ. ಇದನ್ನು ಮಾನಸಿಕ ಆನಂದಕ್ಕೆ ಅನ್ವಯಿಸಬಹುದು.

೩. ನಫ್ಸೆ ಮುತ್‌ಮ ಇನ್ನ : ಇಂತಹ ಬಾಳು ನಡಸುವವರು ಸುತ್ತು ಮುತ್ತಲಿನ ಆಗುಹೋಗುಗಳಿಂದ ಕಿಂಚಿತ್ತಾದರೂ ತಳಮಳಗೊಳ್ಳುವುದಿಲ್ಲ. ಬಾಳನ್ನು ಎಲ್ಲರಂತೆ! ನಡಸುತ್ತಿದ್ದರೂ, ಬಾಳಿನ ಕಷ್ಟನಿಷ್ಠುರಗಳನ್ನು ಅನುಭವಿಸುತ್ತಿದ್ದರೂ, ಇಂತಹವರು ಅಮಿತವಾದ ಆನಂದವನ್ನು ಅನುಭವಿಸುತ್ತಲೇ ಇರುತ್ತಾರೆ. ಇದನ್ನು ಅಮಿತಾನಂದಕ್ಕೆ, ಬ್ರಹ್ಮಾನಂದಕ್ಕೆ, ಸಚ್ಚಿದಾನಂದಕ್ಕೆ ಅನ್ವಯಿಸಬಹುದು.

ಅಂದರೆ, ಹಜರತ್ ಮಹಮ್ಮದರು ಸತ್ಯದರ್ಶನವನ್ನು ಮಾಡಿದಾಗ, ಆವೇಶದಲ್ಲಿ ನುಡಿದಾಗ, ಈ ರೀತಿ ಹೇಳಿದುದು ಇಂದಿನ ವೈಜ್ಞಾನಿಕ ದೃಷ್ಟಿಯಿಂದಲೂ ಸಮಂಜಸ ಎನಿಸುತ್ತದೆ.

ಹೀಗೆ ಅಮಿತಾನಂದದ ಅನುಭವವನ್ನು ಪಡೆದವರು, 'ಅಮಿತಾನಂದವೇ ಬ್ರಹ್ಮ' ಎಂದು ಅರಿಯುವವರು ಯಾವುದಕ್ಕೂ ಎಂದೆಂದಿಗೂ ಭಯಪಡುವುದಿಲ್ಲ. ತೋರ ಅಥವಾ ವ್ಯಕ್ತಮನಸ್ಸಿನ, ಸುಪ್ತ ಅಥವಾ ಆಳಮನಸ್ಸಿನ ಯಾವುದಾದರೂ ಒಂದು ಭಯವೇ ನಮ್ಮ ಮಾನಸಿಕ ಆತಂಕಕ್ಕೆ, ದುಗುಡಕ್ಕೆ ಕಾರಣ. ಹಾಗಾದಾಗ ಮನೋದೈಹಿಕ ಬೇನೆಗಳು ಕಾಣಿಸಿಕೊಳ್ಳುತ್ತವೆ. ಭಯವೇ ಇರದಂತಾದರೆ, ಬೇನೆ ಬರಲಾರದು. ಅಂದರೆ, ಈ ರೀತಿಯ ಅರಿವಿನಿಂದ ಭಯ ನಿವಾರಣೆಯಾಗಿ, ಮಾನವನು ಮನೋದೈಹಿಕ ಬೇನೆಗಳಿಗೆ ತುತ್ತಾಗದೆ ಇರುತ್ತಾನೆ.

ಅಂದಮೇಲೆ, ಮಾನವಜೀವನಶಾಸ್ತ್ರದ ಪ್ರಕಾರ ವ್ಯಾಸಂಗಮಾಡಿದರೆ ಆಗ ಸಿದ್ಧಾಂತಿಸಬಹುದಾದ ಸತ್ಯವನ್ನೇ ಆನಂದವಲ್ಲರಿಯ ಶ್ಲೋಕವು ಉಪದೇಶಿಸಿದೆ—ಎನ್ನಬಹುದು.

## ಅಧ್ಯಾಯ ಒಂಭತ್ತು

# ಮನೋದೈಹಿಕ ಬೇನೆಗಳ ಚಿಕಿತ್ಸೆ

### ರೂಢಿಯಲ್ಲಿದ್ದ ಹಿಂದಿನ ಕ್ರಮಗಳು

ಮನೋದೈಹಿಕ ಬೇನೆಗಳು ಬಹಳ ಪುರಾತನಕಾಲದಿಂದಲೂ ಇದ್ದಿರಲೇಬೇಕು. ಆಗಿನ ಕಾಲದ ವೈದ್ಯರುಗಳು ನಮ್ಮ ಊರುಗಳಲ್ಲಿ ಯಾವ ತೆರನಾದ ಚಿಕಿತ್ಸೆಯನ್ನು ನಡಸುತ್ತಿದ್ದರು ಎಂಬುದನ್ನು ತಿಳಿದರೆ, ಇಂದಿನ ಚಿಕಿತ್ಸಾ ಮಾರ್ಗಕ್ಕೂ ಸಹಾಯವಾಗಬಹುದು.

ಉದಾಹರಣೆಗೆ: ಉದರದ ಬೇನೆಗಳಲ್ಲಿ ಕೆಲವನ್ನು "ಯಾರೋ 'ಮದ್ದೀಡು' ಮಾಡಿದ್ದಾರೆ" ಎಂದು ಹೇಳಿ, ಮೊದಲು ವಾಂತಿಯಾಗುವಂತೆ ಮಾಡುತ್ತಿದ್ದರು. ಅನಂತರ ಪಥ್ಯವನ್ನಿರಿಸುತ್ತಿದ್ದರು. 'ಹಾಕಿದ್ದ ಮದ್ದಿನಿಂದ ನಿನಗೆ ಬೇನೆ ಬಡಿದಿತ್ತು, ಅದನ್ನು ತೆಗೆದಿದ್ದೇವೆ' ಎಂದು ರೋಗಿಯ ಕಣ್ಣೆದುರಿಗೆ ತೋರಿಸುತ್ತಿದ್ದರು. ಅನಂತರ ಹೊಟ್ಟೆಯನ್ನು ಮೆಲ್ಲಗೆ ತಹಬಂದಿಗೆ ತರಲು ಪಥ್ಯವನ್ನಿರಿಸುತ್ತಿದ್ದರು. ಇದರ ಸತ್ಯಾಂಶವೇನೇ ಇರಲಿ, ರೋಗಿಯ ಮನಸ್ಸಿನಲ್ಲಿ 'ನನ್ನ ಬೇನೆ ಹೋಯಿತು' ಎಂಬ ನಂಬಿಕೆಯು ಹುಟ್ಟುತ್ತಿತ್ತು. ವಾಸಿಯಾದವರಲ್ಲಿ ಬಹುಸಂಖ್ಯಾತರಿಗೆ ಈ ನಂಬಿಕೆಯೇ ಔಷಧವಾಗಿದ್ದಿರಬೇಕು !

'ಕಾಲುಧೂಳಾಗಿದೆ', 'ಮೂರು ರಸ್ತೆ ಸೇರುವ ಕಡೆ ದೆವ್ವಕ್ಕೆ ಎಡೆಯಿಟ್ಟದ್ದನ್ನು ನೀನು ದಾಟಿದ್ದೀ'— ಎಂದೆಲ್ಲಾ ಹೇಳಿ, ಪೂಜೆಹಾಕುತ್ತಿದ್ದರು.

ಕಣ್ಣಿಗೆ ರಾಹು ಬಡಿದಂತೆ ಕಾಣಿಸುವ ಪೂಜಾಮಾರ್ಗಗಳನ್ನು ಆಚರಿಸುತ್ತಿದ್ದರು. ಹೀಗಾದಾಗ ರೋಗಿಯ ಮನಸ್ಸಿನಲ್ಲಿ 'ನನ್ನ ಬೇನೆ ಹೋಯಿತು' ಎಂದು ನಂಬಿಕೆಯು ಹುಟ್ಟುತ್ತಿತ್ತು. ಆ ನಂಬಿಕೆಯಿಂದಲೇ ರೋಗಿಯು ತನ್ನ ಸುಪ್ತ ಮನಸ್ಸಿನಲ್ಲೋ ಆಳಮನಸ್ಸಿನಲ್ಲೋ ಇದ್ದ ಕೊಂಕನ್ನು ತಾನೇ ಸರಿಪಡಿಸಿಕೊಳ್ಳಲು ಸಾಧ್ಯವಾಗುತ್ತಿತ್ತು.

ಹೀಗೆಯೇ ಇನ್ನು ಕೆಲವು ಹಳೆಯ ಚಿಕಿತ್ಸಾಮಾರ್ಗಗಳಲ್ಲಿ ರೋಗಿಯನ್ನು ಕೂರಿಸಿ ೧೦೮ ಬಿಂದಿಗೆ ನೀರನ್ನು ರಪರಪ ಅಂತ ಎರಚಿ ಸ್ನಾನಮಾಡಿಸುತ್ತಿದ್ದರು; ಅನಂತರ ಪೂಜೆಹಾಕುತ್ತಿದ್ದರು. ಕೆಲವು ವೇಳೆ ದರ್ಭೆಯ ಕಟ್ಟಿನಿಂದಲೋ, ಬೇವಿನ ಸೊಪ್ಪಿನಿಂದಲೋ, ರಾಚಿ ರಾಚಿ, ದೇಹಕ್ಕೆ ಆಘಾತಮಾಡುತ್ತಿದ್ದರು. ಹೀಗೆ ದೇಹಾಘಾತವಾದರೆ ಮನಸ್ಸಿಗೆ ಸಮಾಧಾನವಾಗಬಹುದು ಎಂದು ಅನುಭವದಿಂದ ಅವರು ತಿಳಿದಿದ್ದರು. ಪವಿತ್ರವಾದ ಯಾತ್ರಾಸ್ಥಳಗಳಿಗೆ ಕರೆದುಕೊಂಡುಹೋಗಿ, ಅಲ್ಲಿ ಉಪವಾಸ ನಿತ್ಯಸ್ನಾನ ಇತ್ಯಾದಿ ದೇಹಕ್ಕೆ ಶ್ರಮ ಕೊಡುವ ವ್ರತಗಳನ್ನು ಮಾಡಿಸಿ; ಅಥವಾ ಬೆಟ್ಟ ಹತ್ತಿ ಹೋಗಿ ದೇಹ ದಣಿಯುವಂತೆ ಮಾಡಿ, ಅನಂತರ ಪೂಜೆ ಹಾಕಿಸುತ್ತಿದ್ದರು. 'ಹೆಸರಾಂತ ದೇವಸ್ಥಾನಗಳಿಗೆ ಹೋದರೆ ಬೇನೆ ಪರಿಹಾರವಾಗುತ್ತದೆ' ಎಂಬ ನಂಬಿಕೆಯು ಬಾಲ್ಯದಿಂದಲೂ ಆಳಮನಸ್ಸಿನಲ್ಲಿ ರೂಢಿಸಲ್ಪಟ್ಟಿರುತ್ತದೆ. ಬೆಳೆದ ಮೇಲೆ ವಿಚಾರಮಾಡಿ, 'ಇದೆಲ್ಲಾ ಮೂಢನಂಬಿಕೆ' ಎಂದು ತೋರಮನಸ್ಸಿನಲ್ಲಿ ನಿರ್ಧರಿಸಿದರೂ, ಬಾಲ್ಯದ ನಂಬಿಕೆ ಪೂರ್ಣವಾಗಿ ಅಳಿಸಿರುವುದಿಲ್ಲ. ಹಾಗಾಗಿ ಯಾತ್ರೆ ಹೋದಾಗ ದೈವಕೃಪೆಯಿಂದ ಗುಣವಾಗಬಹುದು. 'ದೃಷ್ಟಿ ಬಡಿದಿದೆ, ಅದರಿಂದ ಹೊಟ್ಟೆನೋವು ಬಂದಿದೆ' ಎಂದು ಹೇಳಿ, ಮಂತ್ರಹಾಕಿ, ವಿಭೂತಿ ಚಿಟಿಕೆ ತಿನ್ನಿಸಿ ಹೊಟ್ಟೆನೋವನ್ನು ವಾಸಿಮಾಡುವುದೂ ಉಂಟು.

ಉತ್ತರಹಿಂದೂಸ್ಥಾನದ ಶ್ರೀಮಂತನೊಬ್ಬ ದಸರಾ ನೋಡಲು ಬಂದಿದ್ದ. ಮೈಸೂರಿನಿಂದ ಹಿಂತಿರುಗುವಾಗ ಬೆಂಗಳೂರಿನಲ್ಲಿ ಎರಡು ದಿವಸ ಉಳಿದುಕೊಂಡ. ಅವನಿಗೆ ಹೊಟ್ಟೆಶೂಲೆ ಆರಂಭವಾಯಿತು. ಅಪೆಂಡಿಸೈಟಿಸ್ ಇದ್ದ ಹಾಗೆ ಕಾಣಿಸಿತು. ಹಿರಿಯ ವೈದ್ಯರ ಸಲಹೆಪಡೆದಾಗ, ಅವರೂ ಇದನ್ನೊಪ್ಪಿದರು. ರೋಗಿಗೆ ಇದನ್ನು ಹೇಳಿದಾಗ, "ಇಲ್ಲ ಡಾಕ್ಟರ್! ದೃಷ್ಟಿ ಬಡಿದಿದೆ. ಅದಕ್ಕೆ ಮದ್ದುಮಾಡಿ ನೋಡ್ತೀನಿ. ನಾಳೆಯ ಹೊತ್ತಿಗೆ ಸರಿಹೋಗದೆ ಇದ್ದರೆ

ನೀವು ಹೇಳಿದಂತೆ ಮಾಡುತ್ತೇನೆ" ಎಂದ. "ಪ್ರವೃತ್ತಿಗೆ ಔಷಧಿ ತೆಗೆದುಕೊಳ್ಳದೆ ಏನು ಮಂತ್ರವನ್ನಾದರೂ ಮಾಡಿ" ಎಂದು ಹೇಳಿದೆ. ಮಾರನೆಯ ದಿನ ಹೋದಾಗ ಆತ ಸ್ವಸ್ಥವಾಗಿದ್ದ. ಅಪೆಂಡಿಸೈಟಿಸ್ ಶೂಲೆಯು ಹೀಗೆ ಗುಣ ವಾಗುವುದೂ ಉಂಟು.

"ಏನು ಮಾಡಿದೆ ?" ಅಂತ ಕೇಳಿದೆ. "ನೋಡಿ ಡಾಕ್ಟರ್ ! ಮೈಸೂರಿನಲ್ಲಿ ಕಾರ್‌ನಲ್ಲಿ ಕೂತು ಮಾರುಕ್ಕೆ ಬಂದಿದ್ದ ಸೌತೇಕಾಯಿಯನ್ನು ತಿಂದೆ. ರಸ್ತೆಯ ಅಂಚಿನಲ್ಲಿದ್ದ ಭಿಕ್ಷುಕ ನನ್ನನ್ನೇ ದುರುಗುಟ್ಟಿಕೊಂಡು ನೋಡುತ್ತಿದ್ದ. ಬೆಂಗಳೂರಿಗೆ ಬಂದ ಕೂಡಲೆ ಶೂಲೆ ಪ್ರಾರಂಭವಾಯಿತು. ಸೌತೇಕಾಯಿ ತರಿಸಿ ಅದನ್ನು ನನ್ನ ಮುಖಕ್ಕೆ ನಿವಾಳಿಸಿ, ಸುಟ್ಟು, ಅದರ ಬೂದಿಯನ್ನು ಗಂಗಾತೀರ್ಥದೊಂದಿಗೆ ನುಂಗಿದೆ. ತಕ್ಷಣ ಶೂಲೆಬಿಟ್ಟು ಹೋಯಿತು" ಎಂದು ಆತ ವಿವರಣೆ ಕೊಟ್ಟ.

ಅಲರ್ಜಿಕ್ (allergic) ಶೂಲೆಗಳೂ ಹೀಗೆ ನಿಲ್ಲುವುದುಂಟು. ಅಪೆಂಡಿಕ್ಯುಲರ್ ಶೂಲೆಯೂ ಸ್ವಾಭಾವಿಕವಾಗಿಯೂ ಗುಣವಾಗುವುದುಂಟು. ಅದೇ ರೀತಿ ದೃಷ್ಟಿಪರಿಹಾರಮಾಡಿದಾಗ ಮಾನಸಿಕ ಕೊಂಕು ಹೋಗಿ ಶೂಲೆಯು ನಿವಾರಿಸಲ್ಪಟ್ಟಿರಬಹುದು.

ಇಂದಿನ ವೈಜ್ಞಾನಿಕ ವೈದ್ಯಕೀಯ ಚಿಕಿತ್ಸಾಮಾರ್ಗಗಳಲ್ಲಿ ಯಶಸ್ವಿಯಾದ ಹಲವಾರು ಉಪಾಯಗಳು ದೇಹವನ್ನು ದಣಿಸಿ, ಜೊತೆಗೆ ನಂಬಿಕೆಯನ್ನು ಹುಟ್ಟಿಸಿ ಕೃತಕೃತ್ಯವಾಗುತ್ತವೆ ಎನ್ನಲು ಸಾಕಷ್ಟು ಸಾಕ್ಷ್ಯವಿದೆ.

## ವೈಜ್ಞಾನಿಕ ಚಿಕಿತ್ಸೆ

ಯಾವ ಬೇನೆಯ ಚಿಕಿತ್ಸೆಯಾದರೂ ಯಶಸ್ವಿಯಾಗಬೇಕಾದರೆ, ಅದಕ್ಕೆ ಮೂಲವಾದ ಕಾರಣಗಳನ್ನು ಸರಿಪಡಿಸಬೇಕು. ಮಲೇರಿಯಾ ಜ್ವರವು ಬಂದರೆ, ಜ್ವರಕ್ಕೆ ಔಷಧಿಕೊಟ್ಟು, ಅಂದರೆ ಜ್ವರ ಇಳಿಸುವ ಆಸ್ಪಿರಿನ್ ಇತ್ಯಾದಿ ಔಷಧಿಗಳನ್ನು ಕೊಟ್ಟು, ಮಲೇರಿಯಾವನ್ನು ಗುಣಪಡಿಸಲು ಅಸಾಧ್ಯ. ತಾತ್ಕಾಲಿಕವಾಗಿ ಜ್ವರವನ್ನು ಆಸ್ಪಿರಿನ್ ಇಳಿಸುವುದಾದರೂ, ಹಾಗೆ ಮಾಡಿ ದೇಹಕ್ಕೆ ಸ್ವಲ್ಪ ಆರಾಮವಾಗುವುದಾದರೂ, ರೋಗಕ್ಕೆ ಮೂಲಕಾರಣವಾದ ಮಲೇರಿಯಾ

ಕ್ರಿಮಿಯು ನಾಶವಾಗುವ ತನಕ ಬೇನೆಯು ಹೋಯಿತು ಎಂದೆನ್ನುವಂತಿಲ್ಲ. ಸಾಕಷ್ಟು ಪ್ರಮಾಣದಲ್ಲಿ ಸೂಕ್ತ ರೀತಿಯಲ್ಲಿ ಕ್ವಿನೀನ್ ಮತ್ತಿತರ ಔಷಧಿಗಳ ಪ್ರಯೋಗದಿಂದ ಮಾತ್ರ ಮಲೇರಿಯಾ ಗುಣವಾಗಬಲ್ಲದು.

ಅದೇ ರೀತಿಯಲ್ಲಿ ಮನೋದ್ಯೈಹಿಕ ಬೇನೆಗಳ ಯಶಸ್ವೀ ಚಿಕಿತ್ಸೆಗೆ ಮೂಲ ಕಾರಣಗಳನ್ನು ಅರಿತು, ಗುಣಪಡಿಸಬೇಕು. ದೇಹಾನಂದವನ್ನು ಕೊಡುವ ಜನ್ಮಜನ್ಮಾಂತರಗಳಿಂದ ಆನುವಂಶಿಕವಾಗಿ ಪಡೆದಿರುವ ಪ್ರವೃತ್ತಿಗಳು ಒಂದು ಕಡೆ ; ಶೈಶವಾವಸ್ಥೆಯಿಂದ ಜೀವನದಲ್ಲಿ ಕಲಿತು ರೂಢಿಸಿಕೊಂಡು ಬಂದ ರೀತಿ ನೀತಿಗಳನ್ನು ಮನಸ್ಸಿನ ಸ್ವಾರ್ಥೀಚಟುವಟಿಕೆಗಳಿಂದ ಸಮರ್ಥಿಸಿಕೊಂಡು, ನಮಗೆ ಅನಿಸಿದ್ದೇ ನ್ಯಾಯ, ನಮ್ಮ ಹುಚ್ಚೇ ನಮಗೆ ಆನಂದ, ಎಂದಂದುಕೊಂಡು ನಡೆಯುವ ಪ್ರವೃತ್ತಿಗಳು ಇನ್ನೊಂದು ಕಡೆ. ಜೊತೆಗೆ ಕುತೂಹಲದಿಂದ ಉಂಟಾದ ವೈಜ್ಞಾನಿಕ ಸತ್ಯಾನ್ವೇಷಣೆ, ಭಾವನಾನುಕಂಪದಿಂದ ಉಂಟಾದ ಆತ್ಮಜ್ಞಾನದ ಸತ್ಯಾನ್ವೇಷಣೆ, ಈ ಎರಡೂ ತೆರನಾದ ಮನಸ್ಸಿನ ನಿಸ್ವಾರ್ಥೀ ಚಟುವಟಿಕೆಯಿಂದ ಉಂಟಾಗುವ ಆನಂದದ ಪ್ರವೃತ್ತಿ. ಈ ಮೂರು ಪ್ರವೃತ್ತಿಗಳಲ್ಲಿ ಮೊದಲೆರಡರ ಹೋರಾಟದಿಂದಾಗಿ ಮನೋದ್ಯೈಹಿಕ ಬೇನೆಗಳು ಉಂಟಾಗುತ್ತವೆ ಎಂಬುದನ್ನು ಅರಿತೆವು. ಅಲ್ಲದೆ, ಮೂರನೆಯ ಆನಂದದಾಯಕ ಪ್ರವೃತ್ತಿಯಲ್ಲಿ ಕುತೂಹಲದಿಂದ ಪರಿಣಮಿಸುವ ವೈಜ್ಞಾನಿಕ ಸೆಳೆತ, ಹಾಗೂ ಆನುವಂಶಿಕವಾಗಿ ಜನ್ಮಜನ್ಮಾಂತರಗಳಿಂದ ನಮ್ಮಲ್ಲಿ ನೆಲೆಸಿರುವ ಭಾವನಾನುಕಂಪದ ಎಳೆತ ; ಈ ಎರಡೂ ಸೆಳೆತ ಎಳೆತಗಳ ಕಚ್ಚಾಟವೂ ಮನೋದ್ಯೈಹಿಕ ಬೇನೆಗಳಿಗೆ ಕಾರಣವಾಗುತ್ತದೆ ಎಂದೂ ತಿಳಿದೆವು.

ಎಷ್ಟೋ ಕೋಟಿ ವರ್ಷಗಳು ನಡೆದುಬಂದಿರುವ ಜೀವನಪ್ರಗತಿಯಲ್ಲಿ ಎಲ್ಲ ಪ್ರಾಣಿಗಳ ಮಧ್ಯೆ ಮಾನವನು ಎತ್ತರದಲ್ಲಿ, ಪಂಚೇಂದ್ರಿಯಗಳ ಸೂಕ್ಷ್ಮತೆಯಲ್ಲಿ, ಗಾತ್ರದಲ್ಲಿ, ಎಲ್ಲ ವಿಚಾರಗಳಲ್ಲೂ ಮಧ್ಯಮಾರ್ಗವನ್ನು ಸಾಧಿಸಿಕೊಂಡಿದ್ದಾನೆ ಎಂದು ತಿಳಿದೆವು.

ಮನಸ್ಸಿನಲ್ಲಿಯೂ ಈ ತೆರನಾದ ಮಧ್ಯಮಾರ್ಗವನ್ನು, ಸಮತೆಯನ್ನು ಸಾಧಿಸಿಕೊಂಡರೆ, ಆಗ ಮನೋದ್ಯೈಹಿಕ ಬೇನೆಗಳ ಚಿಕಿತ್ಸೆಯು ಯಶಸ್ವಿಯಾದಂತೆ. ಆನುವಂಶಿಕವಾಗಿ ದೇಹಾನಂದವನ್ನು ಕೊಡುವ ಪ್ರವೃತ್ತಿಯು ಬಹಳ ಬಲಯುಕ್ತವಾದುದು, ಬೆಳೆದುಬಂದದ್ದು, ಆವಶ್ಯಕವಾದದ್ದು. ಆದ್ಯಪ್ರವೃತ್ತಿ

ಯೊಾದ ಅದು ಇರಲೇಬೇಕು. ಆದರೆ ಅದೇ ಅರಸನಾಗಬಾರದು. ಶೈಶವಾವಸ್ಥೆಯಿಂದ ಕಲಿತು ರೂಢಿಸಿಕೊಂಡು ಬಂದ ಮನಸ್ಸು, ನಿತ್ಯಜೀವನದ ಸ್ಪರ್ಧಾ ಮಾರ್ಗಗಳಲ್ಲಿ ವಿಜಯವನ್ನು ಗಳಿಸಿಕೊಡುತ್ತದೆ. ಅದೂ ಆವಶ್ಯಕವಾದದ್ದೆ. ಆದರೆ ಅದೇ ರಾಜನಾಗಬಾರದು. ಈ ಎರಡೂ ಪ್ರವೃತ್ತಿಗಳನ್ನು ಮೇಳೈಸಿ ನಡಸಲು, ಇವೆರಡನ್ನೂ ಎತ್ತುಕೋಣಗಳನ್ನಾಗಿ ಮಾಡಿ, ಎರಡಕ್ಕೂ ಸಮತೆಯ ನೊಗವನ್ನು ಹೊರಿಸಿ ಆಳುವುದಕ್ಕೆ ಮೂರನೆಯ ಪ್ರವೃತ್ತಿಯನ್ನು ಬಳಸಿಕೊಳ್ಳಬೇಕು. "ನೀತೀನ ಹೇಳುಕ್ಕೆ ಆತನ್ನ ಕರಸಿದರೆ, ಆತ ಹೆಂಡತೀನ ಬಿಟ್ಟು ಆರು ತಿಂಗಳಾಯಿತು" ಎಂದಂತೆ, ಈಗಿನ ನಾಗರಿಕ ಮಾನವನ ಸ್ಥಿತಿಯಲ್ಲಿ ಈ ಮೂರನೆಯ ಪ್ರವೃತ್ತಿಯನ್ನು ನೊಗ ಹೊರಿಸುವುದಕ್ಕೆ ಕರೆದರೆ, ಅದು ಅನುಕಂಪವನ್ನು ಮರೆತು ಎಷ್ಟೋ ದಿನಗಳಾಯಿತು ಎಂದೆನ್ನುವಂತಿದೆ. ಅಂದ ಮೇಲೆ, ಕುತೂಹಲವನ್ನು ಕೆರಳಿಸುವ ಪ್ರವೃತ್ತಿಯನ್ನು, ಭಾವನಾನುಕಂಪದಿಂದ ಬೆಸೆಯಬೇಕು. ಇದನ್ನೇ ಮತಸ್ಥಾಪನಾಚಾರ್ಯರು, ಹಲವಾರು ಹಿರಿಯ ವೈಜ್ಞಾನಿಕರು, ಬಹುಸಂಖ್ಯೆಯ ಕಲಾರಾಧಕರು—ಇವರೆಲ್ಲರೂ ಯಶಸ್ವಿಯಾಗಿ ಸಾಧಿಸಿರುವರು. ಹಾಗೆ ಸಾಧಿಸಿ, ಈ ಎಲ್ಲ ಮಾರ್ಗಗಳಲ್ಲಿಯೂ ಮನಸ್ಸಿನ ನಿಸ್ವಾರ್ಥಚಟುವಟಿಕೆಯನ್ನು ಪರಮಾನಂದ ಕೊಡುವಂತೆ ನಡಸಬಹುದು ಎಂದು ಸಾಕ್ಷಿ ನುಡಿದಿರುವರು.

## ಮನೋದೈಹಿಕ ಬೇನೆಗಳ ಕಾರಣ

ಅಂದಮೇಲೆ, ಮನೋದೈಹಿಕ ಬೇನೆಗಳ ಕಾರಣಗಳು ಮುಖ್ಯವಾಗಿ ಎರಡು :

೧. ಅನುವಂಶಿಕ ಪ್ರವೃತ್ತಿಗಳು ಮತ್ತು ಕಲಿತುಕೊಂಡ ಪ್ರವೃತ್ತಿಗಳು. ಇವು ಎರಡರ ರಘಂರಘಾಟ. ಅನುವಂಶಿಕ ಪ್ರವೃತ್ತಿಗಳು ಅಗತ್ಯವಾದುವು. ಹಾಗೂ ಅವುಗಳನ್ನು ಪೂರ್ತಿಯಾಗಿ ನಿಷೇಧಿಸುವುದು ಅಸಾಧ್ಯ. ಹಾಗೆ ನಿಷೇಧಿಸುವುದು ತಪ್ಪು. ಅಂದಮೇಲೆ, ಮಾನಸಿಕ ಚಟುವಟಿಕೆಗಳಿಂದ ಆಳ ಮನಸ್ಸಿನಲ್ಲಿರುವ ಅವನ್ನು ಹತೋಟಿಯಲ್ಲಿಡಬೇಕು.

೨ ಕಲಿತುಕೊಂಡ ಪ್ರವೃತ್ತಿಗಳು ಶೈಶವಾವಸ್ಥೆಯಿಂದ ಮೊದಲಾಗಿ

ಸುತ್ತುಮುತ್ತಲಿರುವ ಮನೆ, ಶಾಲೆ, ಸಮಾಜಗಳಿಂದಾಗಿ ರೂಢಿಸಲ್ಪಡುತ್ತವೆ. ಈ ಪ್ರವೃತ್ತಿಗಳನ್ನು ಸರಿಮಾಡಬೇಕಾದರೆ, ಹುಟ್ಟಿ ಬೆಳೆದ ಮನೆಯವರೂ ಮನೆಯ ವಾತಾವರಣವೂ ಸುಧಾರಿಸಬೇಕು, ಹಿತಕರವಾಗಿರಬೇಕು. ಶಾಲೆಯ ವಿದ್ಯಾಭ್ಯಾಸಪದ್ಧತಿಯು ಸುಧಾರಿಸಬೇಕು, ಶಾಲಾಮಾಸ್ತರುಗಳು ದಿಟವಾಗಿಯೂ ಗುರುಗಳಾಗಬೇಕು. 'ಕೊಟ್ಟ ಸಂಬಳಕ್ಕೆ ಇಷ್ಟು ಶಂಖ ಊದುತ್ತೇವೆ' ಎಂಬ ಮನೋಭಾವವಿರಬಾರದು. ಸಮಾಜವು ಸುಧಾರಿತವಾಗಿ, ಬಹುಸಂಖ್ಯಾತರ ಹಾವಳಿಯು ಕಡಮೆಯಾಗಬೇಕು. ಬಹಳ ಇದ್ದವರ ಪ್ರಭಾವವು ಕಡಮೆಯಾಗಬೇಕು. 'ಇವೆಲ್ಲವನ್ನೂ ಸಾಧಿಸಬೇಕು' ಎಂಬುವುದೇ ಸುಖೀರಾಜ್ಯದ ಆಡಳಿತಗಾರರ ಆಸೆ, ಹಿರಿಯ ಧ್ಯೇಯ. ಆದರೆ, ಹಾಗೆ ಸಾಧಿಸಲು ಕೈಕೊಳ್ಳುವ ಮಾರ್ಗಗಳನ್ನು ಆಚರಣೆಗೆ ತರುವವರು ಯಾರು ? ಮನೋದ್ವೈಹಿಕ ಬೇನೆಗಳಿಗೆ ಅಣಿಯಾದವರು ತಾವೇ ! ಅಂದಮೇಲೆ, 'ಆಚಾರ ಹೇಳೋದಕ್ಕೆ, ಬದನೆಕಾಯಿ ತಿನ್ನೋದಕ್ಕೆ' ಎಂದಂತೆ ಆಗುತ್ತಿದೆ. ಹೋಗಲಿ, ಮನೆಯ ವಾತಾವರಣವನ್ನಾದರೂ ತಂದೆತಾಯಿಯರು ಮತ್ತು ಇತರ ಹಿರಿಯರು ಆದಷ್ಟು ಮಟ್ಟಿಗೆ, ಮಕ್ಕಳ ಅಭ್ಯುದಯಕ್ಕಾಗಿ ಸುಧಾರಿಸಬೇಕು. ಇವೆಲ್ಲಾ ಮುಂಜಾಗ್ರತೆಯ ಮಾತುಗಳು.

## ಮನೋದ್ವೈಹಿಕ ರೋಗಿಗಳ ಕರ್ತವ್ಯ

ಆದರೆ ಮನೋದ್ವೈಹಿಕ ಬೇನೆಗಳು ಬಂದಿರುವವರು ಏನು ಮಾಡಬೇಕು ?

೧. ತಮ್ಮ ದೈಹಿಕ ಬೇನೆಗೆ ಮೂಲಕಾರಣವು ತಮ್ಮ ಮನಸ್ಸಿನ ಝಂಝಾಟದಿಂದ ಉಂಟಾದುದು ಎಂಬುದನ್ನು ಆದಷ್ಟು ಸ್ಪಷ್ಟವಾಗಿ ತಿಳಿದುಕೊಳ್ಳಬೇಕು.

೨. ಅಲ್ಲದೆ ಮನಸ್ಸಿಗೆ ದೃಢತೆಯನ್ನು ಸಾಧಿಸಿಕೊಳ್ಳಲು, ಬಾಲ್ಯಾವಸ್ಥೆಯಿಂದ ರೂಢಿಸಿಕೊಂಡು ಬಂದ ತಮ್ಮ ಮತ ಧರ್ಮಗಳಲ್ಲಿ ಪೂರ್ಣವಾದ ನಂಬಿಕೆಯಿಟ್ಟುಕೊಂಡು, ತನ್ನವರೆಲ್ಲರೂ ನಡೆವ ಸುಪಂಥವನ್ನೇ ಆಚರಿಸಬೇಕು. ಹೇಳಹೆಸರಿರುವ ಯಾವ ಮತವೇ ಆಗಲಿ, ಅದು ಮೂಲತಃ 'ಸತ್ಯ'ದ ದರ್ಶನವನ್ನೇ ನೀಡುತ್ತದೆ.

೩. ದೇಹದ ಆರೋಗ್ಯವನ್ನು ಸಾಕಷ್ಟು ಶುದ್ಧವಾಗಿ ಸಾಧಿಸಿಕೊಳ್ಳಬೇಕು. ಹೀಗೆ ಮಾಡಿದಾಗ, ಮಾನಸಿಕ ಕಾರ್ಯಗಳೂ ಸುಗಮವಾಗುತ್ತವೆ.

೪. ವೈಜ್ಞಾನಿಕ ಕುತೂಹಲವನ್ನು ಕೆರಳಿಸಿಕೊಳ್ಳಬೇಕು. ಏಕೆಂದರೆ ಅದು ನಿಸ್ವಾರ್ಥೀ ಚಟುವಟಿಕೆ. ಆದರೆ ಅದೊಂದನ್ನೇ ಹಿಂಬಾಲಿಸಿದರೆ, ಕುತೂಹಲವು ಕೆರಳುತ್ತಲೇ ಇರುತ್ತದೆ. ಅಂದರೆ, 'ಸಾಕ್ಷರಾ ವಿಪರೀತಾಶ್ಚೇತ್ ರಾಕ್ಷಸಾ ಭವತಿ ಧ್ರುವಂ' ಎಂಬ ನುಡಿಯಂತೆ ಆಗುತ್ತದೆ.

೫. ಭಾವನಾನುಕಂಪವನ್ನು ಅನಾವರಣಮಾಡಿಕೊಳ್ಳಬೇಕು. ಏಕೆಂದರೆ, ಅದೂ ಮಾನಸಿಕ ನಿಸ್ವಾರ್ಥ ಚಟುವಟಿಕೆಯೇ. ಅದು ಮನಸ್ಸಿಗೆ ಸಮಾಧಾನವನ್ನೂ ಹಿತವನ್ನೂ ದೊರಕಿಸಿಕೊಡುತ್ತದೆ. ಕಲಾರಾಧನೆಯೇ ಭಾವನಾನ. ಕಂಪದ ಅನಾವರಣಕ್ಕೆ ಮಾರ್ಗ. ಸಂಗೀತ, ಸಾಹಿತ್ಯ, ಶಿಲ್ಪ, ಚಿತ್ರರಚನೆ, ಇವುಗಳ ಸಹಸ್ರಾರು ಮುಖಗಳಲ್ಲಿ ಯಾವುದೊಂದನ್ನು ಅಭ್ಯಾಸಮಾಡಿದರೂ ಯಶಸ್ವೀ ಪರಿಣಾಮವುಂಟಾಗುತ್ತದೆ. ಉದಾಹರಣೆಗೆ, ಸಂಗೀತ : ಎಂದರೆ ಜನಪದ ಗೀತೆ, ಹಾಡುಗಳು, ಭಜನೆ, ಶ್ಲೋಕಪಠಣೆ, ದಾಸರಪದಗಳನ್ನೂ ಶರಣರ ವಚನಗಳನ್ನೂ ಹಾಡುವುದು, ನಾಟಕದ ಹಾಡುಗಳು, ಅಣಕವಾಡುಗಳು, ಶಾಸ್ತ್ರೀಯಸಂಗೀತ ; ಒಂದೇ ಎರಡೇ. ಈ ವಿರಾಟ್‌ರೂಪಗಳಲ್ಲಿ ನಮಗೆ ಸುಖಕಂಡುದನ್ನು ಅಭ್ಯಸಿಸುವುದು. ಇವೇ ರೀತಿ ಇತರ ಕಲೆಗಳಲ್ಲಿಯೂ.

## ವೈದ್ಯರ ಕರ್ತವ್ಯ

ಇವೆಲ್ಲವೂ ಮನೋದೈಹಿಕ ಬೇನೆ ಬಂದವರು ಮಾಡಬೇಕಾದುದು. ಆದರೆ ಇವೆಲ್ಲವನ್ನೂ ಮಾಡಿಸಿಕೊಳ್ಳಬೇಕಾದವನು ವೈದ್ಯ. ಚಿಕಿತ್ಸೆಯಲ್ಲಿ ಯಶಸ್ಸನ್ನು ಪಡೆಯ ಬೇಕಾದರೆ ವೈದ್ಯನಲ್ಲಿ ಹಲವಾರು ಆವಶ್ಯಕ ಗುಣಗಳಿರಬೇಕು :

೧. ಮೊದಲಾಗಿ, ಆತನಿಗೆ ದೇಹದ ಮತ್ತು ಮನಸ್ಸಿನ ವಿಧವಿಧ ಕಾರ್ಯಗಳ ವಿವರಗಳೆಲ್ಲಾ ಸ್ಪಷ್ಟವಾಗಿ ತಿಳಿದಿರಬೇಕು. ಕಾಲೇಜಿನ ವೈದ್ಯ ವಿದ್ಯಾಭ್ಯಾಸ ಅಷ್ಟರಿಂದಲೇ ಇದು ಸಾಧ್ಯವಾಗುವುದಿಲ್ಲ. ಅನಂತರವೂ ಸ್ವಂತ ಅನುಭವದಿಂದ ಕಲಿಯುತ್ತಲೇ ಇರಬೇಕು.

೨. ಆತನ ನಿಸ್ಸ್ವಾರ್ಥೀ ಮಾನಸಿಕ ಚಟುವಟಿಕೆಯಾದ ಅನುಕಂಪವು ಸದಾ ಹೊರಹೊಮ್ಮುತ್ತಿರಬೇಕು. 'ನನ್ನ ಬೇನೆಯಿಂದ ವೈದ್ಯರಿಗೆ ಬಹಳ ದುಃಖವಾಗುತ್ತಿದೆ' ಎಂಬ ನಂಬಿಕೆಯು ವೈದ್ಯನ ನಡವಳಿಕೆಯಿಂದ ರೋಗಿಯಲ್ಲಿ ಮೂಡಬೇಕು.

೩. ದೇಹವು ಆರೋಗ್ಯವಾಗಿದೆಯೇ ಎಂದು ಪೂರ್ಣ ಪರೀಕ್ಷೆಮಾಡಿ, ಹಲವಾರು ಬಾರಿ ಶಾಸ್ತ್ರೀಯವಾಗಿ ಪರೀಕ್ಷಿಸಿ, ಖಚಿತಪಡಿಸಿಕೊಳ್ಳಬೇಕು. ಆವಶ್ಯಕವಾದಾಗ ದೇಹಕ್ಕೆ ಚಿಕಿತ್ಸೆಯನ್ನು ಮಾಡಿ, ಗುಣಪಡಿಸಬೇಕು.

೪. ಹೀಗೆ ಪರೀಕ್ಷೆಮಾಡುವಾಗ ರೋಗಿಯ ಮನಸ್ಸಿನಲ್ಲಿ 'ನನ್ನ ಅನಾರೋಗ್ಯಕ್ಕೆ ದೇಹದ ಈ ವ್ಯತ್ಯಾಸ ಕಾರಣವಾಗಿಬೇಕು' ಎಂಬ ನಂಬಿಕೆಯು ಬರಬಹುದು. ಆ ಅಚಾತುರ್ಯವಾಗದಂತೆ ರೋಗಿಯನ್ನು ಎಚ್ಚರಿಸಬೇಕು.

೫. ಮತ, ಧರ್ಮ, ಪೂಜೆ, ಪುರಸ್ಕಾರ, ವ್ರತ, ಇತ್ಯಾದಿ ನಂಬಿಕೆಗಳು ಚಿಕಿತ್ಸಾಕ್ರಮಕ್ಕೆ ಬಹು ಪ್ರಯೋಜನಕಾರಿಯಾದುದರಿಂದ ಅವುಗಳ ಸಹಾಯವನ್ನು ಆದಷ್ಟು ಮಟ್ಟಿಗೆ ಬಳಸಿಕೊಳ್ಳಬೇಕು. ಅವುಗಳನ್ನು ಅವಹೇಳನ ಮಾಡುವಂತಹ ಮಾತುಗಳನ್ನು ಆಡಬಾರದು.

೬. ರೋಗಿಯ ಮಾನಸಿಕ ಪ್ರವೃತ್ತಿಯನ್ನು ತಿಳಿದು, 'ಇಂತಹ ಕಲೆಯ ಭಾಗವನ್ನು ಅಭ್ಯಾಸಮಾಡು' ಎಂದು ಸಲಹೆ ಕೊಟ್ಟು ಮಾರ್ಗದರ್ಶನ ಮಾಡಬೇಕು. ಅಂತಹ ಯೋಗ್ಯತೆಯನ್ನು ಸಂಪಾದಿಸಿಕೊಳ್ಳಬೇಕು.

೭. ರೋಗಿಯ ಮನೆಯವರಿಗೆ ಸೂಕ್ತ ಸಲಹೆಗಳನ್ನು ಕೊಟ್ಟು, ಅವರ ವಿಶ್ವಾಸವನ್ನು ಗಳಿಸಿ, ಚಿಕಿತ್ಸಾಕ್ರಮಕ್ಕೆ ಅವರ ಬೆಂಬಲವನ್ನೂ ಪಡೆಯಬೇಕು.

೮. ಇಷ್ಟೆಲ್ಲಾ ಆದಮೇಲೆ, 'ನಾನು ಮಾಡಲು ಸಾಧ್ಯವಾದುದನ್ನೆಲ್ಲಾ ಆತ್ಮವಂಚನೆಯಿಲ್ಲದೆ ಮಾಡಿದ್ದೇನೆ. ಇನ್ನು ರೋಗಿಯು ಗುಣಹೊಂದಬೇಕಾದರೆ, ಬೇರೆ ಯಾವುದೋ ಶಕ್ತಿಯು ಒಲಿಯಬೇಕು' ಎಂಬ ಸರಳತೆಯು ಇರಬೇಕು. ಅಂತಹ ನಂಬಿಕೆಗಳಲ್ಲಿ ಯಾವುದಾದರೂ ಒಂದು ವೈದ್ಯನ ಮನಸ್ಸಿನಲ್ಲಿ ದೃಢವಾಗಿದ್ದರೆ, ಆತನ ಮಾನಸಿಕ ಚಟುವಟಿಕೆಗಳು, ಅದರಲ್ಲೂ ತಾರ್ಕಿಕ ಚಟುವಟಿಕೆಗಳು, ಸ್ಫುಟವಾಗಿರಲು ಅನುಕೂಲವಾಗುತ್ತದೆ.

## ಉಪಸಂಹಾರ

" ಇವೆಲ್ಲವನ್ನೂ ಈ ಹೊತ್ತಗೆಯಲ್ಲಿ ವಿಶದೀಕರಿಸುವ ಆವಶ್ಯಕತೆಯೇನು ? ಇದು ಸಾಮಾನ್ಯ ಜನರಿಗಾಗಿ ಬರೆದುದು, ವೈದ್ಯರಿಗಲ್ಲ " ಎಂದು ಸಹಜವಾಗಿ ಪ್ರಶ್ನೆ ಏಳುತ್ತದೆ. ಮನೋದೈಹಿಕ ಬೇನೆಗಳಿದ್ದವರು ಸಾಮಾನ್ಯವಾಗಿ ನಾಲ್ಕಾರು ಆಸ್ಪತ್ರೆ, ಹತ್ತಿಪ್ಪತ್ತು ವೈದ್ಯರುಗಳು, ಮೂವತ್ತು ನಲವತ್ತು ಆಯುರ್ವೇದ–ಯುನಾನಿ–ಹೋಮಿಯೋಪತಿ ಇತ್ಯಾದಿ ಶಾಸ್ತ್ರಗಳ ಪಂಡಿತರು, ಇಲ್ಲಿಗೆಲ್ಲಾ 'ಇಲ್ಲಿ ಗುಣವಾಗಲಿಲ್ಲ, ಅಲ್ಲಿಗೆ ಹೋಗೋಣ' ಎಂಬ ಕಾತರದಿಂದ ಹೋಗುತ್ತಾರೆ. ಅವರುಗಳಿಗಾಗಿಯೇ ಈ ಹೊತ್ತಗೆಯನ್ನು ಬರೆದಿರುವುದು. ಅವರುಗಳು ವೈದ್ಯರಲ್ಲಿ ನಂಬಿಕೆ ಇಟ್ಟುಕೊಳ್ಳಬೇಕಾದರೆ, ಈ ತಿಳಿವಳಿಕೆಯು ಸಹಾಯ ಮಾಡೀತು, ಎಂಬ ದೃಢವಾದ ನಂಬಿಕೆಯೇ ಇದನ್ನು ಪ್ರೇರಿಸಿತು.

ಈಗಿರುವ ಸಾಮಾಜಿಕ ಪ್ರವೃತ್ತಿ, ವಿದ್ಯಾಭ್ಯಾಸಪದ್ಧತಿ, ಮತ್ತು ದೇಶದ ಪ್ರಗತಿ ಇವುಗಳನ್ನು ನೋಡಿದರೆ—ಮನೋದೈಹಿಕ ಬೇನೆಗಳಿಂದ ನರಳುವವರ ಸಂಖ್ಯೆಯು ಇನ್ನುಮುಂದೆ ನಮ್ಮ ಸಮಾಜದಲ್ಲಿ ವಿಪರೀತವಾಗಲೇಬೇಕು. ಇಂತಹ ರೋಗಿಗಳ ಪಾಡು ದಿಟವಾಗಿಯೂ ಬಲು ದುಃಖಮಯವಾದದ್ದು. ಪ್ಲೇಗು, ಕ್ಷಯ, ಕ್ಯಾನ್ಸರ್ ಬೇನೆಗಳು ಬಂದರೆ, ಒಂದು ತರಹ. ಬೇನೆಯೇ ಅವರನ್ನು ಮುಗಿಸಿಬಿಡುತ್ತದೆ, ಅಥವಾ ತಾನೇ ಪರಿಹಾರವಾಗಿಬಿಡುತ್ತದೆ. ಮನಸ್ಸಿನ ತೀವ್ರ ಕಾಯಿಲೆಗಳು ಬಂದು ಹುಚ್ಚೇ ಹಿಡಿದುಹೋದರೆ, ಅದೊಂದು ತರಹ. ಹುಚ್ಚು ಹಿಡಿದ ಮೇಲೆ ಮಾನಸಿಕ ತಳಮಳವೇನು ಮಾಡುತ್ತೆ ? ಆ ಹುಚ್ಚೇ ಅವನಿಗೆ ಆನಂದದಾಯಕ.

ಆದರೆ ದೇಹವು ಸಾಕಷ್ಟು ಆರೋಗ್ಯದಿಂದಿದ್ದರೂ, ಅಥವಾ ಸ್ವಲ್ಪ ವ್ಯತ್ಯಾಸಹೊಂದಿದ್ದರೂ, ಅಥವಾ ಸುಲಭವಾಗಿ ಗುಣವಾಗುವಂತಿದ್ದರೂ ಮಾನಸಿಕ ತಳಮಳವು ಗುಣಹೊಂದಲು ಬಿಡುವುದಿಲ್ಲ. ಈಚೆ ಇದ್ದ ಲೆಕ್ಕ ಅಲ್ಲ, ಆಚೆ ಹೋದ ಲೆಕ್ಕ ಅಲ್ಲ. ನೋಡುವುದಕ್ಕೆ ಚೆನ್ನಾಗಿಯೇ ಇರುತ್ತಾರೆ ; ಆದರೆ ಅನುಭವಿಸುವುದು ಮಾತ್ರ ನರಕಯಾತನೆ. ಇಂತಹ ಮನೋದೈಹಿಕ ಬೇನೆಯ ರೋಗಿಗಳ ಪಾಡು ಶೋಚನೀಯ.

ಉದ್ಧರೇತ್ ಆತ್ಮನಾತ್ಮಾನಂ ; ನ ಆತ್ಮಾನಂ ಅವಸಾದಯೇತ್ :
ಆತ್ಮ ಏವ ಹಿ ಆತ್ಮನಃ ಬಂಧುಃ ; ಆತ್ಮ ಏವ ರಿಪುಃ ಆತ್ಮನಃ.

ಎಂಬ ಗೀತಾವಾಕ್ಯವು ಅಕ್ಷರಶಃ ಸತ್ಯ, ಈ ಬೇನೆ ಹಿಡಿದವರಿಗೆ. ಅವರ ಚಿಕಿತ್ಸೆಯನ್ನು ಅವರೇ ಮಾಡಿಕೊಳ್ಳುವಂತೆ ಏರ್ಪಡಿಸಬೇಕು. ಅವರ ರೋಗವು ಉಲ್ಬಣವಾಗದಂತೆ ಅವರೇ ನೋಡಿಕೊಳ್ಳಬೇಕು. ಅವರಿಗೆ ಅವರೇ ಬಂಧುಗಳು ! ಅವರೇ ಅವರ ವೈರಿಗಳೂ ಕೂಡ !

ಈ ಅರಿವನ್ನು ಅವರಿಗೆ ಮಾಡಿಕೊಡುವ ಕೆಲಸವೂ ವೈದ್ಯನದೇ. ರೋಗಿಯ ಬೇನೆಯನ್ನು ತಾನೇ ಅನುಭವಿಸಿದಂತೆ ಆಗಿ, ಅನುಕಂಪ ತುಂಬಿ ಆತ ಚಿಕಿತ್ಸೆ ಮಾಡಿದರೆ, ಆತ ದಿಟವಾಗಿಯೂ ರೋಗಿಗಳ ಸ್ನೇಹಿತ, ಮಾರ್ಗದರ್ಶಿ ಮತ್ತು ತಾತ್ತ್ವಿಕ ಗುರುವಾಗುತ್ತಾನೆ. ಕಾಲಾನುಕಾಲದಿಂದ ಈ ಧ್ಯೇಯವೇ ವೈದ್ಯರಿಗೆ ಬಾಳಬೆಳಕಾಗಿರುವುದು, ಮುಂದೆಯೂ ಎಂದೆಂದಿಗೂ ಬಾಳಬೆಳಕಾಗಿ ಇರಬೇಕಾದುದು.



# ನಮ್ಮ ಪ್ರಕಟನೆಗಳು

| | | |
|---|---|---|
| ಮನೋನಂದನ | ಡಾ॥ ಎಂ. ಶಿವರಾಂ | 12 00 |
| ಸವತಿ ಕಸ್ತೂರಿ | ಎಂ. ಸಿ. ಪದ್ಮಾ | 6 00 |
| ಬಂಧನ | ಉಷಾ ನವರತ್ನರಾಮ್ | 6 00 |
| ರೂಪದರ್ಶಿ | ಕೆ. ವಿ. ಅಯ್ಯರ್ | 10 00 |
| ಮೃಗತೃಷ್ಣಾ | ಅಶ್ವಿನಿ | 8 00 |
| ಘುಮತಾ ಮಂದಿರ | ಪುಷ್ಪಾ ಎನ್. ರಾವ್ | 6 00 |
| ಚೋಮನ ದುಡಿ | ಡಾ॥ ಶಿವರಾಮ ಕಾರಂತ | 3 00 |
| ಅಮೃತ ಕಲಶ | ನಿರುಪಮಾ | 4 00 |
| ನರಪ್ರಾಣಿ | ಬೀಚಿ | 4 00 |
| ಮನ ತುಂಬಿದ ಮಡದಿ | ಎಂ. ಕೆ. ಇಂದಿರಾ | 4 00 |
| ಆಶ್ವಾಸನ | ಉಷಾ ನವರತ್ನರಾಮ್ | 6 00 |
| ಧರ್ಮದೀಕ್ಷೆ | ಶ್ರೀನಿವಾಸರಾವ್ ಕೊರಟಿ | 6 00 |
| ಶಶಿಕಿರಣ | ಎಂ. ಸಿ, ಪದ್ಮಾ | 6 00 |
| ಚಂದನ ಕಸ್ತೂರಿ | ಹೆಚ್. ಜಿ. ರಾಧಾದೇವಿ | 6 00 |
| ಶುಭ ವಸಂತ | ,, | 6 00 |
| ಪರಿವರ್ತಿನಿ | ಪುಷ್ಪಾ ಎನ್. ರಾವ್ | 6 00 |
| ವಜ್ರದುಂಗುರ | ನಾ. ರಾಜಣ್ಣ | 8 00 |
| ಮನ ಬೆಳಗಿತು | ಎಂ. ಸಿ. ಪದ್ಮಾ | 6 00 |
| ಹೆಣ್ಣು-ಹೊನ್ನು-ಮಣ್ಣು | ಚಡಗ | 8 00 |
| ಕಪ್ಪು ಕೊಳ | ಅಶ್ವಿನಿ | 6 00 |
| ಪ್ರೇಮ ವಸಂತ | ಎಂ. ಸಿ. ಪದ್ಮಾ | 6 00 |
| ಸತ್ತವನು ಎದ್ದು ಬಂದಾಗ | ಬೀಚಿ | 8 00 |
| ಅನುರಾಗಿಣಿ | ವಿಶಾಲಾಕ್ಷಿ ದಕ್ಷಿಣಾಮೂರ್ತಿ | 6 00 |
| ಸತೀ ಸೂಳೆ | ಬೀಚಿ | 6 00 |
| ಲದ ಮಡಿಲಲ್ಲಿ | ಚ್. ದೇವೀರಪ್ಪ | 8 00 |

| | | |
|---|---|---|
| ಸುವರ್ಣ ಸೇತುವೆ | ಹೆಚ್. ಜಿ. ರಾಧಾದೇವಿ | 5 00 |
| ಅಮ್ಮನವರ ಇಚ್ಛಾ | ಬೀಚಿ | 6 00 |
| ಆಂದೋಲನ | ಉಷಾ ನವರತ್ನರಾವ್ | 6 00 |
| ದೇವರ ಹೆಂಡತಿ | ಸೂರ್ಯನಾರಾಯಣ ಚಡಗ | 6 00 |
| ಬೇಡದ ಸೊಸೆ | ಮ. ನ. ಮೂರ್ತಿ | 6 00 |
| ಬಂಗಾರದ ಸರಪಣಿ | ಪುಷ್ಪಾ ಎನ್. ರಾವ್ | 6 00 |
| ತಪೋವನದಲ್ಲಿ | ಎಂ. ಕೆ. ಇಂದಿರಾ | 6 00 |
| ಜೇನು–ನಂಜು | ಹೆಚ್, ಎಸ್. ಗೋಪಾಲರಾಯ | 6 00 |
| ಪ್ರೇಮಮಯಿ | ಎಂ. ಸಿ. ಪದ್ಮಾ | 8 00 |
| ಹರಿದ ಉಯಿಲು | ರಾ. ಶಿ. | 8 00 |
| ಕಣ್ಮಣಿ | ಶಾರದೆ | 8 00 |
| ಬೆಸುಗೆ | ಅಶ್ವಿನಿ | 8 00 |
| ದೈವಚಿತ್ತ | ವಸಂತಾದೇವಿ ಅ. ನ. ಕೃ. | 4 00 |
| ಒಲವಿನ ಬದುಕು | ಉಷಾ ನವರತ್ನರಾವ್ | 5 00 |
| ಅನುಕಂಪ | ಮ. ನ. ಮೂರ್ತಿ | 4 00 |
| ಗೃಹಿಣಿ | ಶ್ರೀನಿವಾಸರಾವ್ ಕೊರಟಿ | 7 00 |
| ಕಲಾದರ್ಶಿ | ಎಂ. ಕೆ. ಇಂದಿರಾ | 6 00 |
| ಮಂಗಳಯಾತ್ರೆ | ಎಂ. ಸಿ. ಪದ್ಮಾ | 6 00 |
| ಸಕ್ಕರೆ ಮಂಊಟೆ | ಬೀಚಿ | 6 00 |
| ಹೂವು–ಕಾವು | ಬಿ. ಪುಟ್ಟಸ್ವಾಮಯ್ಯ | 8 00 |
| ಮನೆತನದ ಗೌರವ | ಬೀಚಿ | 6 00 |
| ಬೆಂಕಿಯ ಮಳೆ | ಭಾರತೀಸುತ | 8 00 |
| ಸುಪ್ರಭಾತ | ಎಂ. ಸಿ. ಪದ್ಮಾ | 6 00 |
| ಮೋಡಮ್ಮನ ಗಂಡ | ಬೀಚಿ | 5 00 |
| ಕ್ಷಮೆ ಇರಲಿ ಪ್ರಭುವೆ | ಸೂರ್ಯನಾರಾಯಣ ಚಡಗ | 8 00 |
| ಸಂಶಯದ ಸುಳಿ | ಮ. ನ. ಮೂರ್ತಿ | 5 00 |
| ಮಂಜು ಕರಗಿತು | ಎಂ. ಸಿ. ಪದ್ಮಾ | 6 00 |

| | | |
|---|---|---|
| ಹೊಂಬಿಸಿಲು | ಉಷಾ ನವರತ್ನರಾವ್ | 6 00 |
| ಬ್ರಹ್ಮಚಾರಿ | ಎಂ. ಕೆ. ಇಂದಿರಾ | 5 00 |
| ಗಾಂಪಾಯಣ | ದಾಶರಥಿ ದೀಕ್ಷಿತ್ | 4 00 |
| ಹೊಸ ಹಾದಿಯಲ್ಲಿ | ಎ. ಪಂಕಜ | 5 00 |
| ಕೈಲಾಸಂರವರ ಸ್ಮರಣೆ | ಕೆ. ವಿ. ಅಯ್ಯರ್ | 4 00 |
| ಶೋಭನಾ | ಗೀತಾ ಕುಲಕರ್ಣಿ | 5 00 |
| ಸಾಕಿದ ಅಳಿಯ | ಅ. ನ. ಕೃ. (ಕೊನೆ ಕಾದಂಬರಿ) | 5 00 |
| ಕಾರ್ತೀಕ ಸೋಮವಾರ | ರಾ. ಶಿ. | 5 00 |
| ಅನುರಾಗಸುಧಾ | ದಾಶರಥಿ ದೀಕ್ಷಿತ್ | 4 00 |
| ಪ್ರೇಮದ ಕಣ್ಣು | ಮ. ನ. ಮೂರ್ತಿ | 5 00 |
| ಚಿನ್ನದ ಹೂವು | ಪ್ರೇಮಲತಾ ಸುಂದರೇಶನ್ | 5 00 |
| ವಸುಮತಿ | ವಿಶಾಲಾಕ್ಷಿ ದಕ್ಷಿಣಾಮೂರ್ತಿ | 6 00 |
| ಎಡಕಲ್ಲು ಗುಡ್ಡದ ಮೇಲೆ | ಭಾರತೀಸುತ | 5 00 |
| ಹೆಣ್ಣಿನ ಹಂಬಲ | ನಿಡಿಗೇರ ಕೃಷ್ಣರಾಯ | 4 00 |
| ಬಯಲುದಾರಿ | ಭಾರತೀಸುತ | 10 00 |
| ಎಲ್ಲಾ ಅವನ ಹೆಸರಿನಲ್ಲೆ (೧) | ತ. ರಾ. ಸು | 4 00 |
| ಎಲ್ಲಾ ಅವನ ಹೆಸರಿನಲ್ಲೆ (೨) | ,, | 3 00 |
| ಅನುರಾಗ ಬಂಧನ | ಎ. ಪಂಕಜ | 4 00 |
| ಜೀವರಥ | ವಸಂತಾದೇವಿ ಅ. ನ. ಕೃ. | 3 00 |
| ಮಧುರಜಾಲ | ಉಷಾದೇವಿ | 4 00 |
| ಇಂದ್ರಿ–ಸುಂದ್ರಿ | ದಾಶರಥಿ ದೀಕ್ಷಿತ್ | 3 00 |
| ರಾಗಸುಧಾ | ಎ. ಪಂಕಜ | 4 00 |



